# ಚಿತ್ರಕಲಾವಿದ ಎಂ.ಬಿ.ಪಾಟೀಲ

## ಒಂದು ಅಧ್ಯಯನ

ಕನ್ನಡ ವಿಶ್ವವಿದ್ಯಾಲಯಕ್ಕೆ ಪಿಹೆಚ್.ಡಿ. ಪದವಿಗಾಗಿ ಸಾದರ





ಸಂಶೋಧಕ
ಎಸ್.ಎಸ್.ಗಡ್ಡಿ

ಮಾರ್ಗದರ್ಶಕರು
ಪ್ರೊ.ವ್ಹಿ.ಜಿ.ಹೀರೆಗೌಡರ



ಲಲಿತಕಲಾ ನಿಕಾಯ
ಶಿಲ್ಪ ಮತ್ತು ವರ್ಣಚಿತ್ರಕಲಾ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ಬನಶಂಕರಿ ಬದಾಮಿ

# ಚಿತ್ರಕಲಾವಿದ ಎಂ. ಬಿ. ಪಾಟೀಲ

## ಒಂದು ಅಧ್ಯಯನ

ಪಿಹೆಚ್.ಡಿ ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಾದರ ಪಡಿಸಿದ ಮಹಾಪ್ರಬಂಧ


ಸಂಶೋಧಕ

ಎಸ್. ಎಸ್. ಗಡ್ಡಿ

ಮಾರ್ಗದರ್ಶಕರು

ಪ್ರೊ : ವ್ಹಿ. ವಿ. ಹಿರೇಗೌಡರ

ನಿವೃತ್ತ ಪ್ರಾಂಶುಪಾಲರು, ದಾವಣಗೇರಿ





ಲಲಿತಕಲಾ ನಿಕಾಯ

ಶಿಲ್ಪ ಮತ್ತು ವರ್ಣ ಚಿತ್ರಕಲಾ ವಿಭಾಗ

ಕನ್ನಡ ವಿಶ್ವವಿದ್ಯಾಲಯ, ಹಂಪಿ

ಬನಶಂಕರಿ–ಬಾದಾಮಿ

# ಘೋಷಣಾ ಪತ್ರ

**ಚಿತ್ರಕಲಾವಿದ ಎಂ. ಬಿ. ಪಾಟೀಲ – ಒಂದು ಅಧ್ಯಯನ** ಎಂಬ ಶಿರ್ಷಿಕೆಯ ಮಹಾಪ್ರಬಂಧವನ್ನು ಪಿಎಚ್.ಡಿ ಪದವಿಗಾಗಿ **ಪ್ರೊ. ವ್ಹಿ. ಬಿ. ಹಿರೇಗೌಡರ** ಅವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿ ಕನ್ನಡ ವಿಶ್ವವಿದ್ಯಾಲಯದ ಶಿಲ್ಪ ಮತ್ತು ವರ್ಣಚಿತ್ರಕಲಾ ವಿಭಾಗದ ಮುಖ್ಯಸ್ಥರ ಮೂಲಕ ಲಲಿತಕಲಾ ನಿಕಾಯಕ್ಕೆ ಸಲ್ಲಿಸುತ್ತಿದ್ದೇನೆ.

ಪ್ರಸ್ತುತ ಮಹಾಪ್ರಬಂಧದ ಯಾವುದೇ ಭಾಗವನ್ನು ಇನ್ನಿತರ ಉದ್ದೇಶಗಳಿಗೆ ಬಳಸಿಕೊಂಡಿಲ್ಲ ಎಂದು ಪ್ರಮಾಣೀಕರಿಸುತ್ತೇನೆ.

(ಎಸ್. ಎಸ್. ಗಡ್ಡಿ)
ಶಿಲ್ಪ ಮತ್ತು ವರ್ಣಚಿತ್ರಕಲಾ ವಿಭಾಗ,
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ

ಸ್ಥಳ : ಬನಶಂಕರಿ–ಬಾದಾಮಿ

ದಿನಾಂಕ :

# ಪ್ರಮಾಣ ಪತ್ರ

**ಎಸ್. ಎಸ್. ಗಡ್ಡಿ** ಇವರು ನನ್ನ ಮಾರ್ಗದರ್ಶನದಲ್ಲಿ **ಚಿತ್ರಕಲಾವಿದ ಎಂ. ಬಿ. ಪಾಟೀಲ – ಒಂದು ಅಧ್ಯಯನ** ಎಂಬ ಶಿರ್ಷಿಕೆಯ ಮಹಾಪ್ರಬಂಧವನ್ನು ಪಿಎಚ್.ಡಿ ಪದವಿಗಾಗಿ ಸಿದ್ಧಪಡಿಸಿದ್ದು, ಕನ್ನಡ ವಿಶ್ವವಿದ್ಯಾಲಯದ ಲಲಿತಕಲಾ ನಿಕಾಯದ ಶಿಲ್ಪ ಮತ್ತು ವರ್ಣ ಚಿತ್ರಕಲಾ ವಿಭಾಗಕ್ಕೆ ಸಲ್ಲಿಸುತ್ತಿದ್ದಾರೆ.

ಸದರಿ ಮಹಾಪ್ರಬಂಧವು ಮೂಲ ಸಂಶೋಧನ ಕೃತಿಯಾಗಿದ್ದು ಇದರ ಯಾವುದೇ ಭಾಗ ಮತ್ತು ವಿಷಯವನ್ನು ಯಾವುದೇ ಉದ್ದೇಶಕ್ಕೆ ಬಳಸಿಕೊಂಡಿಲ್ಲ ಮತ್ತು ಈ ಮೊದಲು ಎಲ್ಲಿಯೂ ಪ್ರಕಟಗೊಂಡಿಲ್ಲವೆಂದು ಈ ಮೂಲಕ ದೃಢೀಕರಿಸುತ್ತೇನೆ.

**ಪ್ರೊ. ವ್ಹಿ. ಬಿ. ಹಿರೇಗೌಡರ**
ನಿವೃತ್ತ ಪ್ರಾಂಶುಪಾಲರು
ದಾವಣಗೇರಿ

ಸ್ಥಳ : ವಿದ್ಯಾರಣ್ಯ

ದಿನಾಂಕ :

# <u>ಪ್ರಮಾಣ ಪತ್ರ</u>

ಎಸ್. ಎಸ್. ಗಡ್ಡಿ ಇವರು ಪ್ರೊ. ವ್ಹಿ. ಬಿ. ಹಿರೇಗೌಡರ ಮಾರ್ಗದರ್ಶನದಲ್ಲಿ ಚಿತ್ರಕಲಾವಿದ ಎಂ. ಬಿ. ಪಾಟೀಲ – ಒಂದು ಅಧ್ಯಯನ ಎಂಬ ಶಿರ್ಷಿಕೆಯ ಮಹಾಪ್ರಬಂಧವನ್ನು ಪಿಎಚ್.ಡಿ ಪದವಿಗಾಗಿ ಸಿದ್ಧಪಡಿಸಿದ್ದಾರೆ. ಪ್ರಸ್ತುತ ಮಹಾಪ್ರಬಂಧವನ್ನು ಕನ್ನಡ ವಿಶ್ವವಿದ್ಯಾಲಯದ ಲಲಿತಕಲಾ ನಿಕಾಯದ ಶಿಲ್ಪ ಮತ್ತು ವರ್ಣ ಚಿತ್ರಕಲಾ ವಿಭಾಗದ ಮುಖ್ಯಸ್ಥರ ಮೂಲಕ ಸಲ್ಲಿಸುತ್ತಿದ್ದಾರೆ.

ಸ್ಥಳ : ವಿದ್ಯಾರಣ್ಯ

ದಿನಾಂಕ :

# ಪರಿವಿಡಿ

ಆದಿಮಾನವ ಕಾಲದಿಂದಲೇ ಚಿತ್ರಕಲೆ ಮಾನವನ ಬದುಕಿನ ಭಾಗವಾಗಿ, ವೈವಿಧ್ಯಮಯವಾಗಿ ಬೆಳೆದುಬಂದ ಸಂಗತಿ ತಿಳಿದುಬರುತ್ತದೆ. ಕಲಾಪ್ರಕಾರಗಳ ಅಧ್ಯಯನದಲ್ಲಿ ಅವುಗಳನ್ನು ರಚನೆಮಾಡುವ ಕಲಾವಿದನ ಬದುಕು ಮತ್ತು ಆತನ ಕೃತಿಗಳ ಬಗ್ಗೆ ವಿಶ್ಲೇಷಣೆ ಮಾಡುವುದು ತುಂಬಾ ಮಹತ್ವದ್ದಾಗಿದೆ. ಕಲೆ ಮಾನವನ ಆಂತರಿಕ ಅಭಿವ್ಯಕ್ತಿಯಾದರೂ ಆತನ ಬಾಹ್ಯ ಚಟುವಟಿಕೆಗಳನ್ನು ಮೌಲಿಕರಿಸುವ ಸತ್ವಹೊಂದಿದೆ.[೧] ಕಲಾಕೃತಿ ರಚನೆಯಲ್ಲಿ ಸಹಜವಾಗಿರುವ ಕಲಾ ಅಂಶಗಳ ಜೊತೆಗೆ ಕಲಾವಿದನು ರೂಪಿಸಿಕೊಂಡಿರುವ ಬದುಕಿನ ಮೌಲ್ಯಗಳೂ[೨] ಸೇರಿಕೊಂಡಿರುತ್ತವೆ. ಹಾಗಾಗಿ ಕಲಾ ಅಧ್ಯಯನದಲ್ಲಿ ಕಲೆಯ ತಾಂತ್ರಿಕ ಅಂಶಗಳ ಬಗ್ಗೆ ವಿಶ್ಲೇಷಿಸುವ ಜೊತೆಗೆ ಕೃತಿರಚನೆಯ ಹಿಂದಿರುವ ಕಲಾವಿದನ ಭಾವನಾತ್ಮಕ ನಿಲುವುಗಳನ್ನು ತಿಳಿದುಕೊಳ್ಳುವುದೂ ಅಷ್ಟೇ ಪ್ರಮುಖವಾದ ಸಂಗತಿಯಾಗಿದೆ.

ಕಲಾವಿದರ ಕುರಿತು ಕೈಗೊಳ್ಳುವ ಅಧ್ಯಯನದಲ್ಲಿ ಕೃತಿ ರಚನೆಯ ಹಿಂದಿರುವ ಆಶಯಗಳ ಜೊತೆಗೆ ಕಲಾವಿದರ ಮನಸ್ಥಿತಿ, ಅಂದಿನ ಸಂದರ್ಭ, ಪರಿಸರ, ಸಾಮಾಜಿಕ ನಿಲುವುಗಳಂತಹ ಅಂಶಗಳು ಅವರ ಕಲಾಕೃತಿಯಲ್ಲಿ ಹೇಗೆ ಪ್ರಭಾವ ಬೀರಿವೆ ಎನ್ನುವ ಸಂಗತಿಗಳನ್ನು ಅಧ್ಯಯನಕ್ಕೊಳಪಡಿಸಿದಾಗ ಕಲಾವಿದರ ಬಗೆಗಿನ ಅಧ್ಯಯನಕ್ಕೆ ಮೌಲಿಕತೆ

---

೧. ಡಾ. ಎಸ್. ಸಿ. ಪಾಟೀಲ : ವರ್ಣಸಂಚಯ : ಪುಟ-೨೬
೨. ಡಾ. ಯಾದಪ್ಪ. ಪರದೇಶಿ : ಉತ್ತರ ಕರ್ನಾಟಕದ ಭಿತ್ತಿ ಚಿತ್ರಕಲೆ : ಪುಟ-೩೫

ಉಂಟಾಗುತ್ತದೆ.[೩] ಇವುಗಳ ಜೊತೆಗೆ ಕಲಾವಿದರು ರಚಿಸಿದ ಎಲ್ಲ ಕಲಾಕೃತಿಗಳನ್ನು ಕಾಲಾನುಕ್ರಮದಲ್ಲಿ ವಿಂಗಡಿಸಿ ಅಧ್ಯಯನ ಮಾಡುವುದರಿಂದ ವಯೋಮಾನಕ್ಕನುಸಾರವಾಗಿ ಕಲಾವಿದರ ಮನೋಸ್ಥಿತಿಗಳಲ್ಲಿ ಉಂಟಾದ ಬದಲಾವಣೆಗಳು ಅವರ ಕೃತಿಗಳಲ್ಲಿ ಹೇಗೆ ಅನಾವರಣಗೊಂಡಿವೆ. ಎಂಬಂತಹ ಸಂಗತಿಗಳನ್ನು ತಿಳಿದುಕೊಳ್ಳಬಹುದಾಗಿದೆ.[೪] ಈ ಹಿನ್ನೆಲೆಯಲ್ಲಿಯೇ ಪ್ರಸ್ತುತ ಅಧ್ಯಯನವು ರೂಪುಗೊಂಡಿದೆ.

ಯಾವುದೇ ನಾಡಿನ ಹಿರಿಮೆಯನ್ನು ಅದರ ಸಾಂಸ್ಕೃತಿಕ ಸಾಧನೆಗಳಿಂದ ಪರಿಗಣಿಸಲಾಗುತ್ತದೆ. ಅದರಲ್ಲೂ ಲಲಿತಕಲೆಗಳು ಆ ಪ್ರದೇಶದ ಸಂಸ್ಕೃತಿಯನ್ನು ಪ್ರತಿನಿಧಿಸುವಲ್ಲಿ ಅಗ್ರಗಣ್ಯವಾಗಿವೆ.[೫] ಲಲಿತಕಲೆಗಳಲ್ಲಿ ಮತ್ತೆ ಶಿಲ್ಪ ಚಿತ್ರಗಳು ವಿಶಿಷ್ಟವಾಗಿದ್ದು ಆ ನಾಡಿನ ಜನರ ನಾಗರಿಕ ಬದುಕಿನ ಸೌಂದರ್ಯವನ್ನು ಪ್ರತಿಬಿಂಬಿಸುತ್ತವೆ. ಶಿಲ್ಪ ಚಿತ್ರಗಳಂತಹ ಕಲಾ ಪ್ರಕಾರಗಳಲ್ಲಿ ಅವುಗಳನ್ನು ನಿರ್ಮಿಸಿದ ಕಲಾವಿದರು ತಮ್ಮ ವಿಶಿಷ್ಟ ರಚನಾ ವಿಧಾನಗಳಿಂದ ಜನಸಮುದಾಯದಲ್ಲಿ ಮನ್ನಣೆಗೆ ಒಳಗಾಗಿರುವುದು ಎಲ್ಲ ಕಾಲಗಳಲ್ಲಿ ಕಂಡುಬರುತ್ತದೆ.[೬] ಇದಕ್ಕೆ ಕಲಾವಿದರು ಅನುಸರಿಸಿಕೊಂಡು ಬಂದಿರುವ ಸಾಮಾಜಿಕ ಬದ್ಧತೆಗಳು ಬಹುಮಟ್ಟಿಗೆ ಕಾರಣವಾಗಿರುವುದು ತಿಳಿದುಬರುತ್ತದೆ.

ಕಲಾವಿದರ ವಿಶಿಷ್ಟ ಕೊಡುಗೆಗಳಿಂದ ನಾಡಿನ ಸಾಂಸ್ಕೃತಿಕ ಸಂಪತ್ತು ವೃದ್ಧಿಯಾಗುವುದರ ಜೊತೆಗೆ ಸಾಮಾಜಿಕ, ಧಾರ್ಮಿಕ, ರಾಜಕೀಯ, ಜೀವನ ವಿಧಾನಗಳಲ್ಲಿ ಚಲನಶೀಲತೆ ಕಂಡು ಬರುತ್ತದೆ.[೭] ಹಾಗಾಗಿಯೇ ಕಲೆ ಹಾಗೂ ಕಲಾವಿದರ ಕುರಿತಾಗಿರುವ ಅಧ್ಯಯನಗಳು ಇತ್ತೀಚೆಗೆ ಹೆಚ್ಚು ಮಹತ್ವ ಪಡೆದುಕೊಂಡಿವೆ ಎಂದು ಹೇಳಲಾಗುತ್ತದೆ.

ಕರ್ನಾಟಕವು ಕಲಾ ಕ್ಷೇತ್ರದಲ್ಲಿ ಭಾರತ ಮಾತ್ರವಲ್ಲದೆ, ಜಾಗತಿಕ ಮಟ್ಟದಲ್ಲಿ ಹೆಸರು ಮಾಡಿರುವುದಕ್ಕೆ ಇಲ್ಲಿನ ಕಲಾವಿದರ ಗಮನಾರ್ಹ ಕೊಡುಗೆಗಳು ಕಾರಣವಾಗಿವೆ[೮] ಎಂದರೆ ತಪ್ಪಲ್ಲ. ಶಿಲ್ಪ ಚಿತ್ರಕಲೆಗಳಲ್ಲಿ ಕರ್ನಾಟಕವು ಪ್ರಾಚೀನ ಕಾಲದಿಂದಲೇ ಬಹುದೊಡ್ಡ ಕೊಡುಗೆಗಳನ್ನು ಇಲ್ಲಿನ ಕಲಾವಿದರ ಮೂಲಕ ನಾಡಿಗೆ ನೀಡುತ್ತ ಬಂದಿದೆ. ಚಿತ್ರಕಲಾ ಪ್ರಕಾರದಲ್ಲಿ ಹಲವಾರು ಜನ ಕಲಾವಿದರು ತಮ್ಮ ವಿಶಿಷ್ಟ ಕೊಡುಗೆಗಳ ಮೂಲಕ ಕರ್ನಾಟಕದ ಹಿರಿಮೆಯನ್ನು ಅಂತರಾಷ್ಟ್ರೀಯ ಮಟ್ಟದಲ್ಲಿ ಬೆಳಗುತ್ತಿರುವುದು ಕಂಡು ಬರುತ್ತದೆ. ಕೆ.ಕೆ.ಹೆಬ್ಬಾರ, ಎಸ್.ಎಂ. ಪಂಡಿತ, ಆರ್.ಎಂ. ಹಡಪದ, ಎಂ.ಎ.ಚಟ್ಟಿ ಅವರಂತಹ ಹತ್ತು ಹಲವು ಕಲಾವಿದರು

---

೩. ಡಾ. ಯಾದವಪ್ಪ. ಪರದೇಶಿ : ಉತ್ತರ ಕರ್ನಾಟಕದ ಭಿತ್ತಿ ಚಿತ್ರಕಲೆ : ಪುಟ-೧೨.
೪. ಡಾ. ಎಸ್. ಸಿ. ಪಾಟೀಲ : ಸಾಧನೆಯ ಸಮುಚ್ಚಯ ಶಿವಲಿಂಗಪ್ಪ : ಪುಟ-೧೮
೫. ಡಾ. ಎಸ್. ಸಿ. ಪಾಟೀಲ : ವರ್ಣಸಂಚಯ : ಪುಟ-೭೫
೬. ಡಾ. ಎಸ್. ಸಿ. ಪಾಟೀಲ : ಕರ್ನಾಟಕದ ಜನಪದ ಚಿತ್ರಕಲೆ : ಪುಟ-೧೮
೭. ಡಾ. ಎಸ್. ಸಿ. ಪಾಟೀಲ : ಚಿತ್ರಕಲೆ ಮತ್ತು ಪೂರಕ ಕ್ಷೇತ್ರಗಳು : ಪುಟ-೨೬
೮. ತಿಪ್ಪೇರುದ್ರಸ್ವಾಮಿ : ಕರ್ನಾಟಕದ ಸಂಸ್ಕೃತಿ ಸಮೀಕ್ಷೆ : ಪುಟ-೧೨೬

ಚಿತ್ರಕಲೆಯಲ್ಲಿ ತಮ್ಮದೇ ಛಾಪು ಮೂಡಿಸಿದರಾಗಿದ್ದಾರೆ. ಹೀಗೆ ಕರ್ನಾಟಕದಲ್ಲಿ ತಮ್ಮ ವಿಶಿಷ್ಟ ರಚನಾ ಶೈಲಿಯಿಂದ ಪ್ರಖ್ಯಾತರಾದ ಪ್ರಮುಖ ಕಲಾವಿದರಲ್ಲಿ ಶ್ರೀ ಎಂ.ಬಿ.ಪಾಟೀಲ ಅವರು ಸಹಿತ ಒಬ್ಬರಾಗಿದ್ದು ಅವರ ಕಲೆ ಮತ್ತು ಕಲಾ ಬದುಕನ್ನು ಕುರಿತು ಅಧ್ಯಯನ ಮಾಡುವ ಉದ್ದೇಶವನ್ನು ಪ್ರಸ್ತುತ ಪ್ರಬಂಧ ಹೊಂದಿದೆ.

ಸ್ವಾತಂತ್ರ್ಯ ಪೂರ್ವ ಮತ್ತು ಸ್ವಾತಂತ್ರ್ಯ ನಂತರದ ಕೆಲವು ದಿನಗಳಲ್ಲಿ ಕರ್ನಾಟಕದ ಬಹುಮಟ್ಟಿನ ಕಲಾವಿದರು ಮುಂಬೈನಲ್ಲಿ ಕಲಾಶಿಕ್ಷಣವನ್ನು ಪಡೆದುಕೊಂಡು ಬಂದವರಾಗಿದ್ದು, ಅಂತಹ ಕಲಾವಿದರಲ್ಲಿ ಎಂ.ಬಿ.ಪಾಟೀಲರೂ ಒಬ್ಬರಾಗಿದ್ದಾರೆ. ಮುಂಬೈನಲ್ಲಿ ಕಲಾ ಶಿಕ್ಷಣ ಪಡೆದುಕೊಂಡ ಕಲಾವಿದರಲ್ಲಿ ಕೆಲವರು ಅಂದಿನ ದಿನಗಳಲ್ಲಿ ಪ್ರಚಲಿತದಲ್ಲಿದ್ದ ಮುಂಬೈ ಶೈಲಿಯೆಂದೇ ಗುರುತಿಸಿಕೊಂಡಿದ್ದ ಅಕಾಡಮಿಕ್ ಶೈಲಿಯಲ್ಲಿ ಚಿತ್ರರಚನೆ ಮಾಡುತ್ತ ತಮ್ಮ ಕಲಾಬದುಕನ್ನು ರೂಪಿಸಿ ಕೊಂಡಿದ್ದಾರೆ.[೯]

ಆದರೆ ಮತ್ತೆ ಕೆಲವು ಕಲಾವಿದರು ಮುಂಬೈನಲ್ಲಿ ಕಲಾಶಿಕ್ಷಣ ಪಡೆದವರಾಗಿದ್ದು, ಅಕಾಡಮಿಕ್ ಶೈಲಿಯಲ್ಲಿ ತರಬೇತಿಯನ್ನು ಪಡೆದುಕೊಂಡರೂ ನಂತರದ ದಿನಗಳಲ್ಲಿ ಪಾಶ್ಚಾತ್ಯ ಪ್ರಭಾವದಿಂದ ಪ್ರೇರಿತರಾಗಿ ಹೊಸತನಕ್ಕೆ ತಮ್ಮನ್ನು ತೆರೆದುಕೊಂಡಿದ್ದಾರೆ.[೧೦] ಮಾತ್ರವಲ್ಲದೆ ಮೂರ್ತ, ಅಮೂರ್ತ ಚಿತ್ರಶೈಲಿಗಳ ಸಂಯೋಜನೆ ಮತ್ತು ಸ್ಥಳೀಯ ಗುಣಲಕ್ಷಣಗಳಿಂದ ತಮ್ಮದೇ ಆದ ವಿಶಿಷ್ಟ ಚಿತ್ರಶೈಲಿಯನ್ನು ರೂಪಿಸಿ ಕೊಂಡಿದ್ದಾರೆ. ಅಂತಹ ವಿಶಿಷ್ಟ ಚಿತ್ರಶೈಲಿಯ ಕಲಾವಿದರಲ್ಲಿ ಎಂ.ಬಿ.ಪಾಟೀಲರು ಅಗ್ರಗಣ್ಯರಾಗಿದ್ದಾರೆ.

ಕರ್ನಾಟಕದ ಚಿತ್ರಕಲಾ ಕ್ಷೇತ್ರವನ್ನು ಶ್ರೀಮಂತಗೊಳಿಸಿದ ಪ್ರಮುಖ ಕಲಾವಿದರಲ್ಲಿ ಒಬ್ಬರಾದ ಎಂ.ಬಿ.ಪಾಟೀಲರು ಬಿಜಾಪುರ ಜಿಲ್ಲೆಯ ತಿಕೋಟಾದಲ್ಲಿ ಹುಟ್ಟಿದ್ದಾರೆ. ಈ ಪ್ರದೇಶವು ಮೊದಲಿನಿಂದಲೂ ವಿವಿಧ ರಾಜ ಮನೆತನಗಳ ಆಳ್ವಿಕೆಗೆ ಒಳಪಟ್ಟು, ವಿಭಿನ್ನ ಸಂಸ್ಕೃತಿಯನ್ನು ರೂಪಿಸಿಕೊಂಡಿದೆ. ಅದಕ್ಕನುಸಾರವಾಗಿಯೇ ಈ ಪ್ರದೇಶದ ಕಲೆಗಳು ವಿಭಿನ್ನವಾಗಿ ರಚನೆಯಾಗಿವೆ. ಹಿಂದೂ, ಮುಸ್ಲಿಂ ಮತ್ತು ಮರಾಠ ಪ್ರಭಾವಗಳಿಂದ ಪ್ರೇರಿತವಾದ ಚಿತ್ರಕಲಾ ಪ್ರಕಾರವು ಈ ಪ್ರದೇಶದಲ್ಲಿ ಪಚಲಿತದಲ್ಲಿದ್ದು,[೧೧] ಪಾಟೀಲರ ಕಲಾ ಬದುಕಿನ ಮೇಲೆ ಇವು ಪರೋಕ್ಷವಾಗಿ ಪ್ರಭಾವ ಬೀರಿರುವುದು ಅವರ ಕೃತಿಗಳಿಂದ ತಿಳಿದು ಬರುತ್ತದೆ. ಇಂತಹ ಅಂಶಗಳ ಬಗ್ಗೆ ವಿಶ್ಲೇಷಣೆ ಮಾಡುವ ಉದ್ದೇಶವನ್ನು ಈ ಅಧ್ಯಯನದಲ್ಲಿ ಹೊಂದಲಾಗಿದೆ.

---

೯. ಡಾ. ಲಕ್ಷ್ಮೀದೇವಿ ಗವಾಯಿ : ಕಲಾವಿದ ಎಂ. ಎ. ಚೆಟ್ಟಿ ಕಲೆ ಮತ್ತು ಬದುಕು : ಪುಟ-೧೮.
೧೦. ಸುರೇಖಾ ಪಾಟೀಲ : ಕಲಾವಿದ ಎಂ. ಬಿ. ಪಾಟೀಲ : ಪುಟ-೨೫
೧೧. ಡಾ. ವ್ಹಿ. ಎಂ. ಬಾಗಾಯತ್ : ಕರ್ನಾಟಕದ ಮುಸ್ಲಿಂ ಅರಸರ ಕಾಲದ ಚಿತ್ರಕಲೆ : ಪುಟ-೧೧೦

ಕಲಾವಿದ ಎಂ.ಬಿ.ಪಾಟೀಲರು ಬಾಲ್ಯದಿಂದಲೇ ಕಲೆಯ ಗೀಳನ್ನು ಅಂಟಿಸಿಕೊಂಡವರು. ಹಬ್ಬ ಹರಿದಿನಗಳಲ್ಲಿ, ಜಾತ್ರೆ ಉತ್ಸವಗಳಲ್ಲಿ, ಮದುವೆ ಮುಂಜಿವೆಯಂತಹ ಶುಭ ಸಮಾರಂಭಗಳಲ್ಲಿ ಊರಿನಲ್ಲಿ ರಚಿಸಲಾಗುತ್ತಿದ್ದ ಜನಪದ ಚಿತ್ರಕಲಾ ಪ್ರಕಾರಗಳು ಇವರ ಬಾಲ್ಯದ ಬದುಕಿನಲ್ಲಿ ಅಚ್ಚಳಿಯದ ಪ್ರಭಾವ ಬೀರುವ ಮೂಲಕ ಮುಂದೆ ಇವರೊಬ್ಬ ಶ್ರೇಷ್ಠ ಕಲಾವಿದರಾಗಿ ರೂಪುಗೊಳ್ಳಲು ಅಡಿಪಾಯ ಹಾಕಿಕೊಟ್ಟಿವೆ.[೧೨] ಸ್ಥಳೀಯವಾಗಿರುವ ಈ ಜನಪದ ಕಲಾ ಪ್ರಕಾರಗಳು ಯಾವರೀತಿಯ ಪ್ರಭಾವವನ್ನು ಇವರ ಮೇಲೆ ಉಂಟು ಮಾಡಿವೆ ಎಂಬುದನ್ನು ತಿಳಿದುಕೊಳ್ಳುವ ಉದ್ದೇಶ ಈ ಅಧ್ಯಯನದಲ್ಲಿದೆ.

ಪ್ರಾಥಮಿಕ ಮತ್ತು ಮಾಧ್ಯಮಿಕ ಹಂತದ ಶಿಕ್ಷಣದಲ್ಲಿ ಸಹಿತ ಪಾಟೀಲರ ಕಲಾ ಆಸಕ್ತಿ ವಿಶೇಷವಾಗಿತ್ತು. ಕಲೆಯನ್ನು ಅಭಿವೃದ್ಧಿ ಪಡಿಸಿಕೊಳ್ಳಬೇಕೆಂಬ ಇವರ ಒಳಮನಸ್ಸಿನ ತುಡಿತಗಳಿಗೆ ಅಲ್ಲಿನ ಕಲಾಶಿಕ್ಷಕರು ಸ್ಪಂದಿಸುವ ಮೂಲಕ ಅವರಲ್ಲಿನ ಚಿತ್ರಕಲಾ ಸಸಿಯನ್ನು ನೀರೆರೆದು ಪೋಷಿಸಿದರು.[೧೩] ಪ್ರಾಥಮಿಕ ಮತ್ತು ಪ್ರೌಢಶಾಲಾ ಹಂತದ ಶಿಕ್ಷಕರು ಪಾಟೀಲರ ಕಲಾ ಬದುಕು ರೂಪುಗೊಳ್ಳಲು ಹೇಗೆ ಪ್ರೇರಣೆ ನೀಡಿದರು ಎಂಬಂತಹ ಸಂಗತಿಗಳನ್ನು ಇಲ್ಲಿ ಅಧ್ಯಯನಕ್ಕೊಳಪಡಿಸುವ ಉದ್ದೇಶವಿದೆ.

ಹೆಚ್ಚಿನ ಕಲಾ ಶಿಕ್ಷಣಕ್ಕಾಗಿ ಪಾಟೀಲರು ಮುಂಬೈಗೆ ತೆರಳಿದರು. ಜೆ.ಜೆ. ಕಲಾಶಾಲೆಯು ಅಂದಿನ ದಿನಗಳಲ್ಲಿ ಪ್ರಖ್ಯಾತಿಯನ್ನು ಪಡೆದಿದ್ದರೂ, ಕರ್ನಾಟಕದವರಾದ ದಂಡಾವತಿಮಠ ಅವರು ಪ್ರಿನ್ಸಿಪಾಲರಾಗಿದ್ದ ನೂತನ ಕಲಾಶಾಲೆಯು ಅದಕ್ಕೆ ಪ್ರತಿಸ್ಪರ್ಧಿಯಾಗಿ ಕಾರ್ಯನಿರ್ವಹಿಸುತ್ತಲಿತ್ತು. ಮಾತ್ರವಲ್ಲದೆ ಕರ್ನಾಟಕದ ಬಡವಿದ್ಯಾರ್ಥಿಗಳಿಗೆ ಕಲಾ ನೆಲೆಯಾಗಿ ಕೆಲಸ ಮಾಡುತ್ತಿತ್ತು.[೧೪] ಇಂತಹ ನೂತನ ಕಲಾಶಾಲೆಯಲ್ಲಿ ಎಂ.ಬಿ.ಪಾಟೀಲರು ಕಲಾ ಶಿಕ್ಷಣಕ್ಕಾಗಿ ಸೇರಿಕೊಂಡರು. ಇಲ್ಲಿ ಅವರ ಕಲಾ ಅಧ್ಯಯನದ ಸ್ವರೂಪ ಹೇಗಿತ್ತು ಎಂಬುದನ್ನು ವಿವೇಚಿಸುವ ಉದ್ದೇಶ ಹೊಂದಲಾಗಿದೆ.

ಎಂ.ಬಿ.ಪಾಟೀಲರು ಮುಂಬೈನಲ್ಲಿ ಕಲಾಶಿಕ್ಷಣ ಪಡೆಯುವಲ್ಲಿ ಹಲವಾರು ಬಗೆಯ ಘಟನಾವಳಿಗಳು ನಡೆಯುವ ಮೂಲಕ ಅವರ ವೈಯಕ್ತಿಕ ಜೀವನದಲ್ಲಿ ಪರಿವರ್ತನೆಗಳನ್ನುಂಟುಮಾಡಿವೆ.[೧೫] ಆ ಸಂಗತಿಗಳು ಹಾಗೂ ಅದರಿಂದುಂಟಾದ ಪರಿಣಾಮಗಳನ್ನು ಇಲ್ಲಿ ಗಮನಿಸಲಾಗುವುದು. ಪಾಟೀಲರು ನೂತನ ಕಲಾಶಾಲೆಯ ವಿದ್ಯಾರ್ಥಿ

---

೧೨. ಬಿ. ಎಸ್. ವೆಂಕಟಲಕ್ಷ್ಮೀ : ಎಂ. ಬಿ. ಪಾಟೀಲ : ಪುಟ-೧೨.
೧೩. ಸ್ವಪ್ನಾ ಎಂ. ಪಾಟೀಲ : ಕಲಾವಿದ ಎಂ. ಬಿ. ಪಾಟೀಲ : ಪುಟ-೨೦
೧೪. ಲಕ್ಷ್ಮೀದೇವಿ ಗವಾಯಿ : ಎಂ. ಎ. ಚಟ್ಟಿ ಕಲೆ ಮತ್ತು ಬದುಕು : ಪುಟ-೨೯
೧೫. ಅಮರೇಶ. ಕುಂಬಾರ : ಭಾವಚಿತ್ರ ಕುಂಚ ಬ್ರಹ್ಮ ಎಂ. ಬಿ. ಪಾಟೀಲ : ಪುಟ-೧೮

ಯಾಗಿದ್ದರೂ ಜೆ. ಜೆ. ಕಲಾಶಾಲೆಯ ಕಲಾಚಟುವಟಿಕೆಗಳು, ಹಾಗೂ ಅಲ್ಲಿನ ಕಲಾಶೈಲಿಯ ಬಗ್ಗೆ ಸೂಕ್ಷ್ಮವಾಗಿ ಅವಲೋಕಿಸುವ ಪ್ರವೃತ್ತಿ ಹೊಂದಿದ್ದರು. ಮುಂಬೈನ ಜೀವನ ವಿಧಾನ ಇವರಲ್ಲಿ ಸಾಕಷ್ಟು ಬದಲಾವಣೆಯನ್ನು ಉಂಟುಮಾಡಿತು. ಆದರೆ ಈ ಬದಲಾವಣೆ ಬಾಹ್ಯಬದುಕಿನ ಚಟುವಟಿಕೆಗಳಿಗೆ ಸೀಮಿತವಾಗಿತ್ತೇ ವಿನಹ ಅವರ ಗ್ರಾಮೀಣ ಮೂಲ ಮಣ್ಣಿನ ಸೊಗಡಿನ ವಿಚಾರಗಳನ್ನು ಕಿಂಚಿತ್ತೂ ಅಲುಗಾಡಿಸಿದಂತೆ ತೋರುವುದಿಲ್ಲ.[೧೬] ಈ ಅಂಶ ಅವರ ಕಲಾಕೃತಿಗಳಲ್ಲಿ ಸ್ಪಷ್ಟವಾಗಿ ಕಂಡುಬರುತ್ತದೆ. ಮುಂದೆ ಅವರು ಕಲಾಶಿಕ್ಷಣ ಪೂರೈಸಿ ಕರ್ನಾಟಕಕ್ಕೆ ಬಂದಾಗ ಅವರ ಕೆಲವು ಕೃತಿಗಳಲ್ಲಿ ಮುಂಬೈನಗರ ಜೀವನದ ಸೆಳಕುಗಳನ್ನು ಸಾಂಕೇತಿಕವಾಗಿ ಅನಾವರಣಗೊಳಿಸಿರುವುದು ಕಂಡು ಬರುತ್ತದೆ. ಇಂತಹ ಹತ್ತು ಹಲವು ಸಂಗತಿಗಳನ್ನು ಅಧ್ಯಯನಕ್ಕೊಳಪಡಿಸುವ ಪ್ರಮುಖ ಉದ್ದೇಶ ಈ ಅಧ್ಯಯನದಲ್ಲಿದೆ.

ಎಂ.ಬಿ.ಪಾಟೀಲರು ವಾರ್ತಾ ಮತ್ತು ಪ್ರಚಾರ ಇಲಾಖೆಯಲ್ಲಿ ಕಲಾವಿದನ ಹುದ್ದೆಯಲ್ಲಿ ಕೆಲಸ ನಿರ್ವಹಿಸತೊಡಗಿದಾಗ ಅಲ್ಲಿ ರಚಿಸುವ ಚಿತ್ರಗಳ ಸ್ವರೂಪ ಭಿನ್ನವಾಗಿತ್ತು. ವ್ಯಂಗ್ಯಚಿತ್ರ ಮಾದರಿಯಲ್ಲಿ ಸರ್ಕಾರದ ಸಾಧನೆ ಮತ್ತು ಸೂಚನೆಗಳನ್ನು ಜನಸಾಮಾನ್ಯರಿಗೆ ತಿಳಿಸುವ ಕೆಲಸವನ್ನು ನಿರಂತರವಾಗಿ ಮಾಡತೊಡಗಿದರು. ಈ ವೃತ್ತಿಯ ನಡುವೆ ಅವರು ತಮ್ಮಲ್ಲಿನ ಶುದ್ಧಕಲೆಯ ಆಸಕ್ತಿಯನ್ನು ಕಳೆದುಕೊಳ್ಳದೆ ಪ್ರಬುದ್ಧತೆಯಿಂದ ಕೃತಿರಚಿಸುವ ಮೂಲಕ ನಾಡಿನೆಲ್ಲೆಡೆ ಪ್ರಸಿದ್ಧಿಯನ್ನು ಪಡೆದುಕೊಂಡರು. ಜೊತೆಗೆ ನಿರಂತರವಾಗಿ ತಮ್ಮ ಕೃತಿಗಳ ಪ್ರದರ್ಶನಗಳನ್ನು ಏರ್ಪಡಿಸುವ ಮೂಲಕ ಜನಮಾನಸದಲ್ಲಿ ವಿಶಿಷ್ಟ ಸ್ಥಾನ ಪಡೆದುಕೊಂಡರು.[೧೭] ಇಂತಹ ಹತ್ತು ಹಲವು ಕುತೂಹಲಕರ ಸಂಗತಿಗಳ ಬಗ್ಗೆ ತಿಳಿದುಕೊಳ್ಳುವ ಉದ್ದೇಶವನ್ನು ಇಲ್ಲಿ ಹೊಂದಲಾಗಿದೆ.

ಕಲಾಕೃತಿ ರಚನೆಯಲ್ಲಿ ಪಾಟೀಲರು ವೈವಿಧ್ಯತೆಯನ್ನು ಮೈಗೂಡಿಸಿ ಕೊಂಡಿದ್ದಾರೆ. ರೇಖಾಚಿತ್ರಗಳು, ವರ್ಣಚಿತ್ರಗಳು, ಅದರಲ್ಲಿ ಜಲವರ್ಣ, ತೈಲವರ್ಣ, ಅಕ್ರಾಲಿಕ್, ಮಿಶ್ರವರ್ಣ ಚಿತ್ರಗಳು, ಭಾವಚಿತ್ರಗಳು, ವ್ಯಕ್ತಿಚಿತ್ರಗಳು, ನಿಸರ್ಗಚಿತ್ರಗಳು, ಸ್ಟಿಲ್ ಲೈಫ್ ಚಿತ್ರಗಳು, ಸಂಯೋಜನಾ ಚಿತ್ರಗಳು, ಅಮೂರ್ತ ಚಿತ್ರಗಳು, ನಗರ ಹಾಗೂ ಹಳ್ಳಿಯ ಚಿತ್ರಗಳು ಹೀಗೆ ಹಲವಾರು ಬಗೆಯ ಕಲಾಕೃತಿಗಳು ಇವರಿಂದ ರಚನೆಯಾಗಿವೆ. ಇವುಗಳ ಜೊತೆಗೆ ವುಡ್ ಬರ್ನಿಂಗ್ ಮತ್ತು ವ್ಯಂಗ್ಯ ಚಿತ್ರಗಳನ್ನು ಸಹಿತ ಇವರು ರಚನೆ ಮಾಡಿದ್ದಾರೆ. ಈ ಎಲ್ಲ ಬಗೆಯ ಕಲಾಕೃತಿಗಳನ್ನು ವಿಶ್ಲೇಷಣೆಗೊಳಪಡಿಸುವ ಉದ್ದೇಶವನ್ನು ಇಲ್ಲಿ ಹೊಂದಲಾಗಿದೆ.

---

೧೬. ಬಿ. ಎಸ್. ವೆಂಕಟಲಕ್ಷ್ಮೀ : ಎಂ. ಬಿ. ಪಾಟೀಲ : ಪುಟ-೨೮.
೧೭. ಸುರೇಖಾ ಪಾಟೀಲ : ಕಲಾವಿದ ಎಂ. ಬಿ. ಪಾಟೀಲ : ಪುಟ-೧೪

ಕಲಾವಿದರಿಗೆ ತಮ್ಮ ಸುತ್ತಲಿನ ಪರಿಸರ, ಬೆಳೆದ ಸಂಸ್ಕೃತಿ, ಪ್ರಭಾವ ಬೀರಿದ ಘಟನಾವಳಿಗಳು ಕೃತಿರಚನೆಗೆ ಪ್ರೇರಣೆ ಒದಗಿಸುತ್ತವೆ.[೧೮] ಎಂ.ಬಿ.ಪಾಟೀಲರು ತಾವು ಬೆಳೆದ ಗ್ರಾಮೀಣ ಪರಿಸರ, ಅಲ್ಲಿನ ಸಂಸ್ಕೃತಿ, ಜೀವನವಿಧಾನ, ನಂಬಿಕೆ ಆಚರಣೆಗಳಂತಹ ಸಂಗತಿಗಳನ್ನು ನಿರಂತರವಾಗಿ ತಮ್ಮ ಕಲಾಕೃತಿಗಳಲ್ಲಿ ಅಭಿವ್ಯಕ್ತಿಸುತ್ತ ಬಂದಿದ್ದಾರೆ. ಒಂದೇ ವಿಷಯಗಳನ್ನು ಬಾರಿ ಬಾರಿ ಪುನರಾವರ್ತಿಸಿದರೂ ಸಹಿತ ಕಾಲಕಾಲಕ್ಕೆ ಅವುಗಳ ರಚನಾವಿಧಾನ ಶೈಲಿ ಮತ್ತು ಅಭಿವ್ಯಕ್ತಿಸುವ ರೀತಿಗಳಲ್ಲಿ ಬದಲಾವಣೆಗಳು ಕಂಡು ಬರುತ್ತವೆ. ಇದಕ್ಕೆ ವ್ಯಕ್ತಿಯ ಅನುಭವ, ವಯೋಸಹಜ ಗುಣಧರ್ಮಗಳು, ಪ್ರಭಾವ ಪ್ರೇರಣೆಗಳು ಕಾರಣವಾಗಿರುತ್ತವೆ.[೧೯] ಇಂತಹ ಮೌಲಿಕ ವಿಚಾರಗಳನ್ನು ವಿಶ್ಲೇಷಿಸುವ ಉದ್ದೇಶವನ್ನು ಇಲ್ಲಿ ಹೊಂದಲಾಗಿದೆ.

ವ್ಯಕ್ತಿಯೊಬ್ಬನ ಸಾಮಾನ್ಯ ಬದುಕು ಆತನ ಪರಿಸ್ಥಿತಿ, ಪ್ರಭಾವ, ಕಾಲಮಾನ ಮತ್ತು ಅನುಭವಗಳ ಹಿನ್ನೆಲೆಯಲ್ಲಿ ನಿರಂತರ ಬದಲಾವಣೆ ಹೊಂದುತ್ತಲಿರುತ್ತದೆ. ಅದರ ಜೊತೆಗೆ ಅವರು ಅನುಸರಿಸಿಕೊಂಡು ಬಂದಂತಹ ಕಲಾ ಪ್ರಕಾರಗಳು ಸಹಿತ ನಿರಂತರ ರೂಪಾಂತರಗೊಳ್ಳುತ್ತ ಸಾಗುವುದು ಗಮನಾರ್ಹವಾಗಿದೆ. ಈ ಸಂಗತಿ ಕಲಾವಿದರ ಬದುಕಿನಲ್ಲಿ ಮಹತ್ವದ್ದಾಗಿದೆ.[೨೦] ಹಾಗಾಗಿ ಕಲಾಕೃತಿಗಳ ಹಿನ್ನೆಲೆಯಲ್ಲಿ ಕಲಾವಿದರ ಮನೋಸ್ಥಿತಿಯನ್ನು ಕಟ್ಟಿಕೊಡುವ ಪ್ರಮುಖ ಉದ್ದೇಶ ಇಲ್ಲಿದೆ.

ಕರ್ನಾಟಕದಲ್ಲಿ ಇದುವರೆಗೆ ನಡೆದ ಕಲಾವಿದರ ಕುರಿತಾಗಿರುವ ಅಧ್ಯಯನಗಳಲ್ಲಿ ಅವರ ಕಲಾಕೃತಿಗಳನ್ನು ವಿಷಯವಾರು ಇಲ್ಲವೆ ಮಾಧ್ಯಮದ ಹಿನ್ನೆಲೆಯಲ್ಲಿ ವಿಂಗಡಿಸಿ ವಿಶ್ಲೇಷಿಸಿರುವ ಕ್ರಮಗಳು ಕಂಡುಬರುತ್ತವೆ.[೨೧] ಇಲ್ಲಿ ಕಲಾ ತಾಂತ್ರಿಕತೆ ಮಾತ್ರ ಅಧ್ಯಯನ ಕ್ಕೊಳಪಡುತ್ತದೆ. ಆದರೆ ಕಲಾಕೃತಿಗಳನ್ನು ಕಾಲಘಟ್ಟಗಳಲ್ಲಿ ವಿಂಗಡಿಸಿ ಅಧ್ಯಯನಕ್ಕೊಳಪಡಿಸಿರುವ ಪ್ರಯತ್ನಗಳು ಇದುವರೆಗೆ ಕರ್ನಾಟಕದಲ್ಲಿ ನಡೆದಿಲ್ಲವೆನ್ನಬಹುದು. ಈ ಹಿನ್ನೆಲೆಯುಲ್ಲಿ ಎಂ.ಬಿ.ಪಾಟೀಲರ ಕಲಾಕೃತಿಗಳನ್ನು ಕಾಲಘಟ್ಟಗಳಲ್ಲಿ ಅಂದರೆ ದಶಕವಾರು ವಿಂಗಡಿಸಿ ವಿಶ್ಲೇಷಿಸುವ ಮಹತ್ವದ ಉದ್ದೇಶವು ಈ ಅಧ್ಯಯನದಲ್ಲಿದೆ.

ಎಂ.ಬಿ.ಪಾಟೀಲರ ಕುರಿತಾಗಿ ಗಂಭೀರ ಸ್ವರೂಪದ ಅಧ್ಯಯನಗಳು ಇದುವರೆಗೂ ನಡೆದಿಲ್ಲ. ಕೇವಲ ಸಣ್ಣಪುಟ್ಟ ಲೇಖನಗಳು, ಪದವಿ ಹಂತದ ಯೋಜನಾ ವರದಿಗಳು ಮತ್ತು ಕಿರುಪರಿಚಯವನ್ನು ಹೊಂದಿದ ಅಕಾಡಮಿಯ ಪ್ರಕಟಣೆಗಳು ಮಾತ್ರ ಹೊರಬಂದಿವೆ. ಹಾಗಾಗಿ

---

೧೮. ಡಾ. ಎಸ್. ಸಿ. ಪಾಟೀಲ : ಸಾಧನೆಯ ಸಮುಚ್ಚಯ ಶುವಲಿಂಗಪ್ಪ : ಪುಟ-೭೫.
೧೯. ಡಾ. ಲಕ್ಷ್ಮೀದೇವಿ ಗವಾಯಿ : ಕಲಾವಿದ ಎಂ. ಎ. ಚಟ್ಟಿ ಕಲೆ ಮತ್ತು ಬದುಕು : ಪುಟ-೭೯
೨೦. ಡಾ. ಸಿದ್ದಲಿಂಗಸ್ವಾಮಿ ಹಿರೇಮಠ : ಕಲಾವಿದ ಆರ್. ಎಂ. ಹಡಪದ : ಪುಟ-೩೫
೨೧. ಕರ್ನಾಟಕದ ಎಲ್ಲಾ ವಿಶ್ವವಿದ್ಯಾಲಯಗಳಲ್ಲಿ ಬಂದ ಚಿತ್ರಕಲಾವಿದರ ಬಗೆಗಿನ ಪಿಎಚ್.ಡಿ. ಎಂ.ಫಿಲ್. ಡಿ.ಲಿಟ್ ಹಾಗೂ ಸ್ನಾತಕೋತ್ತರ ಹಂತದ ಕಿರು ಪ್ರಬಂಧಗಳನ್ನು ಗಮನಿಸಲಾಗಿದೆ.

ಕರ್ನಾಟಕದ ಕಲಾಕ್ಷೇತ್ರಕ್ಕೆ ಗಮನಾರ್ಹ ಕೊಡುಗೆ ನೀಡಿದ ಎಂ.ಬಿ.ಪಾಟೀಲರ ಬಗ್ಗೆ ಇದುವರೆಗೆ ಬಂದಿರುವ ಬರಹಗಳನ್ನು ಹಿನ್ನೆಲೆಯಾಗಿಟ್ಟುಕೊಂಡು ಗಂಭೀರ ಸ್ವರೂಪದ ಅಧ್ಯಯನವನ್ನು ಕೈಗೊಳ್ಳುವ ಉದ್ದೇಶವನ್ನು ಇಲ್ಲಿ ಹೊಂದಲಾಗಿದೆ. ಈ ಹಿನ್ನೆಲೆಯಲ್ಲಿ ಚಿತ್ರಕಲಾ ಕ್ಷೇತ್ರದಲ್ಲಿ ಮತ್ತು ಎಂ.ಬಿ.ಪಾಟೀಲರ ಕುರಿತಾಗಿ ನಡೆದಿರುವ ಅಧ್ಯಯನಗಳನ್ನು ಕೆಳಗಿನಂತೆ ಸ್ಥೂಲವಾಗಿ ಸಮೀಕ್ಷಿಸಬಹುದಾಗಿದೆ.

**ಚಿತ್ರಕಲಾ ಕ್ಷೇತ್ರದಲ್ಲಿ ಇಲ್ಲಿಯವರೆಗೆ ನಡೆದ ಅಧ್ಯಯನಗಳು :**

ಕರ್ನಾಟಕದ ಚಿತ್ರ ಹಾಗೂ ಶಿಲ್ಪಕಲಾ ಪ್ರಕಾರಗಳಲ್ಲಿ ಸಂಶೋಧನೆಗಳು ವಿಶ್ವವಿದ್ಯಾಲಯ ಮಟ್ಟದಲ್ಲಿ ನಡೆಯುತ್ತಿರುವುದು ತೀರಾ ಅಪರೂಪವೆಂದೆ ಹೇಳಬಹುದು. ಕೆಲವೇ ವಿಶ್ವವಿದ್ಯಾಲಯಗಳಲ್ಲಿ ಇಂತಹ ಕಲಾ ಪ್ರಕಾರಗಳ ಸಂಶೋಧನೆಗಳು ನಡೆಯುತ್ತಲಿವೆ. ಬೇರೆ ಕ್ಷೇತ್ರಗಳನ್ನು ಹೋಲಿಸಿಕೊಂಡರೆ ದೃಶ್ಯಕಲೆಯ ಕ್ಷೇತ್ರಗಳಲ್ಲಿ ಸಂಶೋಧನೆಗಳು ನಡೆಯುತ್ತಿರುವುದು ಬೆರಳೆಣಿಕೆಯಷ್ಟು ಮಾತ್ರ

ಕರ್ನಾಟಕದಲ್ಲಿ ೧೯೮೦ ರ ನಂತರದಲ್ಲಿ ವಿಶ್ವವಿದ್ಯಾಲಯ ಮಟ್ಟದಲ್ಲಿ ದೃಶ್ಯಕಲೆಯ ಕುರಿತು ಸಂಶೋಧನೆಗಳು ಪ್ರಾರಂಭಗೊಂಡಿರುವುದನ್ನು ನೋಡಬಹುದು. ೧೯೮೩ ರಲ್ಲಿ ಕರ್ನಾಟಕ ವಿಶ್ವವಿದ್ಯಾಲಯದ ಸ್ನಾತಕೋತ್ತರ ಶಿಕ್ಷಣ ವಿಭಾಗಕ್ಕೆ 'ಮಾಧ್ಯಮಿಕ ಶಾಲಾ ಹಂತದಲ್ಲಿ ಚಿತ್ರಕಲಾ ಶಿಕ್ಷಣ' ಒಂದು ಅಧ್ಯಯನ ಎಂಬ ಕಿರು ಪ್ರಬಂಧವನ್ನು ಡಾ. ಎಸ್. ಸಿ. ಪಾಟೀಲರು ಸಲ್ಲಿಸಿದರು.[೨೨] ಈ ಕಿರು ಪ್ರಬಂಧವೇ ಚಿತ್ರಕಲಾ ಕ್ಷೇತ್ರದಲ್ಲಿ ಸಂಶೋಧನಾತ್ಮಕವಾಗಿ ರಚಿಸಿದ ಪ್ರಥಮ ಅಧ್ಯಯನವೆನ್ನಬಹುದು. ಅನಂತರ ೧೯೮೭ ರಲ್ಲಿ 'ಕನ್ನಡ ಹಸ್ತ ಪ್ರತಿಗಳು ಒಂದು ಅಧ್ಯಯನ' ಎಂಬ ಶೀರ್ಷಿಕೆ ಅಡಿಯಲ್ಲಿ ಡಾ. ಬಿ. ಕೆ. ಹಿರೇಮಠರವರು[೨೩] ಕರ್ನಾಟಕ ವಿಶ್ವವಿದ್ಯಾಲಯಕ್ಕೆ ಮಂಡಿಸಿದ ಪಿಹೆಚ್.ಡಿ ಮಹಾಪ್ರಬಂಧವು ಚಿತ್ರಕಲಾ ಕ್ಷೇತ್ರದಲ್ಲಿ ಬಂದ ಮತ್ತೊಂದು ಹೊಸ ಪ್ರಯತ್ನ ಎನ್ನಬಹುದು. ಹಸ್ತ ಪ್ರತಿಯಲ್ಲಿ ರಚಿಸಲ್ಪಟ್ಟಿರುವ ಚಿತ್ರಕಲೆಯನ್ನು ಕುರಿತು ಒಂದು ಪ್ರತ್ಯೇಕ ಅಧ್ಯಾಯವನ್ನು ಇದರಲ್ಲಿ ಮೀಸಲಾಗಿಡಲಾಗಿದೆ. ಆದ್ದರಿಂದ ಇದನ್ನು ದೃಶ್ಯಕಲಾ ಸಂಶೋಧನೆಯ ಪೂರಕ ಅಧ್ಯಯನವೆಂದು ಪರಿಗಣಿಸಲಾಗುತ್ತದೆ.

ಡಾ. ಎಸ್. ಸಿ. ಪಾಟೀಲರು ೧೯೯೧ ರಲ್ಲಿ 'ಕರ್ನಾಟಕ ಜನಪದ ಚಿತ್ರಕಲೆ' ಎಂಬ ಪಿಹೆಚ್.ಡಿ ಮಹಾಪ್ರಬಂಧವನ್ನು ಕರ್ನಾಟಕ ವಿಶ್ವವಿದ್ಯಾಲಯಕ್ಕೆ ಸಲ್ಲಿಸಿದ್ದು, ಇದು ಕರ್ನಾಟಕದ ಚಿತ್ರಕಲಾ ಕ್ಷೇತ್ರದ ಪ್ರಥಮ ಮಹಾಪ್ರಬಂಧವಾಗಿದೆ.[೨೪] ಕರ್ನಾಟಕದ ಚಿತ್ರಕಲೆಯಲ್ಲಿ

---

೨೨. ಡಾ. ಎಸ್. ಸಿ. ಪಾಟೀಲ : ಮಾಧ್ಯಮಿಕ ಶಾಲಾ ಹಂತದಲ್ಲಿ ಚಿತ್ರಕಲಾ ಶಿಕ್ಷಣ, ಕ.ವಿ.ವಿ. ಧಾರವಾಡ : ೧೯೮೩
೨೩. ಡಾ. ಬಿ. ಕೆ. ಹಿರೇಮಠ : ಕನ್ನಡ ಹಸ್ತ ಪ್ರತಿಗಳು ಒಂದು ಅಧ್ಯಯನ : ಕ.ವಿ.ವಿ. ಧಾರವಾಡ : ೧೯೮೭
೨೪. ಡಾ. ಎಸ್. ಸಿ. ಪಾಟೀಲ : ಕರ್ನಾಟಕದ ಜನಪದ ಚಿತ್ರಕಲೆ, ಕ.ವಿ.ವಿ. ಧಾರವಾಡ : ೧೯೯೧

ಸಾಂಸ್ಕೃತಿಕ ಅಂಶಗಳು ಎಂಬ ವಿಷಯದ ಕುರಿತು ಡಾ. ಅ.ಲ.ನರಸಿಂಹನ್‌ರವರು ಬೆಂಗಳೂರು ವಿಶ್ವವಿದ್ಯಾಲಯಕ್ಕೆ ೧೯೯೫ ರಲ್ಲಿ ಸಾದರಪಡಿಸಿದ ಮಹಾಪ್ರಬಂಧವು[೨೫] ಚಿತ್ರಕಲೆಯಲ್ಲಿ ಮತ್ತೊಂದು ಪಿಎಚ್.ಡಿ. ಅಧ್ಯಯನವಾಗಿದೆ. ಈ ಮಹಾ ಪ್ರಬಂಧವು ಚಿತ್ರಕಲೆಯಲ್ಲಿ ಅಭಿವ್ಯಕ್ತಿಗೊಂಡಿರುವ ಸಾಂಸ್ಕೃತಿಕ ಅಂಶಗಳನ್ನು ಕುರಿತು ತಿಳಿಸುತ್ತದೆ. ಡಾ. ಸಂಪದಾ ಭಟ್‌ರು[೨೬] 'ಹಿಂದುಸ್ತಾನಿ ಸಂಗೀತ ಮತ್ತು ರಾಗಮಾಲಾ ಚಿತ್ರಗಳು' ಎಂಬ ವಿಷಯ ಕುರಿತು ೧೯೯೮ರಲ್ಲಿ ಕನ್ನಡ ವಿಶ್ವವಿದ್ಯಾಲಯಕ್ಕೆ ಮಹಾಪ್ರಬಂಧ ಸಲ್ಲಿಸಿ ಪಿಎಚ್.ಡಿ. ಪಡೆದುಕೊಂಡಿದ್ದಾರೆ.

೧೯೯೯ ರಲ್ಲಿ ಅನಿವಾಸಿ ಭಾರತೀಯ ಕಲಾವಿದ 'ನಿಕೋಲಸ್ ರೋರಿಚ್ ಜೀವನ ಮತ್ತು ಕಲಾಕೃತಿಗಳು' ಎಂಬ ಸಂಶೋಧನಾ ಮಹಾ ಪ್ರಬಂಧವನ್ನು ಡಾ. ಪುಷ್ಪಾ ದ್ರಾವಿಡರು ಬೆಂಗಳೂರು ವಿಶ್ವವಿದ್ಯಾಲಯಕ್ಕೆ ಪಿಎಚ್.ಡಿ ಪದವಿಗಾಗಿ ಸಲ್ಲಿಸಿದ್ದಾರೆ.[೨೭] ೨೦೦೦ ರಲ್ಲಿ ಡಾ. ಯಾದಪ್ಪ ಪರದೇಶಿಯವರು 'ಉತ್ತರ ಕರ್ನಾಟಕದ ಭಿತ್ತಿ ಚಿತ್ರಕಲೆ- ಒಂದು ಅಧ್ಯಯನ' ಎಂಬ ಮಹಾ ಪ್ರಬಂಧವನ್ನು ಕನ್ನಡ ವಿಶ್ವವಿದ್ಯಾಲಯಕ್ಕೆ ಸಾದರ ಪಡಿಸಿ ಪಿಎಚ್.ಡಿ ಪಡೆದುಕೊಂಡಿದ್ದಾರೆ.[೨೮] ೨೦೦೨ ರಲ್ಲಿ ಡಾ. ಶಿವಾನಂದ. ಬಂಟನೂರರವರು[೨೯] 'ಕರ್ನಾಟಕದ ಜನಪದ ಶಿಲ್ಪಕಲೆ' ಹಾಗೂ ಡಾ. ಗಿರೀಶ ಎಂಬುವರು[೩೦] 'ಬುಡಕಟ್ಟು ಚಿತ್ರಕಲೆ' ಎಂಬ ಸಂಶೋಧನಾ ಮಹಾ ಪ್ರಬಂಧಗಳು ಕನ್ನಡ ವಿಶ್ವವಿದ್ಯಾಲಯಕ್ಕೆ ಪಿಎಚ್.ಡಿ ಪದವಿಗಾಗಿ ಸಲ್ಲಿಸಲ್ಪಟ್ಟಿವೆ. ಅಲ್ಲದೆ ಮಲ್ಲಿಕಾರ್ಜುನ ಬಾಗೋಡಿಯವರು[೩೧] 'ಚಿತ್ರಕಲಾವಿದ ಜೆ. ಎಸ್. ಖಂಡೇರಾವ್' ಕುರಿತು ಎಂ.ಫಿಲ್ ಪ್ರಬಂಧ, ಡಾ. ಲಕ್ಷ್ಮೀದೇವಿ ಗವಾಯಿಯವರು[೩೨] 'ಕಲಾವಿದ ಎಂ. ಎ. ಚಟ್ಟಿಯವರ ಜೀವನ ಕಲಾಕೃತಿಗಳು' ಎಂಬ ವಿಷಯದ ಪಿ.ಎಚ್.ಡಿ ಮಹಾಪ್ರಬಂಧಗಳನ್ನು ೨೦೦೩ ರಲ್ಲಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಾದರ ಪಡಿಸಿದ್ದಾರೆ. ಪಿಎಚ್.ಡಿ ಪಡೆದುಕೊಂಡಿದ್ದಾರೆ. ೨೦೦೩ ರಲ್ಲಿ ಡಾ. ಶರಣಪ್ಪ ಕೋಲ್ಕಾರ ರವರು 'ಕೊಪ್ಪಳ ಹಂಪಿ ಪ್ರದೇಶದ ಪ್ರಾಗೈತಿಹಾಸಿಕ ಕಾಲದ ಕಲೆ' ಎಂಬ ಮಹಾಪ್ರಬಂಧವನ್ನು ಕನ್ನಡ ವಿಶ್ವವಿದ್ಯಾಲಯಕ್ಕೆ ಪಿಎಚ್.ಡಿ ಪ್ರಬಂಧಕ್ಕಾಗಿ ಸಲ್ಲಿಸಿದ್ದಾರೆ.[೩೩] ಡಾ. ಸೌಮ್ಯರವರು 'ಯಂತ್ರಾ ದಿ ವಿಜುಯಲ್ ಆಫ್ ಶಂಕರಾ ಫಿಲಾಸಫಿ ವಿತ್ ರೆಫೆರೆನ್ಸ್ ಟು ಕಂಟೆಂಪರರಿ ತಾಂತ್ರಿಕ್ ಆರ್ಟಿಸ್ಟ್' ಎಂಬ

---

೨೫. ಡಾ. ಅ. ಲ. ನರಸಿಂಹನ್ : ಕರ್ನಾಟಕದ ಚಿತ್ರಕಲೆಯಲ್ಲಿ ಸಾಂಸ್ಕೃತಿಕ ಅಂಶಗಳು, ಬೆಂಗಳೂರು.ವಿ.ವಿ. : ೧೯೯೫
೨೬. ಡಾ. ಸಂಪದಾ ಭಟ್ : ಹಿಂದೂಸ್ಥಾನಿ ಸಂಗೀತ ಮತ್ತು ರಾಗಮಾಲಾ ಚಿತ್ರಗಳು : ಕ.ವಿ.ವಿ. ಹಂಪಿ : ೧೯೯೫
೨೭. ಡಾ. ಪುಷ್ಪಾ. ದ್ರಾವಿಡ : ನಿಕೋಲಸ್ ರೋರಿಚ್ ಜೀವನ ಮತ್ತು ಕಲಾಕೃತಿಗಳು : ಬೆಂಗಳೂರು.ವಿ.ವಿ. : ೧೯೯೯
೨೮. ಡಾ. ಯಾದಪ್ಪ. ಪರದೇಶಿ : ಉತ್ತರ ಕರ್ನಾಟಕದ ಭಿತ್ತಿ ಚಿತ್ರಕಲೆ : ಕ.ವಿ.ವಿ. ಹಂಪಿ : ೨೦೦೦
೨೯. ಡಾ. ಶಿವಾನಂದ. ಬಂಟನೂರು : ಕರ್ನಾಟಕದ ಜನಪದ ಶಿಲ್ಪಕಲೆ : ಕ.ವಿ.ವಿ. ಹಂಪಿ : ೨೦೦೨
೩೦. ಡಾ. ಗೀರಿಶ : ಬುಡಕಟ್ಟು ಚಿತ್ರಕಲೆ : ಕ.ವಿ.ವಿ. ಹಂಪಿ : ೨೦೦೨
೩೧. ಮಲ್ಲಿಕಾರ್ಜುನ ಬಾಗೋಡಿ : ಚಿತ್ರ ಕಲಾವಿದ ಜೆ. ಎಸ್. ಖಂಡೇರಾವ್ : ಕ.ವಿ.ವಿ. ಹಂಪಿ : ೨೦೦೨
೩೨. ಡಾ. ಲಕ್ಷ್ಮೀದೇವಿ ಗವಾಯಿ : ಕಲಾವಿದ ಎಂ. ಎ. ಚಟ್ಟಿಯವರ ಜೀವನ ಮತ್ತು ಕಲಾಕೃತಿಗಳು : ಕ.ವಿ.ವಿ. ಹಂಪಿ : ೨೦೦೩
೩೩. ಡಾ. ಶರಣಪ್ಪ. ಕೋಲ್ಕಾರ : ಕೊಪ್ಪಳ ಹಂಪಿ ಪ್ರದೇಶದ ಪ್ರಾಗೈತಿಹಾಸಿಕ ಕಾಲದ ಕಲೆ : ಕ.ವಿ.ವಿ. ಹಂಪಿ : ೨೦೦೩
೩೪. ಡಾ. ಸೌಮ್ಯ: ಯಂತ್ರಾ ದಿ ವಿಜುಯಲ್ ಆಫ್ ಶಂಕರಾ ಫಿಲಾಸಫಿ ವಿತ್ ರೆಫೆರೆನ್ಸ್ ಟು ಕಂಟೆಂಪರರಿ ತಾಂತ್ರಿಕ್ ಆರ್ಟಿಸ್ಟ್ : ಬೆಂಗಳೂರು ವಿ.ವಿ. : ೨೦೦೩

ಡಾ. ಪ್ರಮೀಳಾ ಲೋಚನ್ ರವರು 'ಮೈಂಡ್ ಮ್ಯೂಸಿಕ್ ಅಂಡ್ ಕಲರ್ ಎಕ್ಸ್ಪೋಸಸ್ ಆ್ಯಂಡ್ ಡೆವಲಪಮೆಂಟ್ ಆಫ್ ರಾಗಮಾಲಾ ಆ್ಯಂಡ್ ಕಂಟೆಂಪರರಿ ಪೈಂಟಿಂಗ್',[೩೫] ಡಾ. ವೀಣಾ ಶೇಖರರವರು 'ಎ ಸ್ಟಡಿ ಆಫ್ ಹಿಸ್ಟಾರಿಕಲ್ ಪೈಂಟಿಂಗ್ ಆಫ್ ಕರ್ನಾಟಕ'[೩೬] ಎಂಬ ಮಹಾ ಪ್ರಬಂಧಗಳನ್ನು ಬೆಂಗಳೂರು ವಿಶ್ವವಿದ್ಯಾಲಯಕ್ಕೆ ಸಾದರ ಪಡಿಸಿದ್ದಾರೆ. ಇವೆಲ್ಲ ಪಿಎಚ್.ಡಿ ಅಧ್ಯಯನಗಳಾಗಿವೆ. ಇವುಗಳಲ್ಲದೆ ಎ. ಎಸ್. ವಿಶ್ವನಾಥ ಅವರು ಯಕ್ಷಗಾನ ದೃಶ್ಯಕಲೆಯ ಮುಖವರ್ಣಿಕೆ ಎಂಬ ವಿಷಯದ ಬಗ್ಗೆ ಎಂ. ಫಿಲ್ ಪ್ರಬಂಧ[೩೭] ಡಾ. ಸಿದ್ದಲಿಂಗ ಸ್ವಾಮಿ ಹಿರೇಮಠ ರವರು 'ಕಲಾವಿದ ಆರ್.ಎಂ. ಹಡಪದ್ ಒಂದು ಅಧ್ಯಯನ' ಎಂಬ ಪಿಎಚ್.ಡಿ ಮಹಾಪ್ರಬಂಧಗಳನ್ನು ಕನ್ನಡ ವಿಶ್ವವಿದ್ಯಾಲಯಕ್ಕೆ ಸಾದರಪಡಿಸಿದ್ದಾರೆ.[೩೮] ಇದೇ ಅವಧಿಯಲ್ಲಿ ಡಾ. ಎಸ್. ಸಿ. ಪಾಟೀಲರು 'ಎ ಕ್ರಿಟಿಕಲ್ ಎನಾಲಿಸಿಸ್ ಆಫ್ ಆರ್ಟ್ ಎಜ್ಯುಕೇಷನ್ ಸ್ಕೂಲ್ ಲೆವೆಲ್ ಇನ್ ಕರ್ನಾಟಕ ಸ್ಟೇಟ್, ವಿತ್ ರೆಫೆರೆನ್ಸ್ ಟು ಡ್ರಾಯಿಂಗ್ ಅಂಡ್ ಪೈಂಟಿಂಗ್' ಎಂಬ ಮಹಾಪ್ರಬಂಧವನ್ನು ಕರ್ನಾಟಕ ವಿಶ್ವವಿದ್ಯಾಲಯಕ್ಕೆ ಸಾದರಪಡಿಸಿ[೩೯] ಪಿಎಚ್.ಡಿ ಪಡೆದುಕೊಂಡಿದ್ದಾರೆ.

೨೦೦೪ ರಲ್ಲಿ ಡಾ. ವ್ಹಿ. ಎಂ. ಬಾಗಾಯತ್‌ರವರು 'ಕರ್ನಾಟಕದ ಮುಸ್ಲಿಂ ಅರಸರ ಕಾಲದ ಚಿತ್ರಕಲೆ' ಎಂಬ ವಿಷಯದ ಬಗ್ಗೆ ಮಹಾ ಪ್ರಬಂಧವನ್ನು ಪಿಎಚ್.ಡಿ ಪದವಿಗಾಗಿ ಕನ್ನಡ ವಿಶ್ವ ವಿದ್ಯಾಲಯಕ್ಕೆ ಸಾದರ ಪಡಿಸಿದ್ದಾರೆ.[೪೦] ಡಾ. ಶಿವಕುಮಾರ ಎ. ಓ. ಅವರು 'ಕರ್ನಾಟಕದ ಸಮಕಾಲೀನ ಉತ್ಸವಗಳು ಹಾಗೂ ವಾಣಿಜ್ಯಮೇಳಗಳ ವಿವಿಧ ಆಯಾಮಗಳು' ಎಂಬ ವಿಷಯದ ಮಹಾಪ್ರಬಂಧವನ್ನು ಗುಲಬರ್ಗಾ ವಿಶ್ವವಿದ್ಯಾಲಯಕ್ಕೆ ಇದೇ ಅವಧಿಯಲ್ಲಿ ಸಲ್ಲಿಸಿದ್ದಾರೆ.[೪೧] ಇದು ವಾಣಿಜ್ಯ ಕಲೆಯ ಅಧ್ಯಯನವಾಗಿದೆ.

---

೩೫. ಡಾ. ಪ್ರಮೀಳಾ ಲೋಚನ್ : ಮೈಂಡ್ ಮ್ಯೂಜಿಕ್ ಆ್ಯಂಡ್ ಕಲರ ಎಕ್ಸ್ಪೋಸಸ್ ಆ್ಯಂಡ್ ಡೆವಲಪಮೆಂಟ್ ಆಫ್ ರಾಗಮಾಲ ಆ್ಯಂಡ ಕಂಟೆಂಪರರಿ ಪೇಂಟಿಂಗ್ಸ್ : ಬೆಂಗಳೂರು.ವಿ.ವಿ. : ೨೦೦೩

೩೬. ಡಾ. ವೀಣಾ ಶೇಖರ : ಎ ಸ್ಟಡಿ ಆಫ್ ಹಿಸ್ಟಾರಿಕಲ್ ಪೇಂಟಿಂಗ್ಸ್ ಅಫ್ ಕರ್ನಾಟಕ : ಬೆಂಗಳೂರು.ವಿ.ವಿ. : ೨೦೦೩

೩೭. ಎ. ಎಸ್. ವಿಶ್ವನಾಥ : ಯಕ್ಷಗಾನ ದೃಶ್ಯಕಲೆಯ ಮುಖ್ಯವರ್ಣಿಕೆ : ಕ.ವಿ.ವಿ. ಹಂಪಿ : ೨೦೦೩

೩೮. ಡಾ. ಸಿದ್ಧಲಿಂಗಸ್ವಾಮಿ : ಕಲಾವಿದ ಆರ್.ಎಂ. ಹಡಪದ ಒಂದು ಅಧ್ಯಯನ : ಕ.ವಿ.ವಿ. ಹಂಪಿ : ೨೦೦೩

೩೯. ಡಾ. ಎಸ್. ಸಿ. ಪಾಟೀಲ : ಎ ಕ್ರಿಟಿಕಲ್ ಅನಾಲಸಿಸ್ ಆಫ್ ಆರ್ಟ್ ಅಜ್ಯುಕೇಶನ್ ಸ್ಕೂಲ್ ಲೆವಲ್ ಇನ್ ಕರ್ನಾಟಕ ಸ್ಟೇಟ್ ವಿತ್ ರೆಫೆರೆನ್ಸ್ ಟು ಡ್ರಾಯಿಂಗ್ ಆ್ಯಂಡ್ ಪೇಂಟಿಂಗ್ : ಕ.ವಿ.ವಿ. ಧಾರವಾಡ : ೨೦೦೪

೪೦. ಡಾ. ಎಂ. ವಿ. ಬಾಗಾಯತ್ : ಕರ್ನಾಟಕದ ಮುಸ್ಲಿಂ ಅರಸರ ಕಾಲದ ಚಿತ್ರಕಲೆ : ಕನ್ನಡ ವಿ.ವಿ. ಹಂಪಿ : ೨೦೦೪.

೪೧. ಡಾ. ಶಿವಕುಮಾರ. ಎ. ಓ. : ಕರ್ನಾಟಕದ ಸಮಕಾಲೀನ ಉತ್ಸವಗಳು ಹಾಗೂ ವಾಣಿಜ್ಯ ಮೇಳಗಳ ವಿವಿಧ ಆಯಾಮಗಳು : ಗುಲ್ಬರ್ಗಾ ವಿ.ವಿ. ೨೦೦೪.

೨೦೦೫ ರಲ್ಲಿ ಶಂಕ್ರಪ್ಪ ಎಂ. ಕುಂದಗೋಳರವರು[೪೨] 'ಕಲಾವಿದ ಡಿ. ವಿ. ಹಾಲಭಾವಿಯವರ ಕಲೆ ಮತ್ತು ಜೀವನ' ಹಾಗೂ ಸಿ. ಡಿ. ಜಟ್ಟೆಣ್ಣವರ ಕಲಾವಿದ ಎಂ. ವ್ಹಿ. ಮಿಣಜಗಿಯವರ ಕಲೆ ಮತ್ತು ಬದುಕು[೪೩] ಎಂಬ ಕಿರು ಪ್ರಬಂಧಗಳನ್ನು ಎಂ.ಫಿಲ್ ಪದವಿಗಾಗಿ ಡಾ. ಡಿ. ಎ. ಉಪಾಧ್ಯಾಯರವರು 'ದೃಶ್ಯಕಲೆಯ ತೌಲನಿಕ ಅಧ್ಯಯನ'[೪೪] ಹಾಗೂ ಡಾ. ಆನಂದ. ಕೆ. ಪೂಜಾರರವರು 'ಕರಾವಳಿ ಕರ್ನಾಟಕದ ಕಾವಿ ಚಿತ್ರಕಲೆ' ಎಂಬ ಪ್ರಬಂಧಗಳನ್ನು ಕನ್ನಡ ವಿಶ್ವವಿದ್ಯಾಲಯಕ್ಕೆ ಡಿ.ಲಿಟ್ ಪದವಿಗಾಗಿ ಸಲ್ಲಿಸಿದ್ದಾರೆ.[೪೫] ಇದೇ ಶೈಕ್ಷಣಿಕ ಅವಧಿಯಲ್ಲಿ ಡಾ. ಶಿವಪ್ರಕಾಶ ಎಲ್. ತುಕ್ಕಣ್ಣವರ[೪೬] 'ಕರ್ನಾಟಕ ರಥ ಶಿಲ್ಪಕಲೆ' ಎಂಬ ಮಹಾ ಪ್ರಬಂಧವನ್ನು, ಡಾ. ಶಶಿಕಲಾ ಹೂಗಾರರವರು[೪೭] 'ಕರ್ನಾಟಕ ತೊಗಲುಗೊಂಬೆ ಚಿತ್ರಕಲೆ', ಡಾ. ಎ. ಎಸ್. ವಿಶ್ವನಾಥ[೪೮] ಇವರು 'ಯಕ್ಷಗಾನ ದೃಶ್ಯಕಲೆಯ ವೈವಿಧ್ಯತೆ, ಡಾ. ಹೆಚ್. ಎನ್. ಚಿತ್ರಗಾರರವರು[೪೯] 'ಕರ್ನಾಟಕ ಹಸ್ತ ಪ್ರತಿ ಚಿತ್ರಕಲೆ' ಎಂಬ ವಿಷಯಗಳ ಕುರಿತು ಪಿಹೆಚ್.ಡಿ ಪ್ರಬಂಧಗಳನ್ನು ಕನ್ನಡ ವಿಶ್ವವಿದ್ಯಾಲಯಕ್ಕೆ ಮಂಡಿಸಿದ್ದಾರೆ.

೨೦೦೬ ರಲ್ಲಿ ಡಾ. ವಿಶ್ವೇಶ್ವರಿ ತಿವಾರಿಯವರು 'ರಂಗೋಲಿ ಕಲೆ' ಎಂಬ ಮಹಾಪ್ರಬಂಧವನ್ನು ಪಿಹೆಚ್.ಡಿ ಪದವಿಗಾಗಿ ಗುಲ್ಬರ್ಗಾ ವಿಶ್ವವಿದ್ಯಾಲಯಕ್ಕೆ ಸಲ್ಲಿಸಿದ್ದಾರೆ.[೫೦] ಸುಚಿತ್ರಾ. ಲಿಂಗದಳ್ಳಿ[೫೧] 'ವಿಜಯನಗರ ಚಿತ್ರಕಲೆ', ರವಿ ನಾಯಕರವರು[೫೨] 'ಕಿನ್ನಾಳ ಕಲೆ' ಎಂಬ ಕಿರು ಪ್ರಬಂಧಗಳನ್ನು ಎಂ.ಫಿಲ್ ಪದವಿಗಾಗಿ ಮತ್ತು ಗೀತಾಂಜಲಿ[೫೩] ಎಂಬವರು 'ಕರ್ನಾಟಕದ ದೀಪಸ್ಥಂಭಗಳು' ಎಂಬ ವಿಷಯದ ಕುರಿತು ಪಿಎಚ್.ಡಿ ಪ್ರಬಂಧವನ್ನು ಕನ್ನಡ ವಿ. ವಿ. ಗೆ ಸಲ್ಲಿಸಿದ್ದಾರೆ. ಹೀಗೆ ಈ ಅವಧಿಯಲ್ಲಿ ವಿವಿಧ ರೀತಿಯಲ್ಲಿ ಚಿತ್ರಕಲೆ, ಶಿಲ್ಪಕಲೆ ಮತ್ತು ಜನಪದ ಕಲಾ ಪ್ರಕಾರಗಳ ಬಗ್ಗೆ ಅಧ್ಯಯನಗಳು ನಡೆದಿವೆ.

---

೪೨. ಶಂಕ್ರಪ್ಪ. ಕುಂದಗೋಳ : ಕಲಾವಿದ ಡಿ. ವ್ಹಿ. ಹಾಲಭಾವಿಯವರ ಕಲೆ ಮತ್ತು ಜೀವನ : ಕನ್ನಡ ವಿ.ವಿ. ಹಂಪಿ. ೨೦೦೫.
೪೩. ಸಿ. ಡಿ. ಜಟ್ಟೆಣ್ಣನವರ : ಕಲಾವಿದ ಎಂ. ವ್ಹಿ. ಮಿಣಜಗಿಯವರ ಕಲೆ ಮತ್ತು ಜೀವನ : ಕನ್ನಡ ವಿ.ವಿ. ಹಂಪಿ. ೨೦೦೫.
೪೪. ಡಾ. ಡಿ. ಎ. ಉಪಾಧ್ಯಾಯ : ದೃಶ್ಯಕಲೆಯ ತೌಲನಿಕ ಅಧ್ಯಯನ : ಕನ್ನಡ ವಿ.ವಿ. ಹಂಪಿ. ೨೦೦೫.
೪೫. ಡಾ. ಆನಂದ. ಕೆ. ಪೂಜಾರ : ಕರಾವಳಿ ಕರ್ನಾಟಕದ ಚಿತ್ರಕಲೆ : ಕನ್ನಡ ವಿ.ವಿ. ಹಂಪಿ. ೨೦೦೫.
೪೬. ಡಾ. ಶಿವಪ್ರಕಾಶ. ಎಲ್. ತುಕ್ಕಣ್ಣವರ : ಕರ್ನಾಟಕದ ರಥ ಶಿಲ್ಪಕಲೆ : ಕನ್ನಡ ವಿ.ವಿ. ಹಂಪಿ. ೨೦೦೫.
೪೭. ಡಾ. ಶಶಿಕಲಾ. ಹೂಗಾರ : ಕರ್ನಾಟಕ ತೊಗಲುಗೊಂಬೆ ಚಿತ್ರಕಲೆ : ಕನ್ನಡ ವಿ.ವಿ. ಹಂಪಿ. ೨೦೦೫.
೪೮. ಡಾ. ಎ. ಎಸ್. ವಿಶ್ವನಾಥ : ಯಕ್ಷಗಾನ ದೃಶ್ಯಕಲೆಯ ಮುಖವರ್ಣಿಕೆ : ಕನ್ನಡ ವಿ.ವಿ. ಹಂಪಿ. ೨೦೦೫.
೪೯. ಡಾ. ಹೆಚ್. ಚಿತ್ರಗಾರ : ಕರ್ನಾಟಕದ ಹಸ್ತ ಪ್ರತಿ ಚಿತ್ರಕಲೆ : ಕನ್ನಡ ವಿ.ವಿ. ಹಂಪಿ. ೨೦೦೫.
೫೦. ಡಾ. ವಿಶ್ವೇಶ್ವರ ತಿವಾರಿ : ರಂಗೋಲಿ ಕಲೆ : ಗುಲ್ಬರ್ಗ ವಿಶ್ವವಿದ್ಯಾಲಯ. ೨೦೦೬.
೫೧. ಸುಚಿತ್ರಾ. ಲಿಂಗದಳ್ಳಿ : ವಿಜಯ ನಗರ ಚಿತ್ರಕಲೆ : ಕನ್ನಡ ವಿಶ್ವವಿದ್ಯಾಲಯ ಹಂಪಿ ೨೦೦೬.
೫೨. ರವಿ ನಾಯಕ : ಕಿನ್ನಾಳ ಕಲೆ : ಕನ್ನಡ ವಿಶ್ವವಿದ್ಯಾಲಯ ಹಂಪಿ ೨೦೦೬.
೫೩. ಡಾ. ಗೀತಾಂಜಲಿ. ಬಿ. ಆರ್ : ಕರ್ನಾಟಕದ ದೀಪಸ್ತಂಭಗಳು : ಕನ್ನಡ ವಿಶ್ವವಿದ್ಯಾಲಯ ಹಂಪಿ ೨೦೦೬.

೨೦೦೭ ರಲ್ಲಿ ಎಂ.ಫಿಲ್ ಪದವಿಗಾಗಿ ಶ್ರೀಮತಿ ಶೈಲಾ. ಬರಡೋಲರು[೫೪] 'ಸಂತ ಶುಭರಾಯ ಕಲೆ ಮತ್ತು ಬದುಕು', ಉಮೇಶ[೫೫] ಅವರು 'ಜೈನ ಚಿತ್ರಕಲೆ', ಶಶಿಕಾಂತ. ಬಸರಿಕಟ್ಟಿಯವರು[೫೬] 'ಕಲಘಟಗಿ ಕಲೆ', ಬಿ. ಎಂ. ಪಾಟೀಲರವರು[೫೭] 'ನಿಪ್ಪಾಣಿವಾಡೆಯ ಭಿತ್ತಿಚಿತ್ರಕಲೆ' ಎಂಬ ವಿಷಯದ ಬಗ್ಗೆ ಕಿರು ಪ್ರಬಂಧಗಳನ್ನು ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸಿದ್ದಾರೆ. ಡಾ. ಮಲ್ಲಿಕಾರ್ಜುನ ಬಾಗೋಡಿಯುವರು[೫೮] 'ಸುರಪುರ ಚಿತ್ರಕಲೆ' ಎಂಬ ಮಹಾಪ್ರಬಂಧವನ್ನು ಪಿಹೆಚ್.ಡಿ ಪದವಿಗಾಗಿ ಗುಲ್ಬರ್ಗಾ ವಿಶ್ವವಿದ್ಯಾಲಯಕ್ಕೆ ಸಲ್ಲಿಸಿದ್ದರೆ, ಪಿ. ಟಿ. ಲಕ್ಕಣ್ಣನವರ ಅವರು 'ಕರ್ನಾಟಕದ ಚಿತ್ರಕಲಾ ಸಾಹಿತ್ಯ ವೈಚಾರಿಕ ಅಧ್ಯಯನ' ಎಂಬ ವಿಷಯದ ಬಗ್ಗೆ ಕನ್ನಡ ವಿಶ್ವವಿದ್ಯಾಲಯಕ್ಕೆ ಪಿ.ಎಚ್.ಡಿ ಪ್ರಬಂಧವನ್ನು ಸಲ್ಲಿಸಿದ್ದಾರೆ.[೫೯]

೨೦೦೮ ರಲ್ಲಿ ಎಂ.ಫಿಲ್ ಪದವಿಗಾಗಿ ಮಹೇಶ. ಉಮತಾರರವರು[೬೦] 'ಕಲಾವಿದ ಬಿ. ಪಿ. ಬಾಯಿರಿ ಕಲೆ ಮತ್ತು ಸಾಹಿತ್ಯ', ಕುಮಾರಿ ಗಿರಿಜಾ ಬಿರಾದಾರ[೬೧] 'ಬಿಜಾಪೂರ ಜಿಲ್ಲೆಯ ಚಿತ್ರಕಲೆ', ಮಹಾಕೂಟೇಶ್ವರಗೌಡ ಪಾಟೀಲ[೬೨] 'ಬಾದಾಮಿ ಪ್ರದೇಶದ ಪ್ರಾಗೈತಿಹಾಸಿಕ ಚಿತ್ರಕಲೆ' , ಮಹಾಂತೇಶ ಪಲದಿನ್ನಿಯವರು[೬೩] 'ಲಜ್ಜಾಗೌರಿ ಶಿಲ್ಪಕಲೆ', ಕೃಷ್ಣವೇಣಿಯವರು 'ಬಳ್ಳಾರಿ ಜಿಲ್ಲೆಯ ಪ್ರಾಗೈತಿಹಾಸ ಚಿತ್ರಕಲೆ'[೬೪], ಬಸವರಾಜ. ಗವಿಮಠರು[೬೫] 'ಬಾಗಲಕೋಟೆ ಜಿಲ್ಲೆಯ ಚಿತ್ರಕಲೆ', ಕೃಷ್ಣೆಗೌಡ[೬೬] ಇವರು 'ಬೌದ್ಧ ಚಿತ್ರಕಲೆ', ಜಯರಾಜ ಚಿಕ್ಕಪಾಟೀಲ[೬೭] ರವರು 'ಕರ್ನಾಟಕದ ಜಾಹಿರಾತುಗಳಲ್ಲಿ ಸಾಂಸ್ಕೃತಿಕ ನೋಟ', ಸಂತೋಷ ಕುಲಕರ್ಣಿಯವರು 'ದಾವಣಗೇರೆ ಜಿಲ್ಲೆಯ ಚಿತ್ರಕಲೆ'[೬೮], ಯೋಗೀಶರವರು[೬೯] 'ಚಿತ್ರದುರ್ಗ ಜಿಲ್ಲೆಯ ಚಿತ್ರಕಲೆ' ಎಂಬ ಕಿರು ಪ್ರಬಂಧಗಳನ್ನು ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸಿದ್ದಾರೆ. ಇದಲ್ಲದೆ ಜಿ. ಲಕ್ಷ್ಮೀಪತಿಯವರು 'ದಕ್ಷಿಣ ಕರ್ನಾಟಕದ ಜನಪದ ಶಿಲ್ಪಕಲೆ' ಎಂಬ ವಿಷಯದ ಬಗ್ಗೆ ಪಿಎಚ್.ಡಿ ಪ್ರಬಂಧವನ್ನು ಕನ್ನಡ ವಿಶ್ವವಿದ್ಯಾಲಯಕ್ಕೆ ಸಾದರಪಡಿಸಿದ್ದಾರೆ.

---

೫೪. ಶ್ರೀಮತಿ ಶೈಲಾ ಬರಡೋಲ : ಸಂತ ಶುಭರಾಯ ಕಲೆ ಮತ್ತು ಬದುಕು : ಕನ್ನಡ ವಿಶ್ವವಿದ್ಯಾಲಯ ಹಂಪಿ ೨೦೦೭.
೫೫. ಉಮೇಶ. ಎಸ್ : ಕರ್ನಾಟಕದಲ್ಲಿ ಜೈನ ಚಿತ್ರಕಲೆ : ಕನ್ನಡ ವಿಶ್ವವಿದ್ಯಾಲಯ ಹಂಪಿ ೨೦೦೭.
೫೬. ಶಶಿಕಾಂತ. ಬಸರಿಕಟ್ಟಿ : ಕಲಘಟಗಿ ಕಲೆ : ಕನ್ನಡ ವಿಶ್ವವಿದ್ಯಾಲಯ ಹಂಪಿ ೨೦೦೭.
೫೭. ಬಿ. ಎಂ. ಪಾಟೀಲ : ನಿಪ್ಪಾಣಿ ವಾಡೆಯ ಭಿತ್ತಿ ಚಿತ್ರಕಲೆ : ಕನ್ನಡ ವಿಶ್ವವಿದ್ಯಾಲಯ ಹಂಪಿ ೨೦೦೭.
೫೮. ಡಾ. ಮಲ್ಲಿಕಾರ್ಜುನ ಬಾಗೋಡಿ : ಸುರಪುರ ಚಿತ್ರಕಲೆ : ಗುಲ್ಬರ್ಗ ವಿಶ್ವವಿದ್ಯಾಲಯ ೨೦೦೭.
೫೯. ಪಿ. ಟಿ. ಲಕ್ಕಣ್ಣನವರ : ಕರ್ನಾಟಕದ ಚಿತ್ರಕಲಾ ಸಾಹಿತ್ಯ ವೈಚಾರಿಕ ಅಧ್ಯಯನ : ಕನ್ನಡ ವಿಶ್ವವಿದ್ಯಾಲಯ ಹಂಪಿ ೨೦೦೭.
೬೦. ಮಹೇಶ. ಉಮತಾರ : ಕಲಾವಿದ ಬಿ. ಪಿ. ಬಾಯಿರಿ ಕಲೆ ಮತ್ತು ಸಾಹಿತ್ಯ : ಕನ್ನಡ ವಿಶ್ವವಿದ್ಯಾಲಯ, ಹಂಪಿ. ೨೦೦೮.
೬೧. ಗಿರಿಜಾ ಬಿರಾದಾರ : ಬಿಜಾಪೂರ ಜಿಲ್ಲೆಯ ಚಿತ್ರಕಲೆ : ಕನ್ನಡ ವಿಶ್ವವಿದ್ಯಾಲಯ, ಹಂಪಿ ೨೦೦೮.
೬೨. ಮಹಾಕೂಟೇಶ್ವರಗೌಡ. ಪಾಟೀಲ : ಬಾದಾಮಿ ಪ್ರದೇಶದ ಪ್ರಾಗೈತಿಹಾಸಿಕ ಚಿತ್ರಕಲೆ : ಕನ್ನಡ ವಿಶ್ವವಿದ್ಯಾಲಯ, ಹಂಪಿ. ೨೦೦೮.
೬೩. ಮಹಾಂತೇಶ, ಫಲದಿನ್ನಿ: ಲಜ್ಜಾಗೌರಿ ಶಿಲ್ಪಕಲೆ : ಕನ್ನಡ ವಿಶ್ವವಿದ್ಯಾಲಯ, ಹಂಪಿ. ೨೦೦೮.
೬೪. ಕೃಷ್ಣವೇಣಿ : ಬಳ್ಳಾರಿ ಜಿಲ್ಲೆಯ ಪ್ರಾಗೈತಿಹಾಸಿಕ ಚಿತ್ರಕಲೆ : ಕನ್ನಡ ವಿಶ್ವವಿದ್ಯಾಲಯ, ಹಂಪಿ. ೨೦೦೮.
೬೫. ಬಸವರಾಜ ಗವಿಮಠ : ಬಾಗಲಕೋಟೆ ಜಿಲ್ಲೆಯ ಚಿತ್ರಕಲೆ : ಕನ್ನಡ ವಿಶ್ವವಿದ್ಯಾಲಯ, ಹಂಪಿ. ೨೦೦೮.
೬೬. ಕೃಷ್ಣೇಗೌಡ : ಬೌದ್ಧ ಚಿತ್ರಕಲೆ : ಕನ್ನಡ ವಿಶ್ವವಿದ್ಯಾಲಯ, ಹಂಪಿ. ೨೦೦೮.
೬೭. ಜಯರಾಜ ಚಿಕ್ಕಪಾಟೀಲ : ಕರ್ನಾಟಕದ ಜಾಹಿರಾತುಗಳಲ್ಲಿ ಸಾಂಸ್ಕೃತಿಕ ನೋಟ : ಕನ್ನಡ ವಿಶ್ವವಿದ್ಯಾಲಯ, ಹಂಪಿ. ೨೦೦೮.
೬೮. ಸಂತೋಷ ಕುಲಕರ್ಣಿ : ದಾವಣಗೇರೆ ಜಿಲ್ಲೆಯ ಚಿತ್ರಕಲೆ : ಕನ್ನಡ ವಿಶ್ವವಿದ್ಯಾಲಯ, ಹಂಪಿ. ೨೦೦೮.
೬೯. ಯೋಗೀಶ್ : ಚಿತ್ರದುರ್ಗ ಜಿಲ್ಲೆಯ ಚಿತ್ರಕಲೆ : ಕನ್ನಡ ವಿಶ್ವವಿದ್ಯಾಲಯ, ಹಂಪಿ. ೨೦೦೮.
೭೦. ಡಾ. ಜಿ. ಲಕ್ಷ್ಮೀಪತಿ : ದಕ್ಷಿಣ ಕರ್ನಾಟಕದ ಜನಪದ ಶಿಲ್ಪಕಲೆ : ಕನ್ನಡ ವಿಶ್ವವಿದ್ಯಾಲಯ, ಹಂಪಿ. ೨೦೦೮.

ಅಲ್ಲದೆ ಕೆ. ಎಂ. ಕಮ್ಮಾರ ಅವರು 'ವ್ಹಿ. ಬಿ. ಹಿರೇಗೌಡರ ಕಲೆ ಮತ್ತು ಬದುಕು' ಎಂಬ ವಿಷಯದ ಬಗ್ಗೆ ಇದೇ ವರ್ಷದಲ್ಲಿ ಪಿಎಚ್.ಡಿ ಪ್ರಬಂಧವನ್ನು ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸಿದ್ದಾರೆ.[೭೧] ಇದಲ್ಲದೆ ೨೦೦೯ ರಲ್ಲಿ ಕಾಂತೇಶ ಮೂರ್ತಿ, ರಂಗಸ್ವಾಮಿ, ವಿಶ್ವನಾಥ ಎಂಬುವವರು ಎಂ.ಫಿಲ್ ಅಧ್ಯಯನದಲ್ಲಿ ತೊಡಗಿದ್ದಾರೆ. ಇದರ ಜೊತೆಗೆ ಇನ್ನೂ ಹಲವಾರು ಸಂಶೋಧಕರು ಕನ್ನಡ ವಿಶ್ವವಿದ್ಯಾಲಯ, ಕರ್ನಾಟಕ ವಿಶ್ವವಿದ್ಯಾಲಯ, ಬೆಂಗಳೂರು ವಿಶ್ವವಿದ್ಯಾಲಯ, ಗುಲ್ಬರ್ಗ ವಿಶ್ವವಿದ್ಯಾಲಯ, ಮೈಸೂರು ವಿಶ್ವವಿದ್ಯಾಲಯಗಳಲ್ಲಿ ಎಂ.ಫಿಲ್, ಪಿಹೆಚ್.ಡಿ ಹಾಗೂ ಡಿ.ಲಿಟ್ ಪದವಿಯಲ್ಲಿ ಅಧ್ಯಯನ ನಿರತರಾಗಿದ್ದಾರೆ. ಜೊತೆಗೆ ದೃಶ್ಯಕಲೆಯ ಸ್ನಾತಕ ಹಾಗೂ ಸ್ನಾತಕೋತ್ತರ ತರಗತಿಗಳಲ್ಲಿ ಅಧ್ಯಯನದ ಒಂದು ಭಾಗವಾಗಿ ನೂರಾರು ಕಿರು ಪ್ರಬಂಧಗಳು ಹೊರಬರುತ್ತಲಿವೆ. ಹಿಂದಿನ ದಿನಮಾನಗಳಿಗೆ ಹೋಲಿಸಿದರೆ ಇಂದು ಈ ಕ್ಷೇತ್ರದಲ್ಲಿ ಸಂಶೋಧನೆಗಳು ಹೆಚ್ಚಿನ ಸಂಖ್ಯೆಯಲ್ಲಿ ನಡೆದಿವೆ ಎಂದು ಹೇಳಬಹುದು.

**ಎಂ. ಬಿ. ಪಾಟೀಲರ ಕುರಿತಾಗಿ ಇದುವರೆಗೆ ನಡೆದ ಅಧ್ಯಯನಗಳು :**

ಕಲಾವಿದ ಎಂ.ಬಿ.ಪಾಟೀಲರ ಕುರಿತು ಇದುವರೆಗೆ ಗಂಭೀರ ಸ್ವರೂಪದ ಅಧ್ಯಯನಗಳು ನಡೆದಿಲ್ಲವೆಂದೇ ಹೇಳಬಹುದು. ಆದರೆ ಅವರ ಕಲೆ ಮತ್ತು ಕಲಾಕೃತಿಗಳ ಬಗ್ಗೆ ಅನೇಕ ಪತ್ರಿಕೆಗಳಲ್ಲಿ ಚಿಕ್ಕಪುಟ್ಟ ಲೇಖನಗಳು ಬಹುಸಂಖ್ಯೆಯಲ್ಲಿ ಪ್ರಕಟಗೊಂಡಿವೆ. ಅವುಗಳಲ್ಲಿ ಮುಖ್ಯವಾದ ಕೆಲವು ಲೇಖನಗಳನ್ನು ಕೆಳಗಿನಂತೆ ಸಮೀಕ್ಷಿಸಬಹುದು.

ಮುಂಬೈ ಮತ್ತು ಪುಣೆಯಿಂದ ಏಕಕಾಲಕ್ಕೆ ಪ್ರಕಟಗೊಳ್ಳುತ್ತಿದ್ದ 'ಸ್ವರಾಜ್ಯ' ಎಂಬ ಮರಾಠಿ ಭಾಷೆಯ ದಿನಪತ್ರಿಕೆಯಲ್ಲಿ ೧೯೬೫ ರಲ್ಲಿ ಪ್ರಕಟಗೊಂಡ ಲೇಖನ ಇವರ ಬಗ್ಗೆ ಹೊರ ರಾಜ್ಯದಲ್ಲಿ ಬಂದಂತಹ ಮೊದಲ ಪತ್ರಿಕಾ ಲೇಖನ[೭೨] ಎನ್ನಬಹುದು. ಸ್ವರಾಜ್ಯ ಪತ್ರಿಕೆಯ ಮುಖಪುಟ ಚಿತ್ರವಿನ್ಯಾಸದ ಸ್ಪರ್ಧೆಯಲ್ಲಿ ಎಂ.ಬಿ.ಪಾಟೀಲರು ದ್ವಿತೀಯ ಸ್ಥಾನ ಪಡೆದುದಕ್ಕಾಗಿಅವರ ಕಲೆಯನ್ನು ಮೆಚ್ಚಿ ಕಿರುಲೇಖನ ಬರೆಯಲಾಗಿದೆ.

ಸಂಯುಕ್ತ ಕರ್ನಾಟಕ ದಿನಪತ್ರಿಕೆಯಲ್ಲಿ ೧೯೭೪ ರಲ್ಲಿ ಪಾಟೀಲರ ಕಲೆ ಮತ್ತು ಕಲಾಶೈಲಿಯ ಬಗ್ಗೆ ಸಿ. ಪಿ. ಹೇಮಗಿರಿಮಠ ಅವರು ಕಿರು ಲೇಖನ ಬರೆದಿದ್ದಾರೆ.[೭೩] ಭಾಷೆಯ ಗೊಂದಲವಿಲ್ಲದೆ ಚಿತ್ರಕಲೆಯ ಮುಖಾಂತರ ಹೃದಯದ ಭಾವನೆಗಳನ್ನು ಪರಿಣಾಮಕಾರಿಯಾಗಿ ತಿಳಿಸುವ ಪ್ರಬುದ್ಧ ಕಲಾವಿದ ಎಂ.ಬಿ.ಪಾಟೀಲ ಎಂದು ಅಭಿಪ್ರಾಯ ವ್ಯಕ್ತಪಡಿಸುತ್ತಾರೆ.

೭೧. ಡಾ. ಕೆ. ಎಂ. ಕಮ್ಮಾರ : ವ್ಹಿ. ಬಿ. ಹಿರೇಗೌಡರ ಕಲೆ ಮತ್ತು ಬದುಕು : ಕನ್ನಡ ವಿ. ವಿ. ಹಂಪಿ – ೨೦೦೮

೭೨. ಪ್ರಬುದ್ಧ ಕಲಾವಿದ ಎಂ.ಬಿ.ಪಾಟೀಲ : ಸ್ವರಾಜ್ಯ ದಿನಪತ್ರಿಕೆ : ೧೩-೦೩-೧೯೬೫-ಪುಟ-೩

೭೩. ಸಿ. ಪಿ. ಹೇಮಗಿರಿಮಠ : ತತ್ವಜ್ಞಾನಿ ಕಲಾವಿದ ಎಂ.ಬಿ.ಪಾಟೀಲ : ಸಂಯುಕ್ತ ಕರ್ನಾಟಕ ೦೯-೦೮-೧೯೭೪-ಪುಟ-೫

ಸುಧಾ ವಾರಪತ್ರಿಕೆಯಲ್ಲಿ ೧೯೭೫ ರಲ್ಲಿ ದೊಡ್ಡರಂಗೇಗೌಡ ಅವರು ಎಂ.ಬಿ.ಪಾಟೀಲರ ಕಲಾಬದುಕು ಮತ್ತು ಕೃತಿಗಳ ಬಗ್ಗೆ ಪರಿಚಯಾತ್ಮಕ ಲೇಖನ ಬರೆದಿದ್ದಾರೆ.[೭೪] ಬಿಜಾಪೂರ ಜಿಲ್ಲೆ ತಿಕೋಟಾದಲ್ಲಿ ಜನಿಸಿದ ಪಾಟೀಲರು ಮುಂಬೈ ನೂತನ ಕಲಾ ಮಂದಿರದಲ್ಲಿ ಕಲಿತು ಕಲಾ ಡಿಪ್ಲೋಮಾ ಪದವಿ ಪಡೆದುಕೊಂಡವರು. ನಂತರ ವಾರ್ತಾ ಇಲಾಖೆಯಲ್ಲಿ ಕೆಲಸದಲ್ಲಿದ್ದರೂ ತಮ್ಮ ಸೃಜನಶೀಲತೆಯನ್ನು ಕಲಾಕೃತಿಗಳ ಮೂಲಕ ಮುಂದುವರೆಸಿಕೊಂಡು ಬಂದಿದ್ದಾರೆ ಎಂದು ಹೇಳುತ್ತಾರೆ. ಅಲ್ಲದೆ ಅವರ ಕೃತಿಗಳ ಬಗ್ಗೆ ಹೇಳುತ್ತಾ ರಮ್ಯ ಮತ್ತು ನವ್ಯ ಶೈಲಿಗಳೆರಡರಲ್ಲೂ ಇವರು ಕೃತಿಗಳನ್ನು ರಚನೆಮಾಡುತ್ತಾರೆ. ಕೆಂಪು ಮತ್ತು ಹಳದಿ ಬಣ್ಣವನ್ನು ಇವರು ವಿಶೇಷವಾಗಿ ಬಳಸುತ್ತಾರೆ ಎಂದು ತಿಳಿಸುತ್ತ ಇವರ ಹತ್ತು ಕಲಾಕೃತಿಗಳನ್ನು ವಿಮರ್ಶಿಸಿದ್ದಾರೆ.

ಇದೇ ವರ್ಷದಲ್ಲಿ ಎಂ.ಬಿ.ಪಾಟೀಲರು ಹಲವಾರು ಕಡೆಗೆ ಕಲಾಪ್ರದರ್ಶನಗಳನ್ನು ಮಾಡಿದ್ದು ಕೆಲವು ಪತ್ರಿಕೆಗಳು ಅವರ ಬಗ್ಗೆ ಕಿರುಪರಿಚಯ ಹೊಂದಿದ ಲೇಖನಗಳನ್ನು ಪ್ರಕಟಿಸಿವೆ. ಇವುಗಳಲ್ಲಿ ಪ್ರಜಾಮತ ಪತ್ರಿಕೆಯಲ್ಲಿ ಸೋಮಶೇಖರ ಇಮ್ರಾಪೂರ ಅವರು ಪಾಟೀಲರ ಕಲೆ ಮತ್ತು ಕಲಾ ಬದುಕನ್ನು ಸಂಕ್ಷಿಪ್ತವಾಗಿ ತೆರೆದಿಟ್ಟಿದ್ದಾರೆ.[೭೫] ಬಣ್ಣಗಳ ಮೂಲಕ ನಿರಾತಂಕವಾಗಿ ತಮ್ಮ ಭಾವನೆಗಳನ್ನು ಹೊರಹಾಕುವ ಪಾಟೀಲರು ನವ್ಯ ಶೈಲಿಯ ಕಡೆಗೆ ಹೆಚ್ಚು ಒಲವು ಉಳ್ಳವರಾಗಿದ್ದಾರೆ ಎಂದು ಇಲ್ಲಿ ಅಭಿಪ್ರಾಯ ವ್ಯಕ್ತ ಪಡಿಸಿದ್ದಾರೆ.

ಇದೆ ವರ್ಷದಲ್ಲಿ ಪ್ರಜಾಜ್ಯೋತಿ ದಿನಪತ್ರಿಕೆಯಲ್ಲಿ ಪಾಟೀಲರ ಕುರಿತು ಲೇಖನ ಬರೆಯಲಾಗಿದೆ. ಇದರಲ್ಲಿ ಪಾಟೀಲರು ಬಣ್ಣ ಕುಂಚಗಳನ್ನು ಬಳಸಿ ಕೃತಿ ರಚಿಸುವಂತೆ ನಿರುಪಯೋಗಿ ವಸ್ತುಗಳನ್ನು ಬಳಸಿಕೊಂಡು ಬಣ್ಣ ಕುಂಚಗಳಿಲ್ಲದೆ ಅಂಟಿಸುವ ವಿಧಾನದಿಂದ ಕೋಲಾಜ್ ಕಲೆಯನ್ನು ರಚಿಸಿದ್ದಾರೆ ಎಂದು ಹೇಳಲಾಗಿದೆ[೭೬] ಅಲ್ಲದೆ ಅವರು ನವ್ಯಕಲೆಯ ಸಮರ್ಥ ಪ್ರತಿಪಾದಕರೆಂದು ಹೇಳಲಾಗಿದೆ.

೧೯೭೭ ರಲ್ಲಿ ಒಂದೇ ದಿನ ಎರಡು ಪತ್ರಿಕೆಗಳು ಪಾಟೀಲರ ಕುರಿತಾಗಿ ಕಿರುಲೇಖನ ಪ್ರಕಟಿಸಿವೆ. ವಿಶಾಲ ಕರ್ನಾಟಕವು 'ಕುಂಚ ಹಿಡದ ನೇಗಿಲಕೈ' ಎಂಬ ಶಿರ್ಷಿಕೆಯಲ್ಲಿ[೭೭] ಪಾಟೀಲರು ಕಲಾವಿದರಾಗಿ ರೂಪುಗೊಂಡ ವಿಧಾನವನ್ನು ಸ್ಥೂಲವಾಗಿ ಸಮೀಕ್ಷೆ ಮಾಡಿದೆ. ಅದರಂತೆ ಅದೆ ದಿನಪ್ರಕಟಿವಾದ 'ನೇತಾಜಿ' ಎಂಬ ದಿನ ಪತ್ರಿಕೆಯಲ್ಲಿ 'ಕಲೆಯ ಹೊಸ ಅಲೆ'

---

೭೪. ದೊಡ್ಡರಂಗೇಗೌಡ : ಎರಡು ಕುಂಚ, ಇಪ್ಪತ್ತುಚಿತ್ರ: ಸುಧಾ ಮೇ ೧೧, ೧೯೭೫-ಪುಟ-೧೮ ರಿಂದ ೨೧

೭೫. ಸೋಮಶೇಖರ ಇಮ್ರಾಪೂರ: ಪ್ರಜಾಮತ: ಮಾರ್ಚ ೨೩, ೧೯೭೫-ಪುಟ-೧೪ ರಿಂದ ೧೬.

೭೬. ಕುಂಚ ಬಣ್ಣಗಳ ಬಳಕೆಯಿಲ್ಲದ ಚಿತ್ರಕೃತಿಗಳು : ಪ್ರಜಾಜ್ಯೋತಿ ೨೩, ಜುಲೈ ೧೯೭೫: ಪುಟ-೫ ರಿಂದ ೭

೭೭. ಕುಂಚ ಹಿಡಿದ ನೇಗಿಲಕೈ : ವಿಶಾಲ ಕರ್ನಾಟಕ : ೨೪-೭-೧೯೭೭-ಪುಟ-೩

ಎಂಬ ತಲೆ ಬರಹದಡಿಯಲ್ಲಿ[೭೮] ಪಾಟೀಲರು ನವ್ಯಕಲೆಯ ಕಡೆಗೆ ಆಕರ್ಷಿತವಾಗಿರುವುದನ್ನು ಹೇಳಲಾಗಿದೆ. ೧೯೭೯ ರಲ್ಲಿ ಉದಯವಾಣಿ ಪತ್ರಿಕೆಯಲ್ಲಿ ಸಿ. ಪಿ. ಹೇಮಗಿರಿಮಠ ಅವರು ಪಾಟೀಲರ ಕುರಿತು ಲೇಖನ ಬರೆದಿದ್ದಾರೆ. 'ಪ್ರೌಢ ಕಲಾವಿದ ಪಾಟೀಲ'[೭೯] ಎಂಬ ಈ ಲೇಖನದಲ್ಲಿ ಅವರ ಹುಟ್ಟು ಬೆಳವಣಿಗೆಯನ್ನು ಸ್ಥೂಲವಾಗಿ ಹೇಳಿ ಅವರ ಕೋಲಾಜ್ ಕಲಾವಿಧಾನವನ್ನು ವಿಶೇಷವಾಗಿ ಪರಿಚಯಿಸಲಾಗಿದೆ.

೧೯೮೧ ರಲ್ಲಿ 'ದಿ ಹಿಂದೂ' ಇಂಗ್ಲೀಷ ಪತ್ರಿಕೆಯಲ್ಲಿ ಎಂ.ಬಿ.ಪಾಟೀಲರ ಕುರಿತು ಪರಿಚಯ ಲೇಖನ ಪ್ರಕಟಗೊಂಡಿದೆ.[೮೦] ಇದರಲ್ಲಿ ಅವರ ಗ್ರಾಮೀಣ ಬದುಕಿನ ಹಿನ್ನೆಲೆ ನವ್ಯಕಲಾಶೈಲಿ, ಕೃತಿರಚನಾ ವಿಧಾನಗಳ ಬಗ್ಗೆ ಸ್ಥೂಲನೋಟ ಕೊಡಲಾಗಿದೆ.

೧೯೮೩ ರಲ್ಲಿ ಡೆಕ್ಕನ್ ಹೆರಾಲ್ಡ್ ಪತ್ರಿಕೆಯು ಪಾಟೀಲರ ಕಲೆಯ ಬಗ್ಗೆ ಸ್ಥೂಲ ಮಾಹಿತಿ ಒಳಗೊಂಡ ಕಿರುಲೇಖನ ಪ್ರಕಟಿಸಿದೆ.[೮೧] ಇದರಲ್ಲಿ ಪಾಟೀಲರು ರಚಿಸಿದ ಪೋಸ್ಟರ್ ಕಲಾಕೃತಿಗಳ ಬಗ್ಗೆ ವಿವರಿಸಲಾಗಿದೆ. ಅಲ್ಲದೆ ಇದೇ ವರ್ಷದಲ್ಲಿ ಕನ್ನಡಪ್ರಭ ವಿಶೇಷ ಪುರವಣೆಯಲ್ಲಿ ಪಾಟೀಲರ ಕಲೆ ಕಲಾಕೃತಿಗಳ ಬಗ್ಗೆ ಲೇಖನವನ್ನು ರಾಜಶೇಖರ ಎಂಬವರು ಬರೆದಿದ್ದಾರೆ.[೮೨] ಇದರಲ್ಲಿ ಪಾಟೀಲರು ನವ್ಯಕಲೆಯಲ್ಲಿ ಪಡೆದುಕೊಂಡ ಪರಿಣಿತಿಯನ್ನು ಕುರಿತು ವಿವೇಚಿಸಲಾಗಿದೆ.

೧೯೮೩ ರಲ್ಲಿ ಇಂಡಿಯನ್ ಎಕ್ಸ್‌ಪ್ರೆಸ್ ಪತ್ರಿಕೆಯು ಸಹಿತ ಪಾಟೀಲರ ಕಲೆ ಮತ್ತು ಕೃತಿಗಳ ಬಗ್ಗೆ ಪರಿಚಯಾತ್ಮಕ ಕಿರುಲೇಖನ ಪ್ರಕಟಿಸಿದೆ.[೮೩] ಪದ್ಮಕಿಶನ್ ಎಂಬವರು ಈ ಲೇಖನದಲ್ಲಿ ಪಾಟೀಲರ ಕಲಾಶೈಲಿ ನವ್ಯತೆಗೆ ತಿರುಗಿದ ಬಗ್ಗೆ ಮತ್ತು ಅದರ ಒಳತಿರುಳಿನ ಕುರಿತು ವಿವೇಚಿಸಿದ್ದಾರೆ.

೧೯೮೫ ರಲ್ಲಿ ಸಂಜೆವಾಣಿ ದಿನ ಪತ್ರಿಕೆಯಲ್ಲಿ ಪ್ರಹ್ಲಾದ ಬೆಟಗೇರಿ ಅವರು ಪಾಟೀಲರ ಬಗ್ಗೆ ಕಿರುಲೇಖನ ಬರೆದಿದ್ದಾರೆ.[೮೪] ಇದರಲ್ಲಿ ಅವರ ಕೃತಿ ರಚನಾ ವಿಧಾನ, ಮಾಧ್ಯಮಗಳು, ಕಲಾಶೈಲಿ, ಪ್ರಭಾವ, ಪ್ರೇರಣೆಗಳನ್ನು ಸ್ಥೂಲವಾಗಿ ಬಿಂಬಿಸಿದ್ದಾರೆ.

೧೯೮೭ ರಲ್ಲಿ ಕನ್ನಡ ಪ್ರಭ ಪತ್ರಿಕೆಯಲ್ಲಿ ಎಚ್. ಎನ್. ಸುರೇಶ ಅವರು ಪಾಟೀಲರ ಬಗ್ಗೆ ಧೀರ್ಘ ಲೇಖನ ಬರೆದಿದ್ದಾರೆ.[೮೫] ಇದರಲ್ಲಿ ಪಾಟೀಲರ ಕಲಾಬದುಕು,

---

೭೮. ಕಲೆಯ ಹೊಸ ಅಲೆ : ನೇತಾಜಿ ದಿನ ಪತ್ರಿಕೆ : ೨೪-೭-೧೯೭೭-ಪುಟ-೨

೭೯. ಸಿ. ಪಿ. ಹೇಮಗಿರಿಮಠ : ಪ್ರೌಢ ಕಲಾವಿದ ಪಾಟೀಲ : ಉದಯವಾಣಿ : ೨೪-೦೩-೧೯೭೯-ಪುಟ-೪

೮೦. ನವ್ಯಕಲಾ ಪ್ರವೀಣ ಪಾಟೀಲ : ದಿ. ಹಿಂದೂ : ೧೬-೧೦-೧೯೮೧-ಪುಟ-೧೧

೮೧. ಡೆಕ್ಕನ್ ಹೆರಾಲ್ಡ್ : ರವಿವಾರ, ಮೇ ೧, ೧೯೮೩ : ಪುಟ-೩

೮೨. ಎಸ್.ಕೆ. ರಾಜಶೇಖರ್ : ನವ್ಯಕಲಾ ಪ್ರವೀಣ ಪಾಟೀಲ : ಕನ್ನಡ ಪ್ರಭ : ೧೧-೧೨-೧೯೮೩: ಪುಟ-೩

೮೩. ಪದ್ಮಕಿಶನ್ : ಮಾಸ್ಟರ ಆಫ್ ಟೆಕ್ನಿಕ್ : ಇಂಡಿಯನ್ ಎಕ್ಸಪ್ರೆಸ್ : ೦೨-೦೭-೧೯೮೩ : ಪುಟ-೫

೮೪. ಪ್ರಹ್ಲಾದ ಬೆಟಗೇರಿ : ವಿಶಿಷ್ಟ ಕಲಾಪ್ರಕಾರಗಳ ಕಲಾವಿದ : ಸಂಜೆವಾಣಿ : ೨೩-೦೬-೧೯೮೫ : ಪುಟ-೩

೮೫. ಎಚ್.ಎನ್. ಸುರೇಶ: ನೀವು ಸಾಯುತ್ತೀರಿ, ನಾನು ಸಾಯುವುದಿಲ್ಲ : ಕನ್ನಡ ಪ್ರಭ : ೧-೨-೧೯೮೭ : ಪುಟ-೬

ಕಲಾಕೃತಿಗಳು, ಕಲಾಶೈಲಿ, ಕಲಾ ಅಧ್ಯಯನ, ಕಲೆಯ ವಿಶಿಷ್ಟ ಪ್ರಯೋಗಗಳು ಪ್ರಭಾವ, ಪ್ರೇರಣೆಗಳು ಮತ್ತು ಸಂಕ್ಷಿಪ್ತ ಪರಿಚಯವನ್ನು ಕೊಟ್ಟಿದ್ದಾರೆ. ಜೊತೆಗೆ ಮೂರು ಕಲಾಕೃತಿಗಳ ಛಾಯಾಚಿತ್ರಗಳನ್ನು ಕೊಡಲಾಗಿದೆ.

೧೯೯೪ ರಲ್ಲಿ ಹೇಮಂತರಾಜ್ ಎಂಬವರು ಹೊಸದಿಗಂತ ಎಂಬ ಪತ್ರಿಕೆಯಲ್ಲಿ ಪಾಟೀಲರ ಬಗ್ಗೆ ಕಿರುಲೇಖನ ಬರೆದಿದ್ದಾರೆ.[೮೬] ಇಲ್ಲಿ ಅವರೊಬ್ಬ ಪ್ರಂಯೋಗಶೀಲ ಕಲಾವಿದರಾಗಿದ್ದರೂ ಭಾವಚಿತ್ರ, ವ್ಯಕ್ತಿಚಿತ್ರ ರಚನೆಯಲ್ಲಿ ಬಹುಮಟ್ಟಿನ ಸಾಧನೆ ಮಾಡಿದವರಾಗಿದ್ದಾರೆ ಎಂದು ಹೇಳಲಾಗಿದೆ. ಜೊತೆಗೆ ಅವರ ಭಾವಚಿತ್ರ ರಚನಾ ವಿಧಾನ ಮತ್ತು ಮಾಧ್ಯಮಗಳ ಬಗ್ಗೆ ಸ್ಥೂಲವಾಗಿ ಬಿಂಬಿಸಲಾಗಿದೆ. ೧೯೯೬ ರಲ್ಲಿ ಪದ್ಮರಾಜ ದಂಡಾವತಿ ಮಠವರು ಪ್ರಜಾವಾಣಿ ಪತ್ರಿಕೆಯಲ್ಲಿ ಪಾಟೀಲರ ಬಗ್ಗೆ ಲೇಖನ ಬರೆದಿದ್ದಾರೆ.[೮೭] ಪ್ರಯೋಗಶೀಲ ಕಲಾವಿದ ಎಂಬ ಶಿರ್ಷಿಕೆ ಅಡಿಯಲ್ಲಿ ಪಾಟೀಲರ ಕಲಾಕೃತಿ, ಕಲಾಶೈಲಿ, ರಚನಾ ವಿಧಾನ, ಮಾಧ್ಯಮಗಳು, ಪ್ರಭಾವ ಮುಂತಾದ ಸಂಗತಿಗಳನ್ನು ಚರ್ಚಿಸಿದ್ದಾರೆ.

೧೯೯೮ ರಲ್ಲಿ 'ಇಷುಧಿ' ಎಂಬ ಪತ್ರಿಕೆಯಲ್ಲಿ ಹೇಮಂತರಾಜ್ ಅವರು ಪಾಟೀಲರ ಕಲೆ ಮತ್ತು ಕಲಾಕೃತಿಗಳ ಕುರಿತು ಕಿರು ಲೇಖನ ಬರೆದಿದ್ದಾರೆ.[೮೮] ನೈಜ ಹಾಗೂ ಅಕಾಡಮಿಕ್ ಕಲಾಶೈಲಿಗಳ ಸಮ್ಮಿಶ್ರಣ ಇವರ ಶೈಲಿಯಲ್ಲಿದೆ ಎಂದು ಇಲ್ಲಿ ಹೇಳಲಾಗಿದೆ.

೨೦೦೧ ರಲ್ಲಿ ಉದಯವಾಣಿ ಪತ್ರಿಕೆಯಲ್ಲಿ ಎಲ್.ಶಿವಲಿಂಗಪ್ಪ. ಅವರು ಪಾಟೀಲರ ಕಲೆ ಮತ್ತು ಕಲಾಶೈಲಿಗಳ ಸ್ಥೂಲವಾದ ವಿವೇಚನೆ ಮಾಡಿದ್ದಾರೆ.[೮೯] ವಿಶೇಷವಾಗಿ ಅವರ ವರ್ಣಬಳಕೆಯ ವಿಧಾನವನ್ನು ಇಲ್ಲಿ ಪ್ರಸ್ತಾಪಿಸಲಾಗಿದೆ.

೨೦೦೨ ರಲ್ಲಿ ವಿಜಯ ಕರ್ನಾಟಕ ದಿನಪತ್ರಿಕೆಯಲ್ಲಿ ಬಿ.ವಿ.ಕೆ.ಶಾಸ್ತ್ರೀ ಅವರು ಪಾಟೀಲರ ಕಲೆ ಮತ್ತು ಕಲಾಶೈಲಿಯ ಬಗ್ಗೆ ಕಿರು ಲೇಖನ ಬರೆದಿದ್ದಾರೆ.[೯೦] ಇಲ್ಲಿ ಅವರ ಅಮೂರ್ತ ಶೈಲಿಯ ಬಗ್ಗೆ ಗಮನ ಸೆಳೆಯಲಾಗಿದೆ. ಇದೇ ವರ್ಷದಲ್ಲಿ ನಾಗರಿಕ ದಿನಪತ್ರಿಕೆಯು ಪಾಟೀಲರ ಕಲಾ ಬದುಕು ಮತ್ತು ಕಲೆಯ ಬಗ್ಗೆ ಪರಿಚಯಾತ್ಮಕ ಲೇಖನ ಪ್ರಕಟಿಸಿದೆ.[೯೧] ಇದರಲ್ಲಿ ಅವರು ಕಲಾ ಶಿಕ್ಷಣ ಪಡೆದ ರೀತಿ, ಕಲಾ ಪ್ರದರ್ಶನಗಳು, ಕಲಾ ಶಿಬಿರಗಳು, ಕಲಾ ಚಟುವಟಿಕೆಗಳಲ್ಲಿ ಭಾಗವಹಿಸಿದ ಸ್ಥೂಲ ಮಾಹಿತಿ ನೀಡಲಾಗಿದೆ.

---

೮೬. ಹೇಮಂತರಾಜ್ : ಭಾವಚಿತ್ರಕಲಾವಿದ ಪಾಟೀಲ : ಹೊಸದಿಗಂತ ಬೆಂಗಳೂರು : ೪-೯-೧೯೯೪ : ಪುಟ-೫
೮೭. ಪದ್ಮರಾಜ ದಂಡಾವತಿಮಠ : ಪ್ರಯೋಗಶೀಲ ಕಲಾವಿದ ಪಾಟೀಲ ಪ್ರಜಾವಾಣಿ : ೨೧-೪-೧೯೯೬ : ಪಟು-೪
೮೮. ಹೇಮಂತರಾಜ್ : ಸೃಜನಶೀಲ ಕಲಾವಿದ ಎಂ.ಬಿ.ಪಾಟೀಲರ : ಇಷುಧಿ : ಸಪ್ಟಂಬರ್ ೧೯೯೮ : ಪುಟ-೮
೮೯. ಎಲ್.ಶಿವಲಿಂಗಪ್ಪ. ಯುನಿವರ್ಸಲ್ ಆರ್ಟ ಗ್ಯಾಲರಿ : ಉದಯವಾಣಿ : ೧೫-೧೨-೨೦೦೧. ಪುಟ-೪
೯೦. ಬಿ.ವಿ.ಕೆ. ಶಾಸ್ತ್ರಿ : ಅಮೂರ್ತ ಅನುಭವದ ಕಲಾವಿದರ : ವಿಜಯ ಕರ್ನಾಟಕ : ೨೩-೦೪-೨೦೦೨ : ಪುಟ-೬.
೯೧. ಆಧುನಿಕ ಕಲಾವಿದ ಪಾಟೀಲರು : ನಾಗರಿಕ ಪತ್ರಿಕೆ : ೨೫-೦೬-೨೦೦೨ : ಪುಟ-೩

೨೦೦೨ ರಲ್ಲಿ ಸಂಯುಕ್ತ ಕರ್ನಾಟಕ ಪತ್ರಿಕೆ ಸಹಿತ ಪಾಟೀಲರ ಕಲೆ ಮತ್ತು ಕೃತಿಗಳ ಬಗ್ಗೆ ಕಿರು ಲೇಖನ ಪ್ರಕಟಿಸಿದೆ.[೬೨] ಇಲ್ಲಿ ಅವರ ಕಲಾಶೈಲಿ, ಮಾಧ್ಯಮಗಳು ಆಧುನಿಕತೆಯ ಪ್ರಭಾವ ಚಿತ್ರದ ವಸ್ತುವಿಷಯಗಳು ಮುಂತಾದ ಸಂಗತಿಗಳನ್ನು ಸ್ಥೂಲವಾಗಿ ಹೇಳಿ ಕರ್ನಾಟಕದ ಹುಸೇನ ಎಂದು ಅವರನ್ನು ಕರೆಯಲಾಗಿದೆ.

೨೦೦೨ ರಲ್ಲಿ ಉದಯವಾಣಿ ಪತ್ರಿಕೆಯಲ್ಲಿ ಎಲ್.ಶಿವಲಿಂಗಪ್ಪ ಅವರು ಪಾಟೀಲರ ಬಗ್ಗೆ ಕಿರು ಮಾಹಿತಿ ಒಳಗೊಂಡ ಲೇಖನವನ್ನು ಬರೆದಿದ್ದಾರೆ.[೬೩] ರಾಜ್ಯಮಟ್ಟದ ಆಚಾರ್ಯ ಪ್ರಶಸ್ತಿ ಪಾಟೀಲರಿಗೆ ದೊರಕಿದ ಸಂದರ್ಭದಲ್ಲಿ ಬಂದ ಈ ಲೇಖನದಲ್ಲಿ ಅವರ ಕಲಾ ಬದುಕಿನ ಹಿನ್ನೆಲೆ, ಕಲಾಶೈಲಿ, ಕೃತಿಗಳು, ರಚನಾ ವಿಧಾನ, ಮಾಧ್ಯಮ, ವಸ್ತು ವಿಷಯಗಳ ಬಗ್ಗೆ ಚರ್ಚಿಸಲಾಗಿದೆ.

೨೦೦೨ ರಲ್ಲಿ ಸಂಯಕ್ತ ಕರ್ನಾಟಕದಲ್ಲಿ ಹೇಮಂತರಾಜ್ ಎಂಬವರು ಪಾಟೀಲರ ಕಲಾ ಬದುಕು ಮತ್ತು ಕಲಾಶೈಲಿಗಳ ಬಗ್ಗೆ ಸಂಕ್ಷಿಪ್ತ ಮಾಹಿತಿ ನೀಡಿದ್ದಾರೆ.[೬೪] ಪಾಟೀಲರ ಕಲೆಯ ಗೀಳು, ಹಳ್ಳಿಯ ಪರಿಸರ, ನವ್ಯತೆಯ ಪ್ರಭಾವ, ಭಿತ್ತಿಚಿತ್ರರಚನೆ ಮುಂತಾದ ಸಂಗತಿಗಳ ಬಗ್ಗೆ ಬೆಳಕು ಚಲ್ಲಿದೆ.

೨೦೦೩ ರಲ್ಲಿ ಪೌರವಾಣಿ ಪತ್ರಿಕೆಯು ಎಂ.ಬಿ. ಪಾಟೀಲರ ಸ್ಥೂಲ ಮಾಹಿತಿ ಒಳಗೊಂಡ ಕಿರುಲೇಖನ ಪ್ರಕಟಿಸಿದೆ.[೬೫] ಅವರ ಹುಟ್ಟು, ಶಿಕ್ಷಣ, ವೃತ್ತಿ ಪ್ರವೃತ್ತಿಗಳನ್ನು ಸಂಕ್ಷಿಪ್ತವಾಗಿ ತಿಳಿಸಲಾಗಿದೆ.

೨೦೦೪ರಲ್ಲಿ ಪ್ರಜಾವಾಣಿ ಪತ್ರಿಕೆಯಲ್ಲಿ ಕಟ್ಟೆ ಗುರುರಾಜ ಎಂಬವರು ಪಾಟೀಲರ ಬಗ್ಗೆ ಲೇಖನ ಬರೆದಿದ್ದಾರೆ.[೬೬] ಇಲ್ಲಿ ಅವರ ಕಲಾಶಿಕ್ಷಣ, ಕಲಾಶೈಲಿ, ಚಿತ್ರರಚನಾ ವಿಧಾನ, ಬಣ್ಣದ ಬಳಕೆ, ವಸ್ತು ವಿಷಯಗಳ ಮಾಹಿತಿ ಕೊಡಲಾಗಿದೆ. ಅಲ್ಲದೆ ಅವರೊಬ್ಬ ವಿಶಿಷ್ಟ ಭಾವಚಿತ್ರ ಕಲಾವಿದ ಎಂದು ಹೇಳಲಾಗಿದೆ.

೨೦೦೭ ರಲ್ಲಿ ಪ್ರಜಾವಾಣಿ ಪತ್ರಿಕೆಯು ಪಾಟೀಲರ ಕಲೆ ಮತ್ತು ಕಲಾಕೃತಿಗಳ ಬಗ್ಗೆ ವಿಶೇಷ ಮಾಹಿತಿಯನ್ನು ಕೊಟ್ಟಿದೆ.[೬೭] ಇಲ್ಲಿ ಅವರ ೨೫ ಕಲಾಕೃತಿಗಳ ವಿಮರ್ಶೆಯನ್ನು ಕಿರು ಪ್ರಮಾಣದಲ್ಲಿ ಮಾಡಲಾಗಿದೆ.

---

೬೨. ಕರ್ನಾಟಕದ ಹುಸೇನ : ಎಂ.ಬಿ.ಪಾಟೀಲ : ಸಂಯುಕ್ತ ಕರ್ನಾಟಕ : ೧೫-೦೮-೨೦೦೨ : ಪುಟ-೮

೬೩. ಎಲ್.ಶಿವಲಿಂಗಪ್ಪ.: ಪಾಟೀಲರಿಗೊಂದು ಆಚಾರ್ಯ ಪ್ರಶಸ್ತಿ : ಉದಯವಾಣಿ : ೨೪-೦೯-೨೦೦೨ : ಪುಟ-೨

೬೪. ಹೇಮಂತರಾಜ್ : ಕುಂಚದಲ್ಲಿ ಅರಳಿದ ಭಾವಪೂರ್ಣ ಚಿತ್ರಕಾರ : ಸಂಯುಕ್ತ ಕರ್ನಾಟಕ : ೦೫-೧೦-೨೦೦೨ : ಪುಟ-೮

೬೫. ಪೌರವಾಣಿ ಪತ್ರಿಕೆ : ೨೪-೧೨-೨೦೦೩ : ಪುಟ-೬

೬೬. ಕಟ್ಟೆ ಗುರುರಾಜ : ಕುಂಚ ಪ್ರಪಂಚದ ಚೇತನ : ಪ್ರಜಾವಾಣಿ : ೧೫-೦೨-೨೦೦೪ : ಪುಟ-೪

೬೭. ಪಾಟೀಲರ ಕಲಾಕೃತಿಗಳ ದರ್ಶನ : ಪ್ರಜಾವಾಣಿ : ೧೦-೦೨-೨೦೦೭ : ಪುಟ-೩

೨೦೦೭ ರಲ್ಲಿ ವಿಜಯ ಕರ್ನಾಟಕವು ಪಾಟೀಲರ ಕಲಾಕೃತಿಗಳ ವಿಶ್ಲೇಷಣೆ ಮಾಡಿ ಕಿರುಲೇಖನ ಪ್ರಕಟಿಸಿದೆ.[೯೮] ಇಲ್ಲಿ ಅವರ ಚಿತ್ರರಚನಾ ವಿಧಾನ, ವಿಷಯಗಳು, ಬಹುಮಾಧ್ಯಮದಲ್ಲಿ ಚಿತ್ರಿಸುವ ಅವರ ಸಾಮರ್ಥ್ಯ, ನವ್ಯಕಲೆಯ ಪ್ರತಿಭಾಶಕ್ತಿ ಇವುಗಳ ಕುರಿತು ತಿಳಿಸಲಾಗಿದೆ. ೨೦೦೭ ರಲ್ಲಿ ಅಗ್ನಿ ಪತ್ರಿಕೆಯಲ್ಲಿ ಬಸವರಾಜ ಎಂಬುವರು ಪಾಟೀಲರ ಕಲೆ ಮತ್ತು ಬದುಕಿನ ಬಗ್ಗೆ ಕಿರು ಮಾಹಿತಿ ನೀಡಿದ್ದಾರೆ.[೯೯] ಇಂಥವರೂ ಇದ್ದಾರೆ. ಎಂಬ ಶೀರ್ಷಿಕೆ ಅಡಿಯಲ್ಲಿ ಅವರ ಕಲಾ ಪ್ರತಿಭೆಯನ್ನು ಕುರಿತು ಹೇಳಿದ್ದಾರೆ.

೨೦೦೭ ರಲ್ಲಿ ದಿ ಹಿಂದೂ ಇಂಗ್ಲೀಷ ಪತ್ರಿಕೆಯಲ್ಲಿ ಗಿರಿಧರ ಖಾಸನೀಸ್ ಎಂಬವರು ಪಾಟೀಲರ ಕಲಾಕೃತಿಗಳ ವಿಶ್ಲೇಷಣೆ ಮಾಡಿದ್ದಾರೆ.[೧೦೦] ಅವರ ೨೫ ಕಲಾಕೃತಿಗಳನ್ನು ಇಲ್ಲಿ ವಿಮರ್ಶಿಸಲಾಗಿದ್ದು, ಆಧುನಿಕ ಶೈಲಿಯ ಅಮೂರ್ತ ಚಿತ್ರಗಳ ತಿರುಳನ್ನು ಬಿಂಬಿಸಲಾಗಿದೆ.

೨೦೦೮ ರಲ್ಲಿ ಪ್ರಜಾವಾಣಿ ಪತ್ರಿಕೆಯಲ್ಲಿ ಗ್ಯಾಲರಿ ವಿಭಾಗದಲ್ಲಿ ಡಿ.ಎಸ್. ಚೌಗಲೆ ಅವರು ಪಾಟೀಲರ ಬಗ್ಗೆ ಪರಿಚಯ ಲೇಖನ ಬರೆದಿದ್ದಾರೆ.[೧೦೧] ಇಲ್ಲಿ ಅವರ ಕಲಾರಚನೆ, ಚಿತ್ರಗಳ ವಸ್ತು ವಿಷಯ, ರಚನಾ ವಿಧಾನ, ಪ್ರಭಾವ ಪ್ರಾಚೀನತೆಯಲ್ಲಿ ಆಧುನಿಕತೆ ಮುಂತಾದ ಅಂಶಗಳ ಬಗ್ಗೆ ಬೆಳಕು ಬೀರಲಾಗಿದೆ. ಇದೆ ವರ್ಷದಲ್ಲಿ ಪಾಟೀಲರಿಗೆ ಕನ್ನಡ ಸಾಹಿತ್ಯ ಪರಿಷತ್‌ನ ಗೌರವ ಲಭಿಸಿದ ಸಂದರ್ಭದಲ್ಲಿ ಎಲ್. ಶಿವಲಿಂಗಪ್ಪ. ಅವರು[೧೦೨] ಉದಯವಾಣಿ ಪತ್ರಿಕೆಯಲ್ಲಿ ಅವರ ಪರಿಚಯಾತ್ಮಕ ಲೇಖನ ಬರೆದಿದ್ದಾರೆ. ಇಲ್ಲಿ ಅವರ ಬದುಕು, ಕಲೆ, ಕಲಾಕೃತಿಗಳ ಬಗ್ಗೆ ಕಿರು ಮಾಹಿತಿ ಕೊಡಲಾಗಿದೆ.

ಹೀಗೆ ಅನೇಕ ಲೇಖನಗಳು ಎಂ.ಬಿ.ಪಾಟೀಲರ ಕಲಾಬದುಕು, ಕಲಾಶೈಲಿ, ಮತ್ತು ಕೃತಿಗಳ ಬಗ್ಗೆ ಕಿರು ಮಾಹಿತಿ ನೀಡುತ್ತವೆ. ಈ ಬಗೆಯ ಪತ್ರಿಕಾ ಲೇಖನಗಳಲ್ಲದೆ ಕೆಲವು ಪುಸ್ತಕಗಳು ಮತ್ತು ಯೋಜನಾವರದಿಗಳು ಸಹಿತ ಎಂ.ಬಿ.ಪಾಟೀಲರ ಕುರಿತು ರಚನೆಯಾಗಿದ್ದು ಅವು ಕೆಳಗಿನಂತಿವೆ.

೨೦೦೦ ದಲ್ಲಿ ಕರ್ನಾಟಕ ರಾಜ್ಯ ಲಲಿತಕಲಾ ಅಕಾಡೆಮಿಯು ಕಲಾವಿದರು ಮಾಲಿಕೆಯಲ್ಲಿ ಎಂ.ಬಿ.ಪಾಟೀಲರ ಬಗ್ಗೆ ಪುಸ್ತಕ ಪ್ರಕಟಿಸಿದೆ.[೧೦೩] ಬಿ.ಎಸ್. ವೆಂಕಟಲಕ್ಷ್ಮೀ ಎಂಬವರು ಬರೆದ ಈ ಕಿರು ಪುಸ್ತಕದಲ್ಲಿ ಪಾಟೀಲರ ಬಾಲ್ಯ ಕಲಾ ಶಿಕ್ಷಣ, ವೃತ್ತಿ ಬದುಕು, ಕಲಾಕೃತಿಗಳ

---

೯೮. ಕುಂಚದಲ್ಲಿ ಕಲೆಯ ದಿವ್ಯ ದರ್ಶನ : ವಿಜಯ ಕರ್ನಾಟಕ : ೧೨-೦೨-೨೦೦೭ : ಪುಟ-೪

೯೯. ಬಸವರಾಜು : ಇಂಥವರು ಇದ್ದಾರೆ : ಅಗ್ನಿ ಪತ್ರಿಕೆ : ೨೨-೦೨-೨೦೦೭ : ಪುಟ-೬

೧೦೦. ಗಿರಿಧರ ಖಾಸನೀಸ್ : ರಿಫ್ಲೆನ್ಸ್ ಫಾರ್ಮ್ಸ್ : ದಿ.ಹಿಂದೂ : ೨೭-೦೨-೨೦೦೭ : ಪುಟ-೮

೧೦೧. ಡಿ. ಎ. ಚೌಗಲೆ : ಪಾಟೀಲರ ಗ್ರಾಮ್ಯ ಚಲುವೆ : ಪ್ರಜಾವಾಣಿ : ೦೮-೦೨-೨೦೦೮ : ಪುಟ-೪

೧೦೨. ಎಲ್.ಶಿವಲಿಂಗಪ್ಪ : ಕಲಾವಿದ ಪಾಟೀಲರಿಗೆ ಕ.ಸಾ.ಪ ಗೌರವ : ಉದಯವಾಣಿ : ೪-೩-೨೦೦೮ : ಪುಟ-೬

೧೦೩. ಬಿ.ಎಸ್. ವೆಂಕಟಲಕ್ಷ್ಮೀ : ಎಂ.ಬಿ.ಪಾಟೀಲ : ಕರ್ನಾಟಕ ಲಲಿತಕಲಾ ಅಕಾಡಮಿ ಬೆಂಗಳೂರು -೨೦೦೦

ಬಗ್ಗೆ ಸ್ಥೂಲವಾಗಿ ಹೇಳಲಾಗಿದೆ. ಇಂಗ್ಲೀಷ ಹಾಗೂ ಕನ್ನಡ ಭಾಷೆಗಳಲ್ಲಿ ಈ ಬರವಣಿಗೆ ಇದ್ದು ಕೆಲವು ಕೃತಿಗಳನ್ನು ವಿಮರ್ಶಿಸಲಾಗಿದೆ.

೨೦೦೫ ರಲ್ಲಿ ಗುಲಬರ್ಗ ಮತ್ತು ಕನ್ನಡ ವಿಶ್ವವಿದ್ಯಾಲಯಗಳಲ್ಲಿ ಎಂ. ಬಿ. ಪಾಟೀಲರ ಬಗ್ಗೆ ಎರಡು ಸಂಶೋಧನಾ ವರದಿಗಳನ್ನು ಸ್ನಾತಕೋತ್ತರ ತರಗತಿಯ ಹಿನ್ನೆಲೆಯಲ್ಲಿ ಮಂಡಿಸಲಾಗಿದೆ. ಸ್ವಪ್ನಾ ಎಂ. ಪಾಟೀಲ ಎಂಬುವರು[೧೦೪] ಎಂ.ಎಫ್.ಎ ಸ್ನಾತಕೋತ್ತರ ಪದವಿ ಹಿನ್ನೆಲೆಯಲ್ಲಿ ಗುಲಬರ್ಗಾ ವಿಶ್ವವಿದ್ಯಾಲಯಕ್ಕೆ ಕಿರು ಸಂಶೋಧನಾ ವರದಿಯನ್ನು ಸಲ್ಲಿಸಿದ್ದಾರೆ. ಕಲಾವಿದ ಎಂ.ಬಿ.ಪಾಟೀಲ ಎಂಬ ಶಿರ್ಷಿಕೆಯ ಈ ಕಿರು ಯೋಜನಾ ವರದಿಯಲ್ಲಿ ಕೇವಲ ಮೂರು ಅಧ್ಯಾಯಗಳನ್ನು ಮಾಡಿಕೊಂಡು ವಿಷಯ ಪ್ರಸ್ತಾಪಿಸಲಾಗಿದೆ. ಪಾಟೀಲರ ಬಾಲ್ಯ, ಶಿಕ್ಷಣ, ವೃತ್ತಿ ಬದುಕು, ಕಲೆ ಮತ್ತು ಕಲಾಶೈಲಿಗಳು, ಪ್ರಶಸ್ತಿ ಗೌರವಗಳು ಹೀಗೆ ಹಲವಾರು ಸಂಗತಿಗಳನ್ನು ಹೇಳಿದ್ದರೂ ಒಂದು ನಿಯಮಿತ ಕ್ರಮವಿಲ್ಲದೆ ಬೇಸರ ಮೂಡಿಸುತ್ತದೆ ಅಲ್ಲದೆ ವಿಷಯಗಳನ್ನು ನಿರೂಪಿಸುವಾಗ ಸ್ಪಷ್ಟತೆ ಕಂಡುಬರುವುದಿಲ್ಲ. ಅಲ್ಲದೆ ಕಲಾಕೃತಿಯ ಬಗ್ಗೆ ವಿಮರ್ಶೆ, ಕಲಾಶೈಲಿ, ರಚನಾವಿಧಾನ ಇವುಗಳ ಕುರಿತಾಗಿ ಯಾವುದೇ ರೀತಿಯ ಸಂಗತಿಗಳನ್ನು ಚರ್ಚಿಸಲಾಗಿಲ್ಲ.

ಇದೇ ಶೈಕ್ಷಣಿಕ ಅವಧಿಯಲ್ಲಿ ಸುರೇಖಾ ಪಾಟೀಲ ಎಂಬವರು ಎಂ.ವಿ.ಎ ಸ್ನಾತಕೋತ್ತರ ಪದವಿಯ ಹಿನ್ನೆಲೆಯಲ್ಲಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸಿದ ಕಿರು ಯೋಜನಾ ವರದಿಯು ಎಂ.ಬಿ.ಪಾಟೀಲರ ಕುರಿತಾಗಿದೆ.[೧೦೫] ಇಲ್ಲಿ ಒಟ್ಟು ಏಳು ಅಧ್ಯಾಯಗಳನ್ನು ಮಾಡಿಕೊಂಡು ವಿಷಯ ನಿರೂಪಿಸಲಾಗಿದೆ. ಅಧ್ಯಯನದ ಉದ್ದೇಶವನ್ನು ಮೊದಲ ಅಧ್ಯಾಯದಲ್ಲಿ ಹೇಳಲಾಗಿದೆ. ಮುಂದಿನ ಅಧ್ಯಾಯಗಳಲ್ಲಿ ಬಾಲ್ಯ ಜೀವನ, ಸಾಂಸ್ಕೃತಿಕ ಪರಿಸರ, ಕಲಾವ್ಯಾಸಂಗ, ವೃತ್ತಿ ಜೀವನ, ಕಲಾ ಚಟುವಟಿಕೆ, ರೇಖಾ ಚಿತ್ರಗಳು, ವರ್ಣ ಚಿತ್ರಗಳು ಪ್ರಶಸ್ತಿ ಪುರಸ್ಕಾರಗಳು ಹೀಗೆ ವಿವಿಧ ಸಂಗತಿಗಳ ಬಗ್ಗೆ ಸಂಕ್ಷಿಪ್ತವಾಗಿ ತಿಳಿಸಲಾಗಿದೆ. ಜೀವನದ ಬಗ್ಗೆ ಹೇಳುವಾಗ ಕಂಡು ಬಂದ ಕ್ರಮಬದ್ಧತೆ ಕಲಾಕೃತಿಗಳ ವಿಶ್ಲೇಷಣೆಯಲ್ಲಿ ಕಂಡು ಬರುವುದಿಲ್ಲ. ಅಲ್ಲದೆ ಯೋಜನಾ ವರದಿಯ ಉದ್ದೇಶಕ್ಕೆ ತಕ್ಕಂತೆ ಎಲ್ಲ ಸಂಗತಿಗಳನ್ನು ಅತ್ಯಂತ ಸಂಕ್ಷಿಪ್ತವಾಗಿ ಹೇಳಲಾಗಿದೆ. ೨೦೦೭ ರಲ್ಲಿ ಅಮರೇಶ ಕುಂಬಾರ ಎಂಬವರು ಎಂ.ಬಿ. ಪಾಟೀಲರ ಬಗ್ಗೆ ಪದವಿ ಮಟ್ಟದಲ್ಲಿ ಕಿರು ಯೋಜನಾ ವರದಿಯನ್ನು ಸಿದ್ಧಪಡಿಸಿದ್ದಾರೆ.[೧೦೬] ಇದರಲ್ಲಿ ಒಟ್ಟು

---

೧೦೪. ಸ್ವಪ್ನ ಎಂ. ಪಾಟೀಲ : ಕಲಾವಿದ ಎಂ.ಬಿ.ಪಾಟೀಲ : ಗುಲಬರ್ಗಾ ವಿಶ್ವವಿದ್ಯಾಲಯಕ್ಕೆ ಸಾದರ ಪಡಿಸಿದ ಕಿರು ಯೋಜನಾ ವರದಿ

೧೦೫. ಸುರೇಖಾ ಪಾಟೀಲ : ಕಲಾವಿದ ಎಂ.ಬಿ.ಪಾಟೀಲ : ಕನ್ನಡ ವಿಶ್ವವಿದ್ಯಾಲಯಕ್ಕೆ ಸಾದರ ಪಡಿಸಿದ ಕಿರು ಯೋಜನಾ ವರದಿ.

೧೦೬. ಅಮರೇಶ. ಕುಂಬಾರ : ಭಾವಚಿತ್ರದ ಕುಂಚಬ್ರಹ್ಮ ಎಂ.ಬಿ.ಪಾಟೀಲ : ೫ನೇ ವರ್ಷದ ವಿಶೇಷ ಪರಿಣಿತಿಗಾಗಿ ವಿಜಯ ಲಲಿತಕಲಾ ಕಾಲೇಜ ಗದಗಕ್ಕೆ ಸಲ್ಲಿಸಿದ ಯೋಜನಾ ವರದಿ.

ಆರು ಅಧ್ಯಾಯಗಳಲ್ಲಿ ವಿಷಯ ನಿರೂಪಣೆ ಗೊಂಡಿದ್ದು ಕ್ರಮಬದ್ಧತೆಯ ಕೊರತೆ ಕಂಡು ಬರುತ್ತದೆ. ಬಾಲ್ಯ ಜೀವನ, ಶಿಕ್ಷಣ, ಸಾಂಸ್ಕೃತಿಕ ಪರಿಸರ, ಕೃತಿಗಳ ಅಧ್ಯಯನ, ಅಮೂರ್ತ ಕಲೆಯ ಸಂಶೋಧನಾತ್ಮಕ ಅಂಶಗಳು, ರೇಖೆ ಮತ್ತು ವರ್ಣ ಸಂಯೋಜನೆ, ಪ್ರಶಸ್ತಿ ಗೌರವಗಳು, ಅನಿಸಿಕೆಗಳು ಹೀಗೆ ಹಲವಾರು ಸಂಗತಿಗಳನ್ನು ಸಂಕ್ಷಿಪ್ತವಾಗಿ ನಿರೂಪಿಸಲಾಗಿದೆ. ಇಲ್ಲಿ ಬರಹಸ್ವರೂಪಕ್ಕಿಂತ ಛಾಯಾ ಚಿತ್ರಗಳನ್ನೇ ಹೆಚ್ಚು ಅಳವಡಿಸಲಾಗಿದೆ

ಹೀಗೆ ಹಲವಾರು ಲೇಖನಗಳು ಮತ್ತು ಕೆಲವು ಪುಸ್ತಕಗಳು ಎಂ.ಬಿ.ಪಾಟೀಲರ ಕುರಿತಾಗಿ ಪ್ರಕಟವಾಗಿದ್ದರೂ ಪರಿಚಯಾತ್ಮಕವಾಗಿರುವ ಮಾಹಿತಿಯನ್ನು ಮಾತ್ರ ಇವು ಕೊಡುತ್ತವೆ. ಗಂಭೀರ ಸ್ವರೂಪದ ಸಂಶೋಧನೆ ಹಿನ್ನೆಲೆಯ ಅಧ್ಯಯನಗಳು ಪಾಟೀಲರ ಕುರಿತಾಗಿ ಇದುವರೆಗೆ ನಡೆದಿಲ್ಲ. ಈ ಕೊರತೆಯನ್ನು ತುಂಬಿಕೊಡುವ ನಿಟ್ಟಿನಲ್ಲಿ ಪ್ರಸ್ತುತ ಅಧ್ಯಯನ ರೂಪುಗೊಂಡಿದೆ.

**ಅಧ್ಯಯನದ ಸ್ವರೂಪ :**

ಚಿತ್ರ ಕಲಾವಿದ ಎಂ. ಬಿ. ಪಾಟೀಲರ ಕುರಿತಾಗಿರುವ ಈ ಅಧ್ಯಯನವು ಒಟ್ಟು ಐದು ಅಧ್ಯಾಯಗಳಲ್ಲಿ ವಿಂಗಡಣೆಗೊಂಡು ವಿಶ್ಲೇಷಿಸಲ್ಪಟ್ಟಿದೆ. ಪ್ರತಿಯೊಂದು ಅಧ್ಯಾಯಗಳಲ್ಲಿ ನಿರೂಪಣೆಗೊಂಡಿರುವ ವಿಷಯಗಳ ಸಂಕ್ಷಿಪ್ತ ಸ್ವರೂಪ ಕೆಳಗಿನಂತಿದೆ.

* **ಮೊದಲನೆಯ** ಅಧ್ಯಾಯದಲ್ಲಿ ಅಧ್ಯಯನದ ಉದ್ದೇಶ, ಸ್ವರೂಪ, ವ್ಯಾಪ್ತಿ ಮತ್ತು ವೈಧಾನಿಕತೆಗಳನ್ನು ಕುರಿತು ಹೇಳಲಾಗಿದೆ.
* **ಎರಡನೆಯ** ಅಧ್ಯಾಯದಲ್ಲಿ ಎಂ. ಬಿ. ಪಾಟೀಲರ ಬಾಲ್ಯ, ಶಿಕ್ಷಣ ಮತ್ತು ವೃತ್ತಿ ಬದುಕು ಕುರಿತು ವಿವೇಚಿಸಲಾಗಿದೆ.
* **ಮೂರನೆಯ** ಅಧ್ಯಾಯದಲ್ಲಿ ಎಂ. ಬಿ. ಪಾಟೀಲರ ಕಲಾಕೃತಿಗಳ ವಸ್ತು ವೈವಿಧ್ಯತೆಯನ್ನು ದಶಕವಾರು ವಿಂಗಡಿಸಿ ವಿಶ್ಲೇಷಿಸಲಾಗಿದೆ.
* **ನಾಲ್ಕನೆಯ** ಅಧ್ಯಾಯದಲ್ಲಿ ಎಂ. ಬಿ. ಪಾಟೀಲರ ಕಲಾಕೃತಿಗಳ ಶೈಲಿ, ಪ್ರಭಾವ, ಪ್ರೇರಣೆ ಮತ್ತು ತಂತ್ರಗಾರಿಕೆಗಳ ಬಗ್ಗೆ ಚರ್ಚಿಸಲಾಗಿದೆ.
* **ಐದನೆಯ** ಅಧ್ಯಾಯದಲ್ಲಿ ಮೇಲಿನ ನಾಲ್ಕೂ ಅಧ್ಯಾಯಗಳ ಫಲಿತಾಂಶಗಳನ್ನು ಸಮೀಕ್ಷಿಸಲಾಗಿದೆ.

ಮೇಲಿನ ಈ ಅಧ್ಯಾಯಗಳಲ್ಲದೆ ಅನುಬಂಧದಲ್ಲಿ ವಕ್ತೃಗಳ ವಿವರ, ಗ್ರಂಥ ಋಣ, ಸಂಕ್ಷೇಪಗಳ ಬಗ್ಗೆ ವಿವರಗಳನ್ನು ನೀಡಲಾಗಿದೆ. ಹೀಗೆ ಪ್ರಸ್ತುತ ಅಧ್ಯಯನದ ಸ್ವರೂಪವಿದೆ.

**ಅಧ್ಯಯನದ ವ್ಯಾಪ್ತಿ :**

ಕರ್ನಾಟಕದ ಪ್ರಮುಖ ಕಲಾವಿದರಲ್ಲಿ ಒಬ್ಬರಾದ ಎಂ. ಬಿ. ಪಾಟೀಲರ ಕುರಿತಾಗಿರುವ ಈ ಅಧ್ಯಯನದಲ್ಲಿ ಮುಖ್ಯವಾಗಿ ಅವರ ಕಲಾಬದುಕು ಮತ್ತು ಕಲೆಯ ಬಗ್ಗೆ ವಿಶೇಷವಾಗಿ ಅಧ್ಯಯನ ಮಾಡಲಾಗಿದೆ. ಎಂ. ಬಿ. ಪಾಟೀಲರು ಇಂದಿಗೂ ಕಲಾಕೃತಿಗಳನ್ನು ರಚನೆ ಮಾಡುತ್ತಲಿದ್ದು. ೨೦೦೮ ರವರೆಗಿನ ಕೃತಿಗಳಿಗೆ ಮಾತ್ರ ಅಧ್ಯಯನದ ವ್ಯಾಪ್ತಿಯನ್ನು ಸೀಮಿತಗೊಳಿಸಿಕೊಳ್ಳಲಾಗಿದೆ. ಪಾಟೀಲರು ತಮ್ಮ ಬಾಲ್ಯದಿಂದಲೇ ಹಲವಾರು ಕಲಾಕೃತಿಗಳನ್ನು ರಚನೆ ಮಾಡುತ್ತ ಬಂದಿದ್ದಾರೆ. ವಿದ್ಯಾರ್ಥಿ ಹಂತದ ಕಲಾಕೃತಿಗಳು ಒಂದು ಬಗೆಯಾದರೆ, ಕಲಾಶಿಕ್ಷಣ ಪಡೆದ ನಂತರದ ಕೃತಿಗಳು ಮತ್ತೊಂದು ಬಗೆಯಲ್ಲಿವೆ.

ಇದಲ್ಲದೆ ನಿವೃತ್ತಿಯ ನಂತರದ ಕಲಾಕೃತಿಗಳು ಅನುಭವ ಪೂರ್ಣ ಪಕ್ವತೆಯಿಂದ ಕೂಡಿರುವುದು ಕಂಡು ಬರುತ್ತದೆ. ಈ ಮೂರು ಅವಧಿಗಳಲ್ಲಿ ವಿಶಿಷ್ಟವಾಗಿ ರಚಿಸಿರುವ ಪಾಟೀಲರ ಸಾವಿರಾರು ಕಲಾಕೃತಿಗಳು. ರಾಜ್ಯ ರಾಷ್ಟ್ರ ಮತ್ತು ಅಂತರಾಷ್ಟ್ರ ಮಟ್ಟದಲ್ಲಿ ವಿವಿಧ ಕಡೆಗಳಲ್ಲಿ ಸಂಗ್ರಹಗೊಂಡಿವೆ. ಅವುಗಳನ್ನು ಸೀಮಿತ ಕಾಲಾವಧಿಯಲ್ಲಿ ಸಂಗ್ರಹಿಸುವುದು ಕಷ್ಟದ ಕೆಲಸವಾಗಿದೆ. ಅಲ್ಲದೆ ವಿದ್ಯಾರ್ಥಿ ಹಂತದ ಇವರ ಕಲಾಕೃತಿಗಳಲ್ಲಿ ಬಹುಪಾಲು ಕೃತಿಗಳು ಇವರ ಸಂಗ್ರಹದಲ್ಲಿಲ್ಲ. ಹಾಗಾಗಿ ಕಲಾಶಿಕ್ಷಣದ ಕೊನೆಯ ಹಂತದಿಂದ ಅಂದರೆ ಕ್ರಿ.ಶ. ೧೯೬೩ ರಿಂದ ಕ್ರಿ.ಶ ೨೦೦೮ ರವರೆಗಿನ ನಲವತ್ತೈದು ವರ್ಷಗಳಲ್ಲಿ ರಚಿಸಿದ ಲಭ್ಯವಾದ ಪ್ರಮುಖ ಹಾಗೂ ಪ್ರಾತಿನಿಧಿಕ ಕಲಾಕೃತಿಗಳನ್ನು ಮಾತ್ರ ಅಧ್ಯಯನದ ವ್ಯಾಪ್ತಿಗೆ ಒಳಪಡಿಸಲಾಗಿದೆ.

**ಅಧ್ಯಯನದ ವೈಧಾನಿಕತೆ :**

ಪ್ರಸ್ತುತ ಅಧ್ಯಯನದಲ್ಲಿ ಮೂಲ ಆಕರ ಸಾಮಗ್ರಿ ಮತ್ತು ಆನುಷಂಗಿಕ ಆಕರ ಸಾಮಗ್ರಿಗಳಿಂದ ವಿಷಯ ಸಂಗ್ರಹಿಸಿಕೊಂಡು ನಂತರ ಅದನ್ನು ವಿಶ್ಲೇಷಣೆಗೊಳಪಡಿಸಿ ಬರವಣಿಗೆ ಮಾಡುವ ವಿಧಾನವನ್ನು ಅನುಸರಿಸಲಾಗಿದೆ. ಅದರ ಸ್ಥೂಲರೂಪ ಕೆಳಗಿನಂತಿದೆ.

**೦೧. ಮೂಲ ಆಕರ ಸಾಮಗ್ರಿ**

**೦೨. ಆನುಷಂಗಿಕ ಆಕರ ಸಾಮಗ್ರಿ**

**೦೧. ಮೂಲ ಆಕರ ಸಾಮಗ್ರಿ**

ಯಾವುದೇ ಬಗೆಯ ಸಂಶೋಧನೆಯಲ್ಲಿ ಮೂಲ ಆಕರ ಸಾಮಗ್ರಿಯಿಂದ ಪಡೆದುಕೊಳ್ಳುವ ಮಾಹಿತಿಯು ಮಹತ್ವದ್ದಾಗಿರುತ್ತದೆ. ಮಾತ್ರವಲ್ಲದೆ ಹೆಚ್ಚು ಖಚಿತತೆಯಿಂದ ಕೂಡಿರುತ್ತದೆ. ಅದರಲ್ಲೂ ಕಲಾ ಪ್ರಕಾರಗಳ ಅಧ್ಯಯನದಲ್ಲಿ ಮೂಲ ಆಕರ ಸಾಮಗ್ರಿಗಳ

ಪಾತ್ರ ಅತ್ಯಂತ ಮೌಲಿಕವಾಗಿರುತ್ತದೆ. ಕಲಾವಿದ ಎಂ. ಬಿ. ಪಾಟೀಲರ ಕುರಿತಾಗಿರುವ ಈ ಅಧ್ಯಯನದಲ್ಲಿ ಅವರ ಕಲಾಕೃತಿಗಳನ್ನೇ ಮೂಲ ಆಕರ ಸಾಮಗ್ರಿಯಾಗಿ ಪರಿಗಣಿಸಲಾಗಿದೆ. ಮೂಲ ಆಕರ ಸಾಮಗ್ರಿಗಳಿಂದ ಮಾಹಿತಿ ಸಂಗ್ರಹಿಸಿಕೊಳ್ಳುವಲ್ಲಿ ಕ್ಷೇತ್ರಕಾರ್ಯ ಮಹತ್ವದ್ದಾಗಿದ್ದು, ಈ ಅಧ್ಯಯನದಲ್ಲಿ ಕೈಗೊಳ್ಳಲಾದ ಕ್ಷೇತ್ರಕಾರ್ಯವು ವೈವಿಧ್ಯತೆಯಿಂದ ಕೂಡಿತ್ತು. ಛಾಯಾ ಚಿತ್ರಣ, ಸಂದರ್ಶನ, ವಿಡಿಂಯೋ ಚಿತ್ರೀಕರಣ ಮಾಡುವ ಮೂಲಕ ವಿಷಂಯ ಸಂಗ್ರಹಿಸಿಕೊಳ್ಳಲಾಗಿದೆ.

**ಛಾಯಾಚಿತ್ರಣ :**

ಎಂ. ಬಿ. ಪಾಟೀಲರು ರಚಿಸಿದ ಕಲಾಕೃತಿಗಳು ಹಲವಾರು ಪ್ರದೇಶಗಳಲ್ಲಿ ಚದುರಿಹೋಗಿವೆ. ಅಲ್ಲದೆ ಅವರ ಸ್ವಂತ ಸಂಗ್ರಹದಲ್ಲಿಯೂ ಕೆಲವು ಕಲಾಕೃತಿಗಳಿವೆ. ರೇಖಾಚಿತ್ರಗಳು, ವರ್ಣಚಿತ್ರಗಳು, ವ್ಯಂಗ್ಯ ಚಿತ್ರಗಳು, ಶಿಲ್ಪಕೃತಿಗಳು, ಮ್ಯೂರಲ್ ಕಲಾಕೃತಿಗಳು, ಮೊಸಾಯಿಕ್ ಕೃತಿಗಳು, ಕೋಲಾಜ್ ಚಿತ್ರಗಳು ಹೀಗೆ ವೈವಿಧ್ಯ ಕಲಾಕೃತಿಗಳನ್ನು ಪಾಟೀಲರು ರಚನೆ ಮಾಡಿದ್ದು ಅವೆಲ್ಲವುಗಳನ್ನು ಕ್ಷೇತ್ರಕಾರ್ಯದ ಮೂಲಕ ಛಾಯಾಚಿತ್ರಣ ಮಾಡಿಕೊಳ್ಳಲಾಯಿತು. ಅಲ್ಲದೆ ಪಾಟೀಲರ ಹುಟ್ಟೂರಾದ ತಿಕೋಟಾ ಗ್ರಾಮಕ್ಕೆ ತೆರಳಿ ಅಲ್ಲಿ ಅವರ ವಾಸದ ನೆಲೆಗಳು, ಶಿಕ್ಷಣ ಪಡೆದ ಶಾಲೆ, ಹೈಸ್ಕೂಲ್ ಶಿಕ್ಷಣ ಪಡೆದ ವಿಜಾಪೂರದ ಶಿಕ್ಷಣ ಸಂಸ್ಥೆ, ಅವರ ಸಂಬಂಧಿಕರು, ಸಹಪಾಠಿಗಳು, ಅವರೊಡನೆ ಒಡನಾಟವಿದ್ದ ಹಿರಿಯರು ಸ್ಥಳೀಯ ವ್ಯಕ್ತಿಗಳು ಪಾಟೀಲರು ಕಲಾ ಪ್ರಾತ್ಯಕ್ಷಿಕೆ ನೀಡಿದ ಕಲಾ ಮಹಾವಿದ್ಯಾಲಯಗಳಿಗೆ ತೆರಳಿ ಅಲ್ಲಿ ಸಂಗ್ರಹಗೊಂಡಿದ್ದ ಪಾಟೀಲರ ಕಲಾಕೃತಿಗಳ ಛಾಯಾಚಿತ್ರಣ ಮಾಡಿಕೊಳ್ಳಲಾಯಿತು.

**ಸಂದರ್ಶನ :**

ಕಲಾವಿದ ಎಂ. ಬಿ. ಪಾಟೀಲರನ್ನು ಹಲವಾರು ಬಾರಿ ಸಂದರ್ಶಿಸುವ ಮೂಲಕ ಪೂರಕ ಮಾಹಿತಿಯನ್ನು ಪಡೆದುಕೊಳ್ಳಲಾಗಿದೆ. ಅಲ್ಲದೆ ಎಂ. ಬಿ. ಪಾಟೀಲರ ಒಡನಾಡಿಗಳು, ಸಹಪಾಠಿಗಳು, ಮಿತ್ರರು, ಹಿರಿಯರು, ಪ್ರಖ್ಯಾತ ಕಲಾವಿದರು, ಕಲಾವಿಮರ್ಶಕರು, ಸಾಹಿತಿಗಳು ಮತ್ತು ಅನೇಕ ವಿದ್ವಾಂಸರೊಂದಿಗೆ ಚರ್ಚಿಸಿ ಅವರಿಂದ ಅಧ್ಯಯನಕ್ಕೆ ಸಂಬಂಧಿಸಿದ ಮಾಹಿತಿಯನ್ನು ಪಡೆದುಕೊಳ್ಳಲಾಗಿದೆ.

**ವಿಡಿಯೋ ಚಿತ್ರೀಕರಣ :**

ಛಾಯಾ ಚಿತ್ರಣ ಮಾಡಿಕೊಂಡ ಎಲ್ಲ ಕಲಾಕೃತಿಗಳು ವ್ಯಕ್ತಿಗಳು ಮತ್ತು ನೆಲೆಗಳೆಲ್ಲವನ್ನು ವಿಡಿಯೋ ಚಿತ್ರೀಕರಣದಲ್ಲಿಯೂ ಸೆರೆಹಿಡಿದು ಕಾಯ್ದಿಡಲಾಗಿದೆ. ಛಾಯಾ ಚಿತ್ರಣಗಳು ಸ್ಪಷ್ಟತೆಯನ್ನು ಕೊಡದ ಸಂದರ್ಭದಲ್ಲಿ ವಿಡಿಯೋ ಚಿತ್ರೀಕರಣಗಳಲ್ಲಿನ ಚಿತ್ರಗಳಿಂದ

ಮಾಹಿತಿ ಸಂಗ್ರಹಿಸಿಕೊಳ್ಳಲಾಗಿದೆ. ಕ್ಷೇತ್ರಕಾರ್ಯದಿಂದ ಪಡೆದುಕೊಂಡ ಎಲ್ಲ ರೀತಿಯ ಮಾಹಿತಿಯನ್ನು ಪಟ್ಟಿಕೆಗಳಲ್ಲಿ ಬರೆದುಕೊಂಡು ವಿಶ್ಲೇಷಣೆಗೆ ಒಳಪಡಿಸಲಾಗಿದೆ.

**ಆನುಷಂಗಿಕ ಆಕರ ಸಾಮಗ್ರಿ :**

ಎಂ. ಬಿ. ಪಾಟೀಲರ ಬಗ್ಗೆ ಬಂದಂತಹ ಲೇಖನಗಳು, ಪುಸ್ತಕಗಳು, ಕ್ಯಾಟ್‌ಲಾಗ್‌ಗಳು ಹಾಗೂ ಇನ್ನಿತರ ಬರವಣಿಗೆಗಳನ್ನು ಆನುಷಂಗಿಕ ಆಕರ ಸಾಮಗ್ರಿಯಾಗಿ ಬಳಸಿಕೊಳ್ಳಲಾಗಿದೆ. ಅಲ್ಲದೆ ಪ್ರಸ್ತುತ ಅಧ್ಯಯನಕ್ಕೆ ಸಂಬಂಧ ಪಟ್ಟಂತೆ ಸಂಶೋಧನಾ ಬರಹಗಳು, ಪ್ರಕಟಿತ, ಅಪ್ರಕಟಿತ ಮಹಾಪ್ರಬಂಧಗಳು, ಅರ್ಥ ಕೋಶಗಳ, ವಿಶ್ವಕೋಶಗಳು, ಗೆಜೆಟೆರ್‌ಗಳು, ಪತ್ರಿಕಾ ಲೇಖನಗಳು, ಕಲಾವಿದರ ಬಗ್ಗೆ ಬಂದಂತಹ ಕಿರು ಪುಸ್ತಕಗಳು ಹೀಗೆ ಹತ್ತು ಹಲವು ಬಗೆಯ ಸಾಹಿತ್ಯವನ್ನು ಆನುಷಂಗಿಕ ಆಕರ ಸಾಮಗ್ರಿಗಳಾಗಿ ಬಳಸಿಕೊಳ್ಳಲಾಗಿದೆ. ಇವುಗಳ ಜೊತೆಗೆ ಬೇರೆ ಬೇರೆ ಕಲಾಶಾಲೆಗಳು, ಗ್ರಂಥಾಲಯಗಳು, ಕಲಾಪ್ರದರ್ಶನಗಳನ್ನು ಸಂದರ್ಶಿಸಿ ಪೂರಕ ಮಾಹಿತಿಯನ್ನು ಪಡೆದುಕೊಳ್ಳಲಾಗಿದೆ. ಹೀಗೆ ಅನೇಕ ರೀತಿಯ ಆನುಷಂಗಿಕ ಆಕರ ಸಾಮಗ್ರಿಗಳಿಂದ ಪಡೆದುಕೊಂಡ ಮಾಹಿತಿಯನ್ನು ಸಹಿತ ಪ್ರತ್ಯೇಕ ಪಟ್ಟಿಕೆಗಳಲ್ಲಿ ನಮೂದಿಸಿಕೊಂಡು ಬರವಣಿಗೆಗೆ ಅಳವಡಿಸಿಕೊಳ್ಳಲಾಗಿದೆ.

* * * * *

ವ್ಯಕ್ತಿಯೊಬ್ಬನ ಬದುಕಿನಲ್ಲಿ ಆತನ ಬಾಲ್ಯ ಮತ್ತು ಶಿಕ್ಷಣಗಳು ತುಂಬಾ ಮಹತ್ವದ್ದಾಗಿವೆ. ಮುಂದಿನ ಬದುಕಿನ ಪರಿವರ್ತನೆ, ನಿರ್ಧಾರಗಳು, ಅನುಸರಿಸಬೇಕಾದ ವೃತ್ತಿಪ್ರವೃತ್ತಿಗಳ ಬಗ್ಗೆ ಚಿಂತನ ಮಂಥನ ನಡೆಯುವುದು ಹಾಗೂ ತಿರುವುಗಳು ದೊರಕುವುದು ಇದೇ ಅವಧಿಯಲ್ಲಿ ಹಾಗಾಗಿ ವ್ಯಕ್ತಿಯ ಬಾಲ್ಯ ಮತ್ತು ಶಿಕ್ಷಣದ ಘಟ್ಟಗಳು ಆತನ ಭವಿಷ್ಯದ ಬದುಕಿಗೆ ಭದ್ರಬುನಾದಿಯನ್ನು ಒದಗಿಸುಕೊಡಬಲ್ಲವು ಎಂದು ಹೇಳಬಹುದು.

ಕಲಾವಿದರ ದೃಷ್ಟಿಕೋನದಲ್ಲಿ ಈ ಅಂಶ ಇನ್ನಷ್ಟು ಮೌಲಿಕತೆಯನ್ನು ಪಡೆದುಕೊಳ್ಳುತ್ತದೆ. ಬಾಲ್ಯದಲ್ಲಿ ಅವರ ಮೇಲೆ ಬೀರಿದ ಕಲಾಪ್ರಭಾವಗಳು, ಸಾಂಸ್ಕೃತಿಕ ಪರಿಸರ, ಪ್ರಾಥಮಿಕ ಹಾಗೂ ಮಾಧ್ಯಮಿ ಶಿಕ್ಷಣ ಹಂತದಲ್ಲಿ ಅವರ ಕಲೆಯ ಒಲವುಗಳು ಈ ಸಂದರ್ಭದಲ್ಲಿ ಕಲಾಶಿಕ್ಷಕರ ಪಾತ್ರ ಮುಂತಾದವುಗಳನ್ನು ತಿಳಿದು ಕೊಂಡಾಗ ಮಾತ್ರ ಆಯಾ ಕಲಾವಿದರ ಕಲೆ, ಕಲಾಬದುಕು, ಕಲಾಶೈಲಿಗಳ ಬಗ್ಗೆ ಪರಿಣಾಮಕಾರಿಯಾಗಿ ತಿಳಿದುಕೊಳ್ಳಲು ಸಾಧ್ಯ. ಅದರಂತೆ ಕಲಾಶಿಕ್ಷಣ ಸಂದರ್ಭದಲ್ಲಿ ಪ್ರಭಾವ ಬೀರಿದ ಕಲಾಶಿಕ್ಷಕರು, ನಡೆದ ಘಟನಾವಳಿಗಳನ್ನು ಅಧ್ಯಯನ ಮಾಡುವುದರಿಂದ ಆಯಾ ಕಲಾವಿದರ ಕಲಾಶೈಲಿ, ಪ್ರಭಾವ, ಪ್ರೇರಣೆಗಳು, ವಸ್ತುವಿಷಯಗಳಂತಹ ಸಂಗತಿಗಳನ್ನು ಕುರಿತು ಮೌಲಿಕವಾದ ವಿಮರ್ಶೆ ಮಾಡಬಹುದು.

ಹಾಗಾಗಿ ಎಂ.ಬಿ.ಪಾಟೀಲರ ಕುರಿತಾಗಿರುವ ಈ ಅಧ್ಯಯನದಲ್ಲಿ ಅವರ ಬಾಲ್ಯ, ಪ್ರಾಥಮಿಕ, ಮಾಧ್ಯಮಿಕ ಹಾಗೂ ಕಲಾ ಶಿಕ್ಷಣ ಹಂತಗಳಲ್ಲಿ ನಡೆದ ಪ್ರಮುಖ ಘಟನಾವಳಿಗಳು ಹಾಗೂ ಈ ಸಂದರ್ಭದಲ್ಲಿ ಅವರ ಕಲಾ ಬದುಕನ್ನು ರೂಪಿಸಿದ ಸಂಗತಿಗಳ ಬಗ್ಗೆ ತಿಳಿದುಕೊಳ್ಳುವ ಉದ್ದೇಶವನ್ನು ಇಲ್ಲಿ ಹೊಂದಲಾಗಿದೆ.

ಎಂ.ಬಿ.ಪಾಟೀಲರು ಗ್ರಾಮೀಣ ಸೊಗಡಿನ ಸಾಂಸ್ಕೃತಿಕ ಶ್ರೀಮಂತಿಕೆಯ ನೆಲದಲ್ಲಿ ಹುಟ್ಟಿದವರು. ಅವರು ಹುಟ್ಟಿದ ಪ್ರದೇಶ ತನ್ನದೇ ಆದ ಗ್ರಾಮ್ಯ ಪರಿಸರ ಮತ್ತು ಸಂಸ್ಕೃತಿಗಳನ್ನು ಒಳಗೊಂಡಿದ್ದರೂ ಬಾಹ್ಯ ಪ್ರೇರಣೆಗಳಿಂದ ಬದಲಾವಣೆಗಳನ್ನು ಕಾಣುತ್ತ ಬಂದಿರುವ ನೆಲವಾಗಿದೆ. ಚಾಲುಕ್ಯರು, ರಾಷ್ಟ್ರಕೂಟರು, ಬಿಜಾಪುರದ ಸುಲ್ತಾನರು ನಂತರ ಬ್ರಿಟೀಷರ ಆಳ್ವಿಕೆಗೊಳಪಟ್ಟು ಆಯಾಕಾಲದಲ್ಲಿ ಬೆಳೆದು ಬಂದ ಕಲಾ ಸಂಸ್ಕೃತಿಗಳು ವೈವಿಧ್ಯಮಯವಾಗಿ ರೂಪುಗೊಂಡಿವೆ. ಇವುಗಳ ಜೊತೆಗೆ ಮರಾಠ ಪ್ರಭಾವದಿಂದ ಪ್ರೇರಿತವಾದ ಈ ಪ್ರದೇಶದ ಕಲಾಪ್ರಕಾರಗಳು ಇಂದಿಗೂ ವಿಶಿಷ್ಟವಾಗಿ ಕಂಗೊಳಿಸುತ್ತಿವೆ.[೧] ಇಂತಹ ಎಲ್ಲ ಸಂಗತಿಗಳು ಪಾಟೀಲರ ಬಾಲ್ಯ ಜೀವನದ ಮೇಲೆ ಹೇಗೆ ಪರಿಣಾಮ ಬೀರಿವೆ, ಅವರ ಪ್ರಾಥಮಿಕ, ಮಾಧ್ಯಮಿಕ ಹಾಗೂ ಕಲಾ ಶಿಕ್ಷಣ ಯಾವ ರೀತಿಯ ಪರಿವರ್ತನೆಗಳನ್ನು ಪಡೆದುಕೊಂಡಿತು ಎಂಬುದನ್ನು ಕಂಡುಕೊಳ್ಳುವುದರ ಜೊತೆಗೆ ಅವರ ಕಲಾಬದುಕಿಗೆ ಈ ಎಲ್ಲ ಅಂಶಗಳು ಯಾವರೀತಿಯ ಭದ್ರ ಬುನಾದಿಯನ್ನು ಹಾಕಿಕೊಟ್ಟವು ಎಂಬುದನ್ನು ಗಮನಿಸಬಹುದು. ಈ ಹಿನ್ನೆಲೆಯಲ್ಲಿ ಅವರ ಬಾಲ್ಯ, ಶಿಕ್ಷಣಗಳ ಬಗ್ಗೆ ಸ್ಥೂಲವಾಗಿ ವಿವೇಚಿಸಲಾಗಿದೆ.

**ಬಾಲ್ಯ ಮತ್ತು ಶಿಕ್ಷಣ :**

ಬಿಜಾಪುರ ನಗರದಿಂದ ಹದಿಮೂರು ಮೈಲು ದೂರದಲ್ಲಿರುವ ತಿಕೋಟಾದಲ್ಲಿ ೧೦.೧೨.೧೯೩೯ ರಂದು ಭೀಮನಗೌಡ. ಪಾಟೀಲ ಹಾಗೂ ಭಾಗೀರಥಿಯವರ ಮಗನಾಗಿ ಮಲ್ಲಿಕಾರ್ಜುನ ಪಾಟೀಲರು ಜನಿಸಿದರು. ಇವರು ಹುಟ್ಟುವುದಕ್ಕಿಂತ ಮುಂಚೆ ಇವರ ಮೂವರು ಅಕ್ಕಂದಿರು ತೀರಿಕೊಂಡಿದ್ದರು. ಇವರ ಜನನದ ನಂತರ ಹುಟ್ಟಿದ ಒಬ್ಬ ತಮ್ಮ ಸ್ವಲ್ಪ ವರ್ಷಗಳಲ್ಲೇ ಕಣ್ಮರೆಯಾದ. ಹೀಗಾಗಿ ಉಳಿದವರೆಂದರೆ ಮಲ್ಲಿಕಾರ್ಜುನನ ಇಬ್ಬರು ಅಣ್ಣಂದಿರು ಹಾಗೂ ಒಬ್ಬಳು ತಂಗಿ ಮತ್ತು ಒಬ್ಬ ತಮ್ಮ ಮಾತ್ರ. ದೊಡ್ಡ ಸಂಸಾರದ ಹೊರೆಯನ್ನು ನೀಗಿಸಲು ಭೀಮನಗೌಡರು ಬಟ್ಟೆಯ ಅಂಗಡಿಯಲ್ಲಿ ಲೆಕ್ಕ ಪತ್ರ ಬರೆಯುವ ಉದ್ಯೋಗದಲ್ಲಿದ್ದರು. ಕೆಲವುದಿನಗಳ ನಂತರ ಅಂಗಡಿಯ ಮಾಲೀಕರಾಗಿದ್ದ ಇಬ್ಬರು ಸೋದರರು ಜಗಳದ ಕಾರಣವಾಗಿ

---

೧. ವ್ಹಿ. ಎಂ. ಬಾಗಾಯತ್ : ಕರ್ನಾಟಕದ ಮುಸ್ಲಿಂ ಅರಸರ ಕಾಲದ ಚಿತ್ರಕಲೆ : ಪುಟ-೨೪

ವ್ಯಾಪಾರದ ವಹಿವಾಟು ಪಾಲು ಮಾಡುವಾಗ, ನಿಷ್ಠೆಯಿಂದ ಪ್ರಾಮಾಣಿಕವಾಗಿ ತಮಗಾಗಿ ದುಡಿದಿದ್ದ ಭೀಮನಗೌಡರ ಮುಂದಿನ ಪರಿಸ್ಥಿತಿ ಹೇಗೆ ಎಂಬ ಚಿಂತೆ ಅವರಿಗೆ ಶುರುವಾಯಿತು. ಕಡೆಗೆ ಸೋದರರು ತಮ್ಮ ಸಮಸ್ಥ ಆಸ್ತಿಯನ್ನು ಪಾಲು ಹಂಚಿಕೊಂಡಾದ ಮೇಲೆ ತಮ್ಮ ಅಂಗಡಿಯನ್ನೇ ಭೀಮನಗೌಡರಿಗೆ ಬಿಟ್ಟುಕೊಟ್ಟು ಉದಾರತೆ ಮೆರೆದರು. ಇದು ಎಂ. ಬಿ. ಪಾಟೀಲರ ತಂದೆಯವರ ಪ್ರಾಮಾಣಿಕತೆ ಮತ್ತು ನಿಷ್ಠೆಗೆ ದೊರೆತ ಪ್ರತಿಫಲ ಎನ್ನಬಹುದು.

ಬಾಲಕ ಮಲ್ಲಿಕಾರ್ಜುನನಿಗೆ ತಂದೆಯೊಂದಿಗೆ ಅಷ್ಟೇನೂ ಸಲಿಗೆಯಿರದಿದ್ದರೂ ತಾಯಿಯ ಬಳಿ ಮುದ್ದುಗರೆಯುವ ಪ್ರೀತಿಯಿತ್ತು.[೨] ಹಿರಿಯಣ್ಣನೊಂದಿಗೆ ತನ್ನೆಲ್ಲಾ ಆಸೆಯನ್ನು ಹೇಳಿಕೊಳ್ಳುವ ಸ್ವಭಾವ ಮಲ್ಲಿಕಾರ್ಜನನದಾಗಿತ್ತು. ಭೀಮನಗೌಡರಿಗೆ ಮಲ್ಲಿಕಾರ್ಜುನನ ಮೇಲೆ ಅಷ್ಟೊಂದು ವಿಶೇಷ ಪ್ರೀತಿ ಇರಲಿಲ್ಲ. ಕೇವಲ ಹಿರಿಯ ಇಬ್ಬರು ಮಕ್ಕಳಿಗೆ ಅವರು ಹೆಚ್ಚಿನ ಮಹತ್ವವನ್ನು ಕೊಡುತ್ತಿದ್ದರೆಂಬುದಾಗಿ ಎಂ.ಬಿ.ಪಾಟೀಲರು ಇಂದಿಗೂ ತಮ್ಮ ಬಾಲ್ಯದ ದಿನಗಳನ್ನು ನೆನಪಿಸಿ ಕೊಳ್ಳುತ್ತಾರೆ. ಮನೆಯಲ್ಲಿ ಇಬ್ಬರು ಹಿರಿಯ ಮಕ್ಕಳು ಶಾಲೆಗೆ ಹೋಗುತ್ತಿರುವಾಗ ಮೂರನೆಯ ಮಗ ಓದಿದರೆಷ್ಟು ಬಿಟ್ಟರೆಷ್ಟು ಅವನೊಬ್ಬ ಮನೆಯ ಕೆಲಸ ಮಾಡಿಕೊಂಡಿರಲಿ ಎಂಬುದು ಅವರ ಅಭಿಪ್ರಾಯವಾಗಿತ್ತು. ಅದಕ್ಕಾಗಿ ಮನೆಯ ಕೆಲಸದಲ್ಲಿ ತಾಯಿಯೊಂದಿಗೆ ನೆರವಾಗುವುದಕ್ಕೆ ಎಮ್ಮೆ ಕಾಯುವುದಕ್ಕೆ, ಮನೆಗೆ ನೀರು ತರುವುದಕ್ಕೆ ಮಗನನ್ನು ಭೀಮನಗೌಡರು ಹಚ್ಚುತ್ತಿದ್ದರು. ಇಂತಹ ಕೆಲಸಗಳಲ್ಲಿ ಸಹಿತ ಅವರ ಬಾಲ್ಯದ ಮನಸ್ಸು ಸೌಂದರ್ಯದ ಅನುಭೂತಿಯಲ್ಲಿ ತೇಲುತ್ತಿತ್ತು.

ದನಕಾಯುವ ಹುಡುಗರೊಂದಿಗೆ ಊರ ಹೊರಗಡೆ ಹೋಗಿ ಗ್ರಾಮೀಣ ಆಟಗಳನ್ನು ಆಡುವುದು. ಪರಿಸರದ ವಸ್ತುಗಳನ್ನು, ಪ್ರಾಣಿ, ಪಕ್ಷಿಗಳನ್ನು ಸೃಷ್ಟಿ ಸೌಂದರ್ಯವನ್ನು ತನ್ನದೆ ಭಾವನೆಗಳಲ್ಲಿ ಕಲ್ಪಿಸಿಕೊಂಡು ಆನಂದಿಸುತ್ತಿದ್ದರು. ಮನೆಯಿಂದ ಬುತ್ತಿ ಕಟ್ಟಿಕೊಂಡು ಬಂದು ಮರಗಿಡಗಳ ಮಧ್ಯೆ ಕೂತು ಎಮ್ಮೆಗಳ ಮೇಲೆ ನಿಗಾ ಇಡುತ್ತಲೇ ಪಾಟೀಲರು ಸುತ್ತಲಿನ ಆಕಾಶ, ಬೆಟ್ಟಗುಡ್ಡಗಳನ್ನು ಕಣ್ಣಲ್ಲಿ ತುಂಬಿಕೊಳ್ಳುತ್ತಾ, ಪ್ರಕೃತಿಯ ರಮ್ಯತೆಯನ್ನು, ಸೃಷ್ಟಿಯ ಸೋಜಿಗವನ್ನು ಕಂಡು ದಂಗಾಗುತ್ತಿದ್ದರು. ಬಾಲಕ ಮಲ್ಲಿಕಾರ್ಜುನನಿಗೆ ಮಣ್ಣೆತ್ತು, ಗುಳ್ಳವ್ವ, ಪಾಂಡವರು, ಶೀಗವ್ವ ಮುಂತಾದ ಮಣ್ಣಿನ ಶಿಲ್ಪಗಳ ಕುರಿತು ಆಕರ್ಷಣೆ ತಾನು ಅವುಗಳ ರಚನೆಯಲ್ಲಿ ಪಾಲ್ಗೊಳ್ಳಬೇಕೆಂಬ ಕುತೂಹಲ, ತಮ್ಮ ತೋಟದಲ್ಲಿನ ಜೇಡಿ ಮಣ್ಣನ್ನು ಸುರುವಿಕೊಂಡು ಪಕ್ಕದಲ್ಲೇ ಹರಿಯುತ್ತಿರುವ ಹಳ್ಳದ ನೀರನ್ನು ತೆಗೆದುಕೊಂಡು ಕಲಸುತ್ತಾ ಮೈ ಕೆಸರು ಮಾಡಿಕೊಂಡು ಅದಕ್ಕೊಂದು ಮೂರ್ತ ರೂಪ ಕೊಡುತ್ತ ಮತ್ತೆ ಮತ್ತೆ, ಪ್ರಯತ್ನದಲ್ಲಿ

೨. ಬಿ. ಎಸ್. ವೆಂಕಟಲಕ್ಷ್ಮೀ : ಎಂ. ಬಿ. ಪಾಟೀಲ : ಪುಟ-೦೯

ಮುಳುಗಿರುತ್ತಿದ್ದರು, ತನ್ನ ಮನದಲ್ಲಿ ಮೂಡಿದ ಆಕಾರಗಳಿಗೆ ಕೈಗಳಿಂದ ರೂಪ ಕೊಡುವ ಕೈಂಕರ್ಯದಲ್ಲಿ ಸದಾ ತಲ್ಲೀನನಾಗಿರುತ್ತಿದ್ದರು. ಈ ರೀತಿಯಾದ ಒಂದು ಕಲಾತ್ಮಕ ಶಕ್ತಿ ಪಾಟೀಲರಿಗೆ ಬಾಲ್ಯದಲ್ಲಿಯೇ ಮೂಡಿತ್ತು. ಈ ವೇಳೆಯಲ್ಲಿ ನಿಸರ್ಗವು ಪಾಟೀಲರ ಮೇಲೆ ಸಾಕಷ್ಟು ಪರಿಣಾಮವನ್ನು ಬೀರಿತ್ತು. ಅಜ್ಜಿಯ ಮನೆಗೆ ಹೋದಾಗಲೂ ಸಹಿತ ಇಂತಹ ಚಟುವಟಿಕೆಗಳಲ್ಲಿ ಪಾಟೀಲರು ತೊಡಗಿರುತ್ತಿದ್ದರು.[೩]

ಭೀಮನಗೌಡರ ಪೂರ್ವಜರು ದಂದರಗಿಯಲ್ಲಿ ವಾಸವಾಗಿದ್ದರು. ಹೀಗಾಗಿ ಭೀಮನಗೌಡರಿಗೆ ಅಲ್ಲಿ ಸ್ವಲ್ಪ ಆಸ್ತಿ ಇತ್ತು. ಅದನ್ನು ಇವರ ದತ್ತಕ ತಾಯಿ ನೋಡಿಕೊಳ್ಳುತ್ತಿದ್ದರು. ಭೀಮನಗೌಡರು ಕೆಲಕಾಲದ ನಂತರ ಪಾಟೀಲರನ್ನು ತಮ್ಮ ತಾಯಿಗೆ ನೆರವಾಗಲೆಂದು ತಿಕೋಟಾದ ಸಮೀಪದಲ್ಲಿಯೇ ಇದ್ದ ದಂದರಗಿಗೆ ಕಳಿಸಿದರು. ಎಮ್ಮೆ ಕಾಯುವ ಕೆಲಸದಿಂದ ಮುಕ್ತಿಯಾಯಿತೆಂದು ಭಾವಿಸಿದ ಪಾಟೀಲರಿಗೆ ಮತ್ತೊಂದು ಬಗೆಯ ಕಷ್ಟದ ಕೆಲಸ ತೊಡಗಿಕೊಂಡಿತು. ದಂದರಗಿಯ ಸಮೀಪದಲ್ಲಿನ ಕಾಡಿನಲ್ಲಿ ಕಟ್ಟಿಗೆ ಕಡಿದು, ಹೊರೆಯನ್ನು ತಲೆಯ ಮೇಲೆ ಹೊತ್ತು ಮನೆಗೆ ತರುವ ಕೆಲಸ ಅಂಟಿಕೊಂಡಿತು.[೪]

ಅಜ್ಜಿ ಮಹಾಕಟ್ಟುನಿಟ್ಟಿನ ಹೆಂಗಸು. ಕಟ್ಟಿಗೆ ಹೊರೆಯನ್ನು ತರಲಾಗದಿದ್ದ ದಿನ ಪಾಟೀಲರಿಗೆ ಊಟಕ್ಕೆ ಹಾಕುತ್ತಿರಲಿಲ್ಲ ಪುಟ್ಟ ಹುಡುಗ ಮಲ್ಲಿಕಾರ್ಜುನ ಪಡಬಾರದ ಕಷ್ಟಪಡುತ್ತಿದ್ದುದನ್ನು ಹಳ್ಳಿಯವರೆಲ್ಲ ಕಂಡಿರುವಂತೆಯೇ ಭೀಮನಗೌಡರ ಸಂಬಧಿಕರೆಲ್ಲರೂ ಅದನ್ನು ಗಮನಿಸಿದರು. ದಂದರಗಿಯಲ್ಲಿ ಇದ್ದ ಪಾಟೀಲರ ಚಿಕ್ಕಪ್ಪನಾದ ಮಲ್ಲನಗೌಡ ಪಾಟೀಲರು ಭೀಮನಗೌಡರಿಗೆ ಹೇಳಿ ನಿಮ್ಮ ಮಗನ ಭವಿಷ್ಯವನ್ನು ಬರಿ ಎಮ್ಮೆ ಕಾಯುವುದರಲ್ಲಿ ಕಟ್ಟಿಗೆ ಹೊರೆ ತರುವಲ್ಲಿ ಮತ್ತು ಒಕ್ಕಲುತನ ಮಾಡುವುದರಲ್ಲಿಯೇ ಸೀಮಿತಗೊಳಿಸುವುದಕ್ಕಿಂತ ಅವನಿಗೆ ಒಳ್ಳೆಯ ಶಿಕ್ಷಣ ಕೊಡಿಸಿರಿ ಇಂತಹ ಚಿಕ್ಕವಯಸ್ಸಿನಲ್ಲಿ ಅವನಿಗೆ ಇವುಗಳನ್ನು ಹಚ್ಚುವ ಬದಲು ನೀವು ಅವನನ್ನು ಶಾಲೆಗೆ ಕಳುಹಿಸಿರಿ ಎಂದು ಇವರ ತಂದೆಗೆ ಸಲಹೆ ಮಾಡಿದರು.

ಒಮ್ಮೆ ಭೀಮನಗೌಡರ ಪರಿಚಯದ ಹಿರಿಯರೆಲ್ಲ ಪಂಚಾಯಿತಿ ಕಟ್ಟೆಯ ಮೇಲೆ ಅದ್ಯಾವುದೋ ಮಾತುಕತೆಗಾಗಿ ಕೂಳಿತಿದ್ದಾಗ ಕಟ್ಟಿಗೆ ಹೊರೆಯನ್ನು ತಲೆಯ ಮೇಲೆ ಹೊತ್ತು ಅಜ್ಜಿಯ ಮನೆಯತ್ತ ಪಾಟೀಲರು ನಡೆದಿದ್ದರು. ಅದನ್ನು ಕಂಡ ಊರ ಹಿರಿಯರಿಗೆ ತೀರಾ ರೋಸಿ ಹೋಯಿತು. ಕುಪಿತಗೊಂಡ ಕೆಲವು ಹಿರಿಯರು ಮಲ್ಲಿಕಾರ್ಜುನನನ್ನು ಕರೆದು ಗಟ್ಟಿಯಾದ ಧ್ವನಿಯಲ್ಲಿ ಗದರಿಸಿ ಕೇಳಿದರು. ನೀನು ಕಟ್ಟಿಗೆ ಹೊರಲು ಹುಟ್ಟಿದವನೇನೋ,

---

೩. ಸುರೇಖಾ. ಪಾಟೀಲ : ಕಲಾವಿದ ಎಂ. ಬಿ. ಪಾಟೀಲ : ಪುಟ-೧೮
೪. ಸಪ್ನಾ. ಪಾಟೀಲ : ಕಲಾವಿದ ಎಂ. ಬಿ. ಪಾಟೀಲ : ಪುಟ-೧೨

ಶಾಲೆ ಕಲಿತು ಮುಂದೆ ಬರಬೇಕಾದ ಈ ವಯಸ್ಸಿನಲ್ಲಿ ಇಂತಹ ಕೆಲಸ ಮಾಡಬೇಡ ಎಂದು ಹೇಳಿದರು. ಅಲ್ಲದೆ ಇನ್ನು ಮುಂದೆ ನೀನು ಕಟ್ಟಿಗೆ ಹೊತ್ತಿದ್ದನ್ನು ನಾವ್ಯಾರಾದರೂ ಕಂಡೆವೋ ನೆಟ್ಟಗಾಗಲಿಕ್ಕಿಲ್ಲಎಂದು ಹೇಳಿದರು. ಅಲ್ಲದೆ ಅವರ ಅಜ್ಜಿಯನ್ನು ಕರೆಯಿಸಿ ಅಜ್ಜಿ ನಿನಗೆ ಕೂಲಿಯಾಳು ಬೇಕಾದರೆ ನಮಗೆ ಹೇಳು ಆ ಕೆಲಸಕ್ಕೆಂದೇ ನಾವು ಮತ್ಯಾರನ್ನಾದರೂ ಕಳಿಸ್ತೀವಿ. ಇವನನ್ನ ಇಂಥ ದುಡಿತಕ್ಕೆ ಹಚ್ಚಬೇಡ' ಎಂದು ಊರ ಹಿರಿಯರೆಲ್ಲ ತಿಳಿಸಿ ಹೇಳಿದರು. ಅಪ್ಪನ ಗೆಳೆಯರ ಈ ಕ್ರಮದ ಹಿಂದೆ ಮಲ್ಲಿಕಾರ್ಜುನನ ಕುರಿತು ಆಸಕ್ತಿಯಿತ್ತು. ಭೀಮನಗೌಡರಿಗೆ ಈ ಸುದ್ದಿ ತಲುಪಿತು.[೫]

ಒಂದು ದಿನ ಹಿರಿಯರೆಲ್ಲಾ ಸೇರಿ ಇವರ ತಂದೆ ಭೀಮನಗೌಡರನ್ನು ಮತ್ತು ಅಜ್ಜಿಯನ್ನು ಮತ್ತೊಮ್ಮೆ ಕರೆಸಿ ಹೇಳಿದರು. ಮಗುವಿನ ಭವಿಷ್ಯ ಈ ರೀತಿ ಹಾಳು ಮಾಡಬೇಡಿರಿ. ಮಗು ಓದಲಿ, ಮುಂದೆ ಬರಲಿ, ನಾಲ್ಕಕ್ಷರ ಕಲಿತರೆ ಏನೂ ಕೆಟ್ಟದಾಗೊಲ್ಲವೆಂದು ಊರಿನ ಹಿರಿಯರು ತಿಳಿಸಿ ಹೇಳಿದಾಗ ಮಗನನ್ನು ದಂದರಗಿಯಿಂದ ಕರೆಸಿಕೊಂಡು, ತಿಕೋಟಾದ ಪ್ರಾಥಮಿಕ ಶಾಲೆಗೆ ಸೇರಿಸಿದರು. ಅಜ್ಜಿಯ ಮನೆಯಿಂದ ಹಿಂತಿರುಗಿದ ಮಲ್ಲಿಕಾರ್ಜುನ ತೀಕೋಟಾದ ಸರ್ಕಾರಿ ಕನ್ನಡ ಶಾಲೆ ಸೇರುವ ಹೊತ್ತಿಗಾಗಲೇ ಅವನ ಓರಿಗೆಯವರೆಲ್ಲ ಮೇಲಿನ ತರಗತಿಗಳಿಗೆ ಹೋಗಿದ್ದರು. ಮಲ್ಲಿಕಾರ್ಜುನರಿಗೆ ಒಂದು ತರಹದ ಮುಜುಗರ, ಒಂದು ಬಗೆಯ ಮಾನಸಿಕ ಹಿಂಸೆ, ಕಳವಳ, ಅಸಮಾಧಾನ, ಶಾಲೆಯ ಶಿಕ್ಷಕರು ಹೆಚ್ಚಿನ ಪ್ರಮಾಣದಲ್ಲಿ ದಂಡಿಸುತ್ತಿದ್ದರು.

ಆದರೆ ಎಲ್ಲ ಗುರುಗಳು ಶಾಲಾ ಮಕ್ಕಳಿಗೆ ಪಾಠ ಮಾಡುವಾಗ ಕಾಳಜಿಯಿಂದ ಪಾಠಮಾಡುತ್ತಿದ್ದರು. ಎಂದು ತಮ್ಮ ಬಾಲ್ಯದ ದಿನಗಳಲ್ಲಿ ನೆನಪಿಸಿ ಕೊಳ್ಳುತ್ತಾರೆ. ಶಾಲೆಯಲ್ಲಿ ಮಕ್ಕಳು ತಪ್ಪು ಮಾಡಿದರೆ ಅಂತಹ ಮಕ್ಕಳಿಗೆ ದಂಡವನ್ನು ವಿಧಿಸುತ್ತಿದ್ದರು. ದಂಡವನ್ನು ಕೊಡುವ ಹೆದರಿಕೆಯಿಂದಾಗಿ ಮಾರನೇ ದಿನ ಚೆನ್ನಾಗಿ ಪಾಠ ಒಪ್ಪಿಸುತ್ತಿದ್ದೆವು ಎಂದು ಹೇಳುತ್ತಾರೆ. ಮಲ್ಲಿಕಾರ್ಜುನರ ನಿಕಟಗೆಳೆಯ ಬಸಪ್ಪ ಬಡತಿ ಅಷ್ಟು ಹೊತ್ತಿಗಾಗಲೇ ಮುಂದಿನ ಕ್ಲಾಸಿಗೆ ಹೋಗಿದ್ದ. ಎಮ್ಮೆ, ದನ ಕಾಯುವ ಹಾಗೂ ಕಟ್ಟಿಗೆ ಹೊರುವ ಕಾಯಕದಲ್ಲಿ ಅನಿವಾರ್ಯವಾಗಿ ತೊಡಗಿದ್ದ ಮಲ್ಲಿಕಾರ್ಜುನನಿಗೆ ಶಾಲೆಗೆ ಬಂದ ನಂತರ ಸಹಿತ ಸರಿಯಾದ ಅಕ್ಷರ ಜ್ಞಾನವು ಬರಲಿಲ್ಲ. ತಮ್ಮ ಹೆಸರನ್ನು ಬರೆಯಲೂ ಸಹ ಬರುತ್ತಿರಲಿಲ್ಲ. ಆಗ ಪಾಟೀಲರು ಮೊರೆ ಹೋದದ್ದು ತಮ್ಮ ಮಿತ್ರ ಬಸಪ್ಪ ಬಡತಿಗೆ. ಬಡತಿ ಪಾಟೀಲರಿಗೆ ಕಾಗುಣಿತದಿಂದ ಅಕ್ಷರಭ್ಯಾಸ ಕ್ರಮವನ್ನು ಸರಳವಾಗಿ ಬರೆಯಲು ಬರುವಂತೆ ಮತ್ತು ಓದಲು ಬರುವಂತೆ ಕಲಿಸ ತೊಡಗಿದನು

---

೫. ಅಮರೇಶ. ಕುಂಬಾರ : ಭಾವಚಿತ್ರ ಕುಂಚಬ್ರಹ್ಮ ಎಂ. ಬಿ. ಪಾಟೀಲ : ಪುಟ-೧೯

ಇದರಿಂದಾಗಿ ಪಾಟೀಲರು ಪುಳಕಿತರಾಗಿ ಪಾಠಗಳನ್ನು ಮನಸ್ಸಿಟ್ಟು ಅಭ್ಯಾಸ ಮಾಡತೊಡಗಿದರು ಇದರ ಪರಿಣಾಮ ನಾಲ್ಕನೇ ಕ್ಲಾಸಿನ ಪರೀಕ್ಷೆಯಲ್ಲಿ ಮೊದಲ ದರ್ಜೆ ಮೊದಲ ಸ್ಥಾನ ಪಡೆದರು. ಸುತ್ತಲಿನವರ ಪ್ರಶಂಸೆಯ ಜೊತೆಗೆ ೩೦ ರೂಪಾಯಿ ವ್ಯಾಸಂಗ ವೇತನ ಬರತೊಡಗಿತು. ಪಾಟೀಲರಿಗೆ ನೀಡಲಾದ ವ್ಯಾಸಂಗ ವೇತನವನ್ನು ನಿಯಮದಂತೆ ಪಾಲಕರೇ ಪಡದು ಕೊಳ್ಳಬೇಕಾದಾಗ ಶಾಲೆಯ ಮುಖ್ಯೋಪಾಧ್ಯಾಯರು ಭೀಮನಗೌಡರಿಗೆ ಹೇಳಿಕಳಿಸಿದರು. ಅವರಿಗೆ ಮಗನ ಸಾಮರ್ಥ್ಯದ ಅರಿವೇ ಇಲ್ಲ. ಸುದ್ದಿ ಬಂದಾಗ ಅಸಡ್ಡೆಯಿಂದಲೇ ವರ್ತಿಸಿದರು. ಈ ಮಾಸ್ತರ ಪ್ರಾಯಶಃ ನನ್ನ ಅಂಗಡಿಯಿಂದ ಸಾಲದ ಮೇಲೆ ಬಟ್ಟೆಕೊಂಡು ಹೋಗಿದ್ದರೇನೋ, ಅದಕ್ಕೆ ಇವನಿಗೆ ಹೆಚ್ಚಿನ ಮಾರ್ಕ್ಸ ತುಂಬ್ಯಾರ ಎಂದು ವ್ಯಂಗ್ಯವಾಗಿ ನುಡಿದರು.

ತಮ್ಮ ಮಗ ವಿದ್ಯೆ ಕಲಿಯಲು ವಹಿಸಿದ್ದ ಶ್ರಮವನ್ನು ಅರ್ಥ ಮಾಡಿಕೊಳ್ಳದೆ ಹೋದರು. ಅವರಿಗೆ ಮಗ ನಿಜವಾಗಿಯೂ ತನ್ನ ಪ್ರಯತ್ನದಿಂದಲೇ ವ್ಯಾಸಂಗ ವೇತನ ಗಳಿಸಿದ್ದಾನೆಂದು ನಂಬಿದ್ದು ಸ್ವತಃ ಮುಖ್ಯೋಪಾಧ್ಯಾಯರೆ ಮಲ್ಲಿಕಾರ್ಜುನರ ಗುಣಗಾನ ಮಾಡಿದಾಗ, ಮಗನ ವ್ಯಾಸಂಗ ವೇತನ ಪಡೆದುಕೊಂಡ ಭೀಮನಗೌಡರು ಆತನ ಬಗ್ಗೆ ತಮ್ಮಲ್ಲಿ ಮೂಡಿದ ಸ್ವಲ್ಪ ಮಟ್ಟಿನ ಮೆಚ್ಚುಗೆಯ ಸಂಕೇತವೆಂಬಂತೆ ಮಲ್ಲಿಕಾರ್ಜುನರ ಕೈಗೆ ಒಂದು ರೂಪಾಯಿಯನ್ನು ಇಟ್ಟರು ಅದರಿಂದ ಇವರು ಗೆಳೆಯರೊಂದಿಗೆ ತಿನಿಸನ್ನು ಹಂಚಿಕೊಂಡಿದ್ದರು. ಅಲ್ಲಿಯವರೆಗೂ ಕಿರಾಣಿ ಅಂಗಡಿಯಲ್ಲಿ ಒಂದೋ ಎರಡೋ ಪೈಸೆಗೆ ಚುರುಮರಿ ತಿನ್ನುವುದುರಲ್ಲೇ ಖುಷಿಪಡುತ್ತಿದ್ದ ಮಲ್ಲಿಕಾರ್ಜುನರು ತಾನೇ ಗಳಿಸಿದ್ದ ಹಣದಲ್ಲಿ ಹೊಟ್ಟೆ ತುಂಬಿಸಿಕೊಂಡಂತ ಆ ಕ್ಷಣವು ಒಂದು ಅಮೃತ ಘಳಿಗೆ.

ಪಾಟೀಲರಿಗೆ ಚಿಕ್ಕ ವಯಸ್ಸಿನಿಂದಲೂ ಆಗಾಧವಾದ ಸ್ಮರಣಶಕ್ತಿ. ಪೂಜಾರಿ ಎಂಬ ಮಾಸ್ತರೊಬ್ಬರು ಶಾಲೆಯ ವೇಳೆಯ ನಂತರವೂ ತಮ್ಮ ಮನೆಯಲ್ಲಿ ಚಿಮಣಿ ಬೆಳಕಿನಲ್ಲಿ ಹೇಳಿಕೊಡುತ್ತಿದ್ದ ಪಾಠ ಪ್ರವಚನಗಳನ್ನು ಮನದಟ್ಟು ಮಾಡಿಕೊಳ್ಳುತ್ತಿದ್ದರು. ಪೂಜಾರ್ ಹಾಗೂ ಭೀಮಣ್ಣ ಮಾದರ್ ಎಂಬ ಶಿಕ್ಷಕರು ಚಮ್ಮಾರ ಮನೆತನಕ್ಕೆ ಸೇರಿದವರಾದ್ದರಿಂದ ಅವರಲ್ಲಿ ಪಾಟೀಲರು ಪಾಠ ಕಲಿಯುವುದರ ಬಗ್ಗೆ ಮನೆಯಲ್ಲಿ ತೀವ್ರ ವಿರೋಧವಿತ್ತು. ಕಂಡವರಿತ್ತ ಕಾಯಿಪಲ್ಲೆ ಕಾಳುಕಡಿಯನ್ನು ಸಹ ಮುಟ್ಟದಿದ್ದ ಈ ಮಾಸ್ತರರು ನಿಸ್ವಾರ್ಥದಿಂದ ಮಕ್ಕಳಿಗೆ ಪಾಠವನ್ನು ಬೋಧಿಸುತ್ತಿದ್ದ ರೀತಿ ಮಲ್ಲಿಕಾರ್ಜುನನ ಮನಸ್ಸಿನಲ್ಲಿ ಅಳಿಸಲಾರದಂಥ ಮುದ್ರೆಯನ್ನೊತ್ತಿತ್ತು.

ಮಲ್ಲಿಕಾರ್ಜುನರ ಮುಖ್ಯಗುರುಗಳು ಇವರ ಬಗ್ಗೆ ಆಸಕ್ತಿ ಪ್ರೀತಿ ತೋರಿಸುತ್ತಿದ್ದರು. ಆದರೆ ಇವರು ಬುಟ್ಟಿ ಹೆಣೆಯೋ ಕಸುಬಿನ, ಜಾತಿಗೆ ಸೇರಿದವರು, ಪಾಟೀಲರಿಗೆ ಜೋಶಿ ಶಾಣೆ ಇವರೆಲ್ಲರ ಬಗ್ಗೆಆದರವಿದ್ದರೂ ವಿಶೇಷ ಆಕರ್ಷಣೆಯಿದ್ದುದು ಎ. ಎಸ್. ಬುರುಡ ಮಾಸ್ತರ ಬಗ್ಗೆ. ಈ ಮಾಸ್ತರರು ಸಹಿತ ಬುಟ್ಟಿ ಹೆಣೆಯೋ ಕಸುಬಿನ, ಜಾತಿಗೆ ಸೇರಿದವರು. ಆದರೆ ಇವರ ಬಗ್ಗೆ ಪಾಟೀಲರಿಗೆ ಹೆಚ್ಚಿನ ಪ್ರಿತಿ ಉಂಟಾಗಲು ಕಾರಣವೆಂದರೆ ಅವರು ಸ್ವತಃ ಚಿತ್ರ ಕಲಾವಿದರು. ಡ್ರಾಯಿಂಗ್‌ನಲ್ಲಿ ತರಬೇತಿ ಪಡೆದಿದ್ದರು. ಚಿತ್ರ ಬರೆಯುವವರನ್ನು ಕಂಡರೆ ಇವರಿಗೆ ವಿಶೇಷ ಆಕರ್ಷಣೆ. ಬಾಲ್ಯದಲ್ಲಿ ಅನೇಕ ವರ್ಷಗಳವರೆಗೂ ಪಾಟೀಲರು ಕ್ಯಾಲೆಂಡರ್ ಚಿತ್ರಗಳನ್ನು ಬಿಟ್ಟು ಬೇರ್‍ಯಾವ ಕೃತಿಗಳನ್ನು ಕಂಡೇ ಇರಲಿಲ್ಲ.

ಕ್ಯಾಲೆಂಡರ್‌ನಲ್ಲಿ ಚಿತ್ರಿಸಿದ್ದ ರಾಮಾಯಣದ ದೃಶ್ಯಗಳು, ಶ್ರೀರಾಮನ ಉಡುಗೆತೊಡುಗೆ, ಆಭರಣ, ಧನಸ್ಸು ಅವನ್ನೆಲ್ಲ ಕಂಡಾಗ ಮಲ್ಲಿಕಾರ್ಜುನರು ವಿಸ್ಮಿತರಾಗುತ್ತಿದ್ದರು. ಮಾಸ್ತರರು ಬುಟ್ಟಿ ಹೆಣೆಯುತ್ತಿದ್ದಾಗ ಅವರ ಕೈಚಳಕವನ್ನು ಕಂಡು ಅಚ್ಚರಿಗೊಳ್ಳುತ್ತಿದ್ದರು. ಮಲ್ಲಿಕಾರ್ಜುನರು ಏಳನೆಯ ತರಗತಿಯವರೆಗೂ ಮೊದಲ ದರ್ಜೆಯಲ್ಲೇ ಉತ್ತೀರ್ಣರಾಗುತ್ತ ಬಂದರು., ಇದರ ಜೊತೆಗೆ ಕಲೆ, ಕಲೆಗಾರಿಕೆಯ ಬಗ್ಗೆ ತಮ್ಮದೇ ಆದ ದೃಷ್ಟಿಕೋನವೊಂದನ್ನು ಮನಸ್ಸಿನಲ್ಲಿ ರೂಪಿಸಿಕೊಳ್ಳುತ್ತಲ್ಲಿದ್ದರು. 'ಮಲ್ಲಿಕಾರ್ಜುನರ ಪಾಲಿಗೆ ಕ್ರಮೇಣ ಹೊರಜಗತ್ತು ತೆರೆದುಕೊಳ್ಳುತ್ತಿತ್ತು. ಕುರಂದವಾಡ ಸಂಸ್ಥಾನಕ್ಕೆ ಸೇರಿದ್ದ ತಿಕೋಟಾ ಆಗಿನ ಮುಂಬೈ ರಾಜ್ಯದ ಸರಹದ್ದಿನಲ್ಲಿ ಇದ್ದುದರಿಂದ ಮೊರಾರ್ಜಿದೇಸಾಯಿ, ಬಿ.ಡಿ.ಜತ್ತಿ ಮುಂತಾದ ರಾಜಕಾರಣಿಗಳು ಅಲ್ಲಿಗೆ ಬಂದು ಮಾಡುತ್ತಿದ್ದ ಭಾಷಣಗಳು ಕಿವಿಗೆ ಬೀಳುತ್ತಿದ್ದವು. ಮಹಾತ್ಮ ಗಾಂಧಿಯವರ ಪ್ರಭಾವದಿಂದಾಗಿ ಆ ಸ್ಥಳದಲ್ಲಿ ನಡೆಯುತ್ತಿದ್ದ ಸ್ವಾತಂತ್ರ್ಯಪೂರ್ವ ಚಳುವಳಿಗಳನ್ನು ಪಾಟೀಲರ ಎಳೆ ಕಣ್ಣುಗಳು ಗಮನಿಸುತ್ತಿದ್ದವು. ಊರಿನಲ್ಲಿ ಜಾನಪದ ಹಾಡುಗಾರರು, ಕದುರೆ ಸವಾರರು ಸುತ್ತಾಡುತ್ತಿದ್ದಾಗ ಮಲ್ಲಿಕಾರ್ಜುನ ಚಕಿತಗೊಳ್ಳುತ್ತಿದ್ದ. ಈ ಎಲ್ಲ ಸಂಗತಿಗಳು ಅವರ ಮುಂದಿನ ಕಲಾಬದುಕನ್ನು ರೂಪಿಸುವಲ್ಲಿ ಪ್ರಮುಖಪಾತ್ರ ವಹಿಸಿದವು.

ಸ್ವಾತಂತ್ರ್ಯ ಚಳುವಳಿಯ ದಿನಗಳಲ್ಲಿ ಸುಭಾಷಚಂದ್ರ ಬೋಸ್, ಕಿತ್ತೂರ ಚೆನ್ನಮ್ಮ, ಮಹಾತ್ಮ ಗಾಂಧಿ ಇವರನ್ನು ಕುರಿತ ಲಾವಣಿ ಹಾಡುಗಳು ಇವರಿಗೆ ಬಾಯಿಪಾಠವಾಗಿದ್ದವು. ಕೆಲವು ಹಾಡುಗಾರರು ಹಾಡುವುದರೊಂದಿಗೇ ಬೇಹುಗಾರರ ಕೆಲಸವನ್ನೂ ಮಾಡುತ್ತಿದ್ದರು. ಚಳುವಳಿಗಾರರಿಗೆ ಸಂದೇಶವನ್ನು ರವಾನಿಸುತ್ತಾ ಊರೂರಿಗೆ ತಿರುಗಿತ್ತಿದ್ದರು. ಪೋಲಿಸರ ಬೂಟಿನ ಸಪ್ಪಳ ಕೇಳಿದೊಡನೆಯೇ ಸಿಕ್ಕ ಸಿಕ್ಕ ಮನೆಗಳನ್ನು ಚಳುವಳಿಗಾರರು ಹೊಕ್ಕಾಗ

ಆಯಾ ಮನೆಯವರು ಚಳುವಳಿಗಾರರನ್ನು ಮನೆಯ ಗುಪ್ತಸ್ಥಳಗಳಲ್ಲಿ ಬಚ್ಚಿಡುತ್ತಿದ್ದರು. ಇದೆಲ್ಲ ನೋಡಿ ಪಾಟೀಲರಿಗೆ ರೋಮಾಂಚನವಾಗುತ್ತಿತ್ತು. ಊರಿನ ನಂದಿಬನ ಪಾಟೀಲರ ಪಾಲಿಗೊಂದು ನಿಗೂಢ ಸ್ಥಳ. ಒಂದು ಕಾಲಕ್ಕೆ ಅದೊಂದು ಸಮೃದ್ಧ ತೋಟ. ಬರಗಾಲದಲ್ಲೂ ಸಹ ಜನ ಅಲ್ಲಿ ಬೆಳೆಯುತ್ತಿದ್ದ ಕೊಬ್ಬರಿಯನ್ನು ತಿಂದು ಬದುಕುತ್ತಿದ್ದುದುಂಟು. ಚಳುವಳಿಗಾರರ ಚಟುವಟಿಕೆಗಳೆಲ್ಲವೂ ನಂದಿ ಬನದಲ್ಲಿ ನಡೆಯುತ್ತಿದ್ದವು. ಮಲ್ಲಿಕಾರ್ಜುನರು ವಾಸವಾಗಿದ್ದ ಸ್ಥಳದ ಆಸುಪಾಸಿನಲ್ಲಿಯೇ ಇಂಥ ಘಟನೆಗಳೆಲ್ಲವೂ ನಡೆಯುತ್ತಿದ್ದವು. ಪಾಟೀಲರಿಗೆ ಇಂತಹ ನೋಟಗಳು, ಘಟನೆಗಳು ಹೊಸ ಬಗೆಯ ಅನುಭವಗಳನ್ನು ತಂದುಕೊಡುತ್ತಿದ್ದವು. ಪಾಟೀಲರು ಇಂತಹ ಸನ್ನಿವೇಶಗಳಿಗೆ ಒಗ್ಗಿಕೊಳ್ಳುತ್ತಲೇ ಹೊಸ ವ್ಯಕ್ತಿಯಾಗಿ ಬೆಳೆಯುತ್ತಿದ್ದರು.

ಮಲ್ಲಿಕಾರ್ಜುನರು ಶಾಲೆಯಲ್ಲಿ ಕಲಿಯುತ್ತಿದ್ದಾಗ ವಿಜಾಪೂರಕ್ಕೆ ಒಂದು ವೃತ್ತಿ ನಾಟಕ ತಂಡ ಆಗಮಿಸಿತು. ಮಾತುಹೆಚ್ಚು ಆಡುವ ಪಾಟೀಲರು ಹಾಸ್ಯಧೋರಣೆ ಹೊಂದಿದವರಾಗಿದ್ದರು. ಅಲ್ಲದೆ ನಾಟಕದಲ್ಲಿನ ಹಾಸ್ಯ ಸನ್ನಿವೇಶಗಳಿಗೆ ಇವರು ಹೆಚ್ಚು ಸ್ಪಂದಿಸುತ್ತಿದ್ದರು. ಹಾಗಾಗಿ ನಾಟಕ ತಂಡ ಊರಿನಲ್ಲಿ ಮೊಕ್ಕಾಂ ಮಾಡಿದಾಗ ಅದೇನೋ ಖುಷಿ. ಯಾವುದರ ಬಗ್ಗೆಯಾಗಲಿ ಕಲಾತ್ಮಕವಾಗಿ ವಿಚಾರ ಮಾಡುವಂಥ ಮನೋಭಾವವನ್ನು ಅಷ್ಟು ಹೊತ್ತಿಗಾಗಲೇ ಬೆಳೆಸಿಕೊಂಡಿದ್ದರು. ಹಾಗಾಗಿ ಈ ಕಂಪನಿ ಪ್ರದರ್ಶಿಸುತ್ತಿದ್ದ ಎಲ್ಲ ನಾಟಕಗಳನ್ನು ನೋಡಿ ಅವುಗಳಿಂದ ಸಾಕಷ್ಟು ಅಂಶಗಳನ್ನು ಅರಿತುಕೊಂಡರು.

ನಾಟಕಗಳಲ್ಲಿನ ಹಾಸ್ಯ ಸನ್ನಿವೇಶಗಳಂತೆ ನಾಟಕದ ಪಾತ್ರಧಾರಿಗಳು ನುಡಿಸುವ ಉದ್ದುದ್ದ ಸಂಭಾಷಣೆಗಳು, ಕಠಿಣ ಶಬ್ದಗಳನ್ನು ಪಾಟೀಲರು ಕಂಠಪಾಠಮಾಡಿಕೊಂಡು ಹೇಳುತ್ತಿದ್ದರು. ಇಂತಹ ಸಂದರ್ಭದಲ್ಲಿ ಪೌರಾಣಿಕ ನಾಟಕಗಳನ್ನು ರಚಿಸುವಲ್ಲಿ ಪ್ರಸಿದ್ಧರಾಗಿದ್ದ ಮತ್ತು ಕರ್ನಾಟಕದ ಶೆಕ್ಸಪೀಯರ್ ಎಂದು ಹೆಸರುಗಳಿಸಿದ ಕಂದಗಲ್ ಹನುಮಂತರಾಯರ ನಾಟಕಗಳನ್ನು ನೋಡುವ ಭಾಗ್ಯ ಇವರಿಗೆ ಒದಗಿಬಂದಿತು.

ನಾಟಕಕಾರ ಕಂದಗಲ್ ಹನುಮಂತರಾಯರು ಬರೆದಿದ್ದ 'ಮಾತಂಗ ಕನ್ಯೆ' 'ಬಡತನದ ಭೂತ' ನಾಟಕಗಳನ್ನು ಹವ್ಯಾಸಿ ತಂಡಗಳು ತಿಕೋಟಾದಲ್ಲಿ ಅಭಿನಯಿಸಿದಾಗ ಮಲ್ಲಿಕಾರ್ಜುನರಿಗೂ ಪಾತ್ರಗಳು ಸಿಕ್ಕವು. ಆದರೆ ಇವರ ತಂದೆಯವರಿಗೆ ನಾಟಕ ಮಾತ್ರವಲ್ಲದೆ ಯಾವ ಕಲಾಪ್ರಕಾರಗಳಲ್ಲಿಯೂ ಆಸಕ್ತಿ ಇರಲಿಲ್ಲ. ಹಾಗಾಗಿ ಇವರು ತಂದೆಯ ಕಣ್ಣು ತಪ್ಪಿಸಿ ಕಳ್ಳತನದಿಂದ ರಿಹರ್ಸಲ್‌ಗಳಿಗೆ ಹಾಜರಾದರು. ನಾಟಕದ ಎರಡು ಪ್ರಯೋಗಗಳು ಯಶಸ್ವಿಯಾಗಿ ಜರುಗಿದ್ದವು. ಊರಿನ ಜನರೆಲ್ಲ ನಾಟಕದ ಸ್ಥಳಕ್ಕೆ ಭಾರೀ ಸಂಖ್ಯೆಯಲ್ಲಿ ಜಮಾಯಿಸಿದ್ದರು.

ಪಾಟೀಲರ ತಂದೆಗಾದರೋ ಕಲೆ, ಸಾಹಿತ್ಯ, ನಾಟಕ ಇವುಗಳೆಂದರೆ ಕೆಲಸಕ್ಕೆ ಬಾರದ ಹವ್ಯಾಸಗಳು ಎಂಬ ಭಾವನೆ. ನಡುರಾತ್ರಿಯಲ್ಲಿರಬಹುದು ಮನೆಯಲ್ಲಿ ಭೀಮನಗೌಡರು ಹಾಗೂ ಒಬ್ಬ ಸೇವನಕನನ್ನು ಬಿಟ್ಟರೆ ಮತ್ಯಾರೂ ಇಲ್ಲ. ಮಲಗಿದ್ದ ಭೀಮನಗೌಡರಿಗೆ ಸಮೀಪದಲ್ಲೇ ಪ್ರದರ್ಶಿತಗೊಳ್ಳುತ್ತಿದ್ದ ನಾಟಕದಲ್ಲಿ ಮಲ್ಲಿಕಾರ್ಜುನರಾಡುತ್ತಿದ್ದ ಸಂಭಾಷಣೆಗಳು ಆ ನೀರವ ರಾತ್ರಿಯನ್ನು ಬೇಧಿಸಿಕೊಂಡು ಕೇಳಿಸತೊಡಗಿದವು.

ಮಗನ ಧ್ವನಿಯ ಗುರುತನ್ನು ಪತ್ತೆ ಹಚ್ಚಿದ ಅವರು ತಾವೆಂದೂ ನಾಟಕ ಮಂದಿರಕ್ಕೆ ಕಾಲಿಟ್ಟಿರದಿದ್ದರೂ ಅಂದು ಮೊದಲ ಬಾರಿಗೆ ಅದರತ್ತ ನಡೆದರು. ಅಭಿನಯದಲ್ಲೇ ಮುಳುಗಿದ್ದ ಪಾಟೀಲರು ತಂದೆ ಬಂದು ಕೂತಿದ್ದರೂ ಗಮನಿಸಿರಲಿಲ್ಲ. ಆದರೆ ತಂದೆ ಮಾತ್ರ ಮಗನ ಅಭಿನಯ ಚಾತುರ್ಯ ಕಂಡು ಮೂಕವಿಸ್ಮಿತರಾದರು. ಕಾರಣವೆಂದರೆ ಅಂದಿನ ದಿನಗಳಲ್ಲಿ ಕಂದಗಲ್ಲ ಹನುಮಂತರಾಯರ ನಾಟಕದಲ್ಲಿನ ಸಂಭಾಷಣೆಗಳನ್ನು ಸಾಮಾನ್ಯರಿಗೆ ಬಾಯಿಂದ ನುಡಿಸಲೂ ಆಗುತ್ತಿರಲಿಲ್ಲ. ವಿಶೇಷ ಪ್ರತಿಭಾಶಾಲಿಗಳಿಗೆ ಮಾತ್ರ ಅದು ಸಾಧ್ಯವಾಗುತ್ತಿತ್ತು. ಮಗನ ಅಭಿನಯ ಮಾತುಗಾರಿಕೆ ಕಂಡು ಅವರ ಮನಸ್ಸು ದಂಗಾಗಿತ್ತು.

ಇದರಿಂದಾದ ಪರಿಣಾಮವೆಂದರೆ ಭೀಮನಗೌಡರು ಮಗನನ್ನು ಹೀಯಾಳಿಸುವುದು ಕಡಿಮೆಮಾಡಿದ್ದು ಮಗನ ಚಟುವಟಿಕೆಗಳ ಬಗ್ಗೆ ಅವರಿಗೆ ಕ್ರಮೇಣ ಅಭಿಮಾನ ಮೂಡತೊಡಗಿತ್ತು. ಏಳನೇ ತರಗತಿಯವರೆಗೆ ತಿಕೋಟಾದಲ್ಲಿ ಶಿಕ್ಷಣವನ್ನು ಪಡೆದುಕೊಂಡ ಪಾಟೀಲರು ಅನಂತರ ಅಲ್ಲಿಂದ ೧೩ ಮೈಲಿಗಳಷ್ಟು ದೂರವಿರುವ ವಿಜಾಪುರದ ಶ್ರೀ ಸಿದ್ದೇಶ್ವರ ಹೈಸ್ಕೂಲನ್ನು ಸೇರಿದರು.

ವಿಜಾಪುರ ತಲುಪಲು ಆಗ ಖಾಸಗಿ ಬಸ್ಸುಗಳ ಸಂಚಾರವಿತ್ತೇ ಹೊರತು ಸರ್ಕಾರಿ ಬಸ್ಸುಗಳಿರಲಿಲ್ಲ. ಎಂಟನೆಯ ಕ್ಲಾಸಿಗೆ ಸೇರಿದ ಪಾಟೀಲರು ಗೆಳೆಯರ ಜತೆ ಕೋಣೆಯಲ್ಲಿ ವಾಸಮಾಡತೊಡಗಿದರು. ಪಾಟೀಲರ ಶ್ರೀಮಂತ ಗೆಳೆಯರು ಧಾರಳಾವಾಗಿ ಹಣವನ್ನು ವೆಚ್ಚ ಮಾಡುತ್ತಿದ್ದಾಗ ಮನೆಯಿಂದ ತಿಂಗಳಿಗೆ ೧೦ ರೂಪಾಯಿಯನ್ನು ಮಾತ್ರ ಪಡೆಯುತ್ತಿದ್ದ ಪಾಟೀಲರು ತಮ್ಮ ಸ್ಥಿತಿಯ ಬಗ್ಗೆ ಮುಜುಗರಪಡುತ್ತಲೇ ಕಾಸುಕಾಸಿಗೆ ಲೆಕ್ಕ ಹಾಕುತ್ತಾ ಹೇಗೋ ದಿನಗಳನ್ನು ಕಳೆಯುತ್ತಿದ್ದರು. ಪಾಟೀಲರ ಹಿರಿಯಣ್ಣ ಬಸನಗೌಡ. ತಂದೆಯಂತೆಯೇ ವ್ಯಾಪಾರ ವ್ಯವಹಾರದಲ್ಲಿ ತೊಡಗಿದ್ದರು. ಹಿರಿಯಣ್ಣ ಶಿವನಗೌಡ ಶ್ರೀಮಂತ ಗೆಳೆಯರ ಮಧ್ಯೆ ಮನಸ್ಸನ್ನು ಮುದುಡಿಕೊಂಡು ಕಾಲ ಹಾಕುತ್ತಿದ್ದ ತಮ್ಮನ ಬವಣೆಯನ್ನು ಅರ್ಥಮಾಡಿಕೊಂಡು ಕಾಲೇಜು ಕಲೆಯುತ್ತಿದ್ದ ತಮ್ಮ ಗೆಳೆಯ ತಿಕೋಟಕರ್ ಅವರಿಗೆ ಹೇಳಿ ಪಾಟೀಲರಿಗೆ ಒಂದು

ಪ್ರತ್ಯೇಕ ಕೋಣೆಯನ್ನು ಕೊಡಿಸಿದರು. ಪಾಟೀಲರ ಬಗ್ಗೆ ಅಪಾರವಾದ ಅಕ್ಕರೆಯಿದ್ದ ತಾಯಿ, ಪ್ರತಿದಿನವೂ ಮಗನಿಗೆ ತಗಡಿನ ಡಬ್ಬಿಯಲ್ಲಿ ರೊಟ್ಟಿ, ಸಾರು, ಮೊಸರನ್ನು ರವಾನಿಸುತ್ತಿದ್ದರು. ಊರಿನಿಂದ ತಾಯಿ ಊಟವನ್ನು ಕಳಿಸುವವರೆಗೂ ಪಾಟೀಲರು ನೀರು ಕುಡಿದು ಇರುತ್ತಿದ್ದರೆ ಹೊರತು ಮತ್ತೊಬ್ಬರಿಗೆ ತಾವು ಊಟ ಮಾಡಿಲ್ಲವೆಂದು ಹೇಳುತ್ತಿರಲಿಲ್ಲ. ಇದ್ದಿದ್ದರಲ್ಲೇ ಸಂತೋಷ ಪಡುವ ಸ್ವಭಾವ ಇವರದಾಗಿತ್ತು.

ಪಾಟೀಲರೊಳಗಿದ್ದ ಚಿತ್ರಕಲೆಯ ಪ್ರತಿಭೆಯನ್ನು ಬೆಳಕಿಗೆ ತರಲು ವಿಶೇಷ ಪ್ರಸಂಗಗಳು ನೆರವಾದವು. ಇವರ ಹಿರಿಯಣ್ಣ-ಶಿವನಗೌಡ ಪಾಟೀಲರು 'ಗೆಳೆಯರ ಬಳಗ' ಎಂಬ ಸಂಸ್ಥೆಯನ್ನು ಹುಟ್ಟು ಹಾಕಿದ್ದು ಮಾತ್ರವಲ್ಲದೆ 'ವಸಂತ' ಎಂಬ ಕೈಬರಹದ 'ಮಾಸಪತ್ರಿಕೆ'ಯನ್ನು ಹೊರತರಲು ಆರಂಭಿಸಿದರು. ಪಾಟೀಲರಲ್ಲಿ ತುಡಿಯುತ್ತಿದ್ದ ಕಲಾಭಿವ್ಯಕ್ತಿ ಇಲ್ಲಿ ಬಹಿರಂಗಗೊಳ್ಳತೊಡಗಿತು. ಚಿತ್ರಕಲೆಯಲ್ಲಿ ಅವರು ತಮ್ಮ ಸೃಜನಶೀಲ ಭಾವನೆಗಳನ್ನು ತೋಡಿಕೊಳ್ಳಲು 'ವಸಂತ' ಪತ್ರಿಕೆಯ ಮುಖಪುಟಗಳನ್ನೇ ಬಳಸಿಕೊಂಡರು.

ಹೈಸ್ಕೂಲ್ ಹಂತದಲ್ಲಿ ಮೂರು ವರ್ಷಗಳವರೆಗೆ 'ವಸಂತ' ಪತ್ರಿಕೆಯ ಮುಖಪುಟಗಳಿಗೆ ಪಾಟೀಲರಿಂದ ರಚಿತವಾದ ವರ್ಣಚಿತ್ರಗಳೇ ಆಧಾರವಾಗಿದ್ದವು. ಗೆಳೆಯರ ಬಳಗವು ಹಲವಾರು ಸಾಂಸ್ಕೃತಿಕ ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳುತ್ತಿತ್ತು. ಮಿರ್ಜಿ ಅಣ್ಣಾರಾಯ, ಬಿ. ಟಿ. ಸಾಸನೂರು, ಸಿಂಪಿ ಲಿಂಗಣ್ಣ ಇಂಥ ಪ್ರಮುಖ ಭಾಷಣಕಾರರನ್ನು ಕರೆಸುತ್ತಿತ್ತು. ಪಿ.ಡಿ.ಜೆ. ಹೈಸ್ಕೂಲಿನ ರಜತ ಮಹೋತ್ಸವಕ್ಕೆ ತಿ.ತಾ. ಶರ್ಮ ಹಾಗೂ ರಂ. ಶ್ರೀ ಮುಗುಳಿ ಅತಿಥಿಗಳಾಗಿ ಬಂದಿದ್ದ ಸಂದರ್ಭದಲ್ಲಿ ಅವರು ಉಪನ್ಯಾಸ ನೀಡುತ್ತಿದ್ದಾಗ ಪಾಟೀಲರು ಅವರ ರೇಖಾಚಿತ್ರಗಳನ್ನು ಬರೆದು ಎಲ್ಲರನ್ನೂ ದಂಗು ಬಡಿಸಿದರು. ರಂಗೋಲಿ ಸ್ಪರ್ಧೆಯಲ್ಲಿ, ಲ್ಯಾಂಡ್ ಸ್ಕೇಪ್ ರಚಿಸಿ ಸೈ ಎನಿಸಿಕೊಂಡರು. ಇವರ ಕಲೆಯನ್ನು ಮೆಚ್ಚಿದ ಶಾಲೆ ಇವರಿಗೆ ಬೆಳ್ಳಿ ಪದಕ ಹಾಗೂ ಪ್ರಶಸ್ತಿ ಪತ್ರ ನೀಡಿ ಪ್ರೋತ್ಸಾಹಿಸಿತು.

ಹೀಗೆ ಪಾಟೀಲರ ಕಲಾಭಿರುಚಿ ಪ್ರೌಢಶಾಲೆಯ ದಿನಗಳಿಂದಲೇ ಉನ್ನತ ರೀತಿಯಲ್ಲಿ ಪ್ರಕಾಶಿತಗೊಳ್ಳತೊಡಗಿತು.ಶ್ರೀ ಸಿದ್ದೇಶ್ವರ ಹೈಸ್ಕೂಲಿನಲ್ಲಿರುವಾಗ ಅಲ್ಲಿನ ಚಿತ್ರಕಲಾ ಶಿಕ್ಷಕರಿಂದ ಪಾಟೀಲರಿಗೆ ಸಾಕಷ್ಟು ಪ್ರೋತ್ಸಾಹ ದೊರೆಯಿತು. ಮುಂದೆ ಅವರೊಬ್ಬ ಕಲಾವಿದರಾಗಲು ಇವರಸಲಹೆ ಸೂಚನೆಗಳು ಸಾಕಷ್ಟು ಪ್ರೇರಣೆ ಉಂಟುಮಾಡಿದವು. ಮಲ್ಲಿಕಾರ್ಜುನರು ಹೈಸ್ಕೂಲ ಕಲಿಯುವಾಗ ಮತ್ತೊಮ್ಮೆ ಪ್ರಸಿದ್ಧ ನಾಟಕಗಳನ್ನು ನೋಡುವ ಸಂದರ್ಭ ಒದಗಿಬಂದಿತು. ವಿಜಾಪೂರದಲ್ಲಿ ಸುಬ್ಬಯ್ಯನಾಯ್ಡು ಅವರ ನಾಟಕ ಕಂಪನಿ ಮೊಕ್ಕಾಂ ಮಾಡಿ ಕುರುಕ್ಷೇತ್ರ,

ಬಾಣಸಿಗ ಭೀಮ, ಭಕ್ತ ಅಂಬರೀಶ ನಾಟಕಗಳನ್ನು ಪ್ರದರ್ಶಿಸಿತು. ನಾಟಕಗಳಿಗೆ ಅಗತ್ಯವಾದ ದೃಶ್ಯಗಳನ್ನು ಸೀನರಿಗಳನ್ನು ಈ ಕೆಲಸದಲ್ಲಿ ಪರಿಣಿತಿ ಪಡೆದಿದ್ದ ಕೆಂಧೂಳೆ, ಧೋತ್ರೆ ಇವರುಗಳು ನಿರ್ಮಿಸಿಕೊಡುತ್ತಿದ್ದರು. ಇವರು ರಚಿಸುತ್ತಿದ್ದ ಸೀನರಿಗಳು, ಪರದೆಗಳು, ಕಟೌಟುಗಳು, ನಕ್ಷಾವಿನ್ಯಾಸಗಳನ್ನು ನೋಡಿ ಪಾಟೀಲರು ದಂಗಾಗುತ್ತಿದ್ದರು. ಅವರ ಚಿತ್ರಕಲಾ ಮನಸ್ಸು ಅವುಗಳನ್ನು ಬಾರಿ ಬಾರಿ ನೋಡುವುದಕ್ಕಾಗಿಯೇ ಹಂಬಲಿಸುತ್ತಿತ್ತು

ನಾಟಕದ ದೃಶ್ಯಗಳನ್ನು ಕಂಡಾಗ ಪುಳಕಿತರಾಗುತ್ತಿದ್ದ ಪಾಟೀಲರು ನಾಟಕ ಮುಗಿದ ಕೂಡಲೇ ಮನೆಗೆ ಬಂದು ದೊಡ್ಡ ದೊಡ್ಡ ಗೋಡೆಗಳ ಮೇಲೆ ಇದ್ದಿಲಿನಿಂದ ದುರ್ಯೋಧನ, ಭೀಮ ಇವರ ಆಕೃತಿಗಳನ್ನು ಬರೆಯಲಾರಂಭಿಸುತ್ತಿದ್ದರು. ನಾಟಕದ ದೃಶ್ಯಗಳು ಇವರ ಮೇಲೆ ಎಂಥಾ ಮಾನಸಿಕ ಪರಿಣಾಮವನ್ನು ಬೀರುತ್ತಿದ್ದವೆಂದರೆ ದುರ್ಯೋಧನನ್ನು ದುಷ್ಟನಂತೆ ಚಿತ್ರಿಸಿ ಭೀಮನನ್ನು ಬಲಶಾಲಿಯನ್ನಾಗಿಸುತ್ತಿದ್ದರು. ಅಶ್ವತ್ಥಾಮನನ್ನು ರೌದ್ರವಾಗಿ ರಚಿಸುತ್ತಿದ್ದರು. ಚಿತ್ರಕಲೆಗೆ ಸಂಬಂಧಿಸಿದಂತೆ ಇಂಥ ಸಂಯೋಜನೆಗಳೆ ಮುಂದೆ ಅವರ ಪೌರಾಣಿಕ ಹಿನ್ನೆಲೆಯ ಚಿತ್ರಗಳಲ್ಲಿ ಹಾಗೂ ವ್ಯಕ್ತಿಚಿತ್ರ ರಚನೆಯಲ್ಲಿ ಸ್ಫೂರ್ತಿಯನ್ನೊದಗಿಸಿದವು.

೧೯೬೦ರಲ್ಲಿ ಪಾಟೀಲರು ಎಸ್.ಎಸ್.  .ಸಿ ಪರೀಕ್ಷೆಯಲ್ಲಿ ಉತ್ತೀರ್ಣರಾದರು. ಆದರೆ ಸಾಮಾನ್ಯ ಶಿಕ್ಷಣವನ್ನು ಮುಮದುವರೆಸಲು ಬಯಸದ ಇವರು ಕಲಾಶಿಕ್ಷಣದ ಕಡೆಗೆ ಆಕರ್ಷಿತರಾದರು. ಚಿತ್ರಕಲೆಯಲ್ಲಿಯೇ ಹೆಚ್ಚಿನ ವ್ಯಾಸಂಗ ಮಾಡುವ ಬಯಕೆ ವ್ಯಕ್ತಪಡಿಸಿದರು. ಮಲ್ಲಿಕಾರ್ಜುನರ ಈ ಆಸೆಗೆ ತಂದೆ ಸಂಪೂರ್ಣ ವಿರೋಧ ವ್ಯಕ್ತಪಡಿಸಿದರು. ಮನೆಯ ಹೆಚ್ಚಿನ ಸದಸ್ಯರೂ ತಂದೆಯ ಅಭಿಪ್ರಾಯಕ್ಕೆ ಧ್ವನಿಗೂಡಿಸಿದರು. ಆದರೆ ಅಣ್ಣ ಶಿವನಗೌಡರು ತಮ್ಮನ ಕಲಾ ಆಸಕ್ತಿಗೆ ಪ್ರೋತ್ಸಾಹಿಸಿದರೂ ತಂದೆಯ ಹೆದರಿಕೆ ಇವರಿಗೂ ಇತ್ತು. ಇಂತಹ ಸಂದಿಗ್ಧ ಸಂದರ್ಭದಲ್ಲಿ ಮಲ್ಲಿಕಾರ್ಜುನರು ಮುಂಬೈಗೆ ಹೊರಡಲು ತುದಿಗಾಲಲ್ಲಿ ನಿಂತಿದ್ದರು. ಇದನ್ನು ತಿಳಿದುಕೊಂಡ ಇವರ ತಂದೆ ಮತ್ತು ಅಣ್ಣ ಸಲಹೆ ಸೂಚನೆ ಕೇಳಲು ಶಾಲೆಯ ಡ್ರಾಯಿಂಗ್ ಮಾಸ್ತರ್ ವಿ. ಕೆ. ಪಾಟೀಲ್ ಅವರ ಬಳಿಗೆ ತೆರಳಿದರು.

ಚಿತ್ರಕಲಾ ಶಿಕ್ಷಕರ ಸೂಚನೆಯಂತೆ ಶ್ರೀಪತಿ ಸೋನಾರ್ ಎಂಬುವರಿಗೆ ಮಲ್ಲಿಕಾರ್ಜುನನನ್ನು ಕಳಿಸಿಕೊಡುವ ಬಗ್ಗೆ ಪತ್ರ ಬರೆದರು. ಶ್ರೀಪತಿ ಸೋನಾರ ಅಕ್ಕಸಾಲಿಗ ಕೆಲಸದಲ್ಲಿ ನಿಪುಣರಾಗಿದ್ದರು. ಅವರು ಮುಂಬೈನ ಡಿಸೈನ್ ಸೆಂಟರನಲ್ಲಿ ಉದ್ಯೋಗದಲ್ಲಿದ್ದರು. ಇವರು ವಿ. ಕೆ. ಪಾಟೀಲರಿಗೆ ಬಹಳ ಆತ್ಮೀಯರಾಗಿದ್ದರು. ವಿ. ಕೆ. ಪಾಟೀಲರ ಮಾತೆಂದರೆ ಇವರಿಗೆ ವೇದವಾಕ್ಯವೇ ಆಗಿತ್ತು. ವಿ. ಕೆ. ಪಾಟೀಲರಿಗೆ ಭೀಮನಗೌಡರ ಮನೆತನದ ಬಗ್ಗೆ

ವಿಶೇಷ ಅಭಿಮಾನವಿತ್ತು. ಇಂತಹ ಸಂದರ್ಭದಲ್ಲಿ ಶ್ರೀಪತಿ ಸೋನಾರರು ಮಲ್ಲಿಕಾರ್ಜುನರನ್ನು ಕಳಿಸಿಕೊಡಲು ಮುಂಬೈನಿಂದ ಉತ್ತರ ರೂಪವಾಗಿ ಮರುಪತ್ರ ಬರೆದರು. ಅದಕ್ಕನುಸಾರವಾಗಿ ಅಣ್ಣ ಶಿವನಗೌಡರು ಮಲ್ಲಿಕಾರ್ಜುನರನ್ನು ಕರೆದುಕೊಂಡು ಮುಂಬೈಗೆ ತೆರಳಿದರು. ಆದರೆ ಅಷ್ಟು ಹೊತ್ತಿಗಾಗಲೇ ಮುಂಬೈನ ಪ್ರಸಿದ್ಧ ಜೆ. ಜೆ. ಕಲಾಶಾಲೆಯಲ್ಲಿ ಪ್ರವೇಶ ಪ್ರಕ್ರಿಯೆ ಮುಗಿದಿತ್ತು. ಇದರಿಂದ ಪಾಟೀಲರು ನಿರಾಸೆ ಹೊಂದಿದರು. ಆದರೆ ತಿರುಗಿ ಊರಿಗೆ ಬರಲು ಅವರ ಮನಸ್ಸು ಒಪ್ಪಲಿಲ್ಲ ಮುಂಬೈ ಅಂದು ಕಲಾಕ್ಷೇತ್ರವಾಗಿತ್ತು ಹಾಗಾಗಿ ಅಲ್ಲಿಯೇ ಇರಲು ತೀರ್ಮಾನಿಸಿದರು. ಅದರಂತೆ ಅವರ ಅಣ್ಣ ಶಿವನಗೌಡರು ಕರ್ನಾಟಕದವರಾಗಿದ್ದ ದಂಡಾವತಿಮಠ ಅವರ ನೂತನ ಕಲಾಮಂದಿರ ಶಾಲೆಗೆ ಸೇರಿಸುವಲ್ಲಿ ಯಶಸ್ವಿಯಾದರು. ಜೆ. ಜೆ. ಕಲಾಶಾಲೆಯಲ್ಲಿ ಕಲಾ ಅಧ್ಯಯನ ಮಾಡಬೇಕೆಂಬ ಅವರ ಆಸೆ ಪೂರೈಸದಿದ್ದರೂ ಮುಂಬೈನಲ್ಲಿ ಕಲಾಶಿಕ್ಷಣ ಪಡೆಯಬೇಕೆಂಬ ಆಸೆ ಮಾತ್ರ ಈಡೇರಿತು.

**ಕಲಾ ವ್ಯಾಸಂಗ :**

ಒಬ್ಬ ಕಲಾವಿದ ಗಟ್ಟಿನೆಲೆಯಲ್ಲಿ ವ್ಯವಹರಿಸಬೇಕಾದರೆ ಆತನಿಗೆ ಕಲೆಯ ವ್ಯಾಕರಣ ಕಲಾ ಶಿಕ್ಷಣ ಪಡೆದುಕೊಂಡಿರುವುದು ಮಹತ್ವದ್ದಾಗಿರುತ್ತದೆ. ಇದರಿಂದಾಗಿ ಆತನ ಆತ್ಮವಿಶ್ವಾಸ ಇಮ್ಮಡಿಸುತ್ತದೆ. ಕಲಾ ಅಧ್ಯಯನದ ಹಿನ್ನೆಲೆಯಿದ್ದಾಗ ಮನಸ್ಸಿಗೆ ಹೊಸ ಹೊಸ ಆಯಾಮಗಳು ಹೊಳೆಯುತ್ತವೆ. ಎಂ. ಬಿ. ಪಾಟೀಲರು ಕಲಾ ಶಿಕ್ಷಣ ಮತ್ತು ಕಲಾ ವ್ಯಾಕರಣಗಳನ್ನು ಪ್ರಬುದ್ಧ ಕಲಾವಿದರಾದ ದಂಡಾವತಿಮಠ ಅವರಿಂದ ಪಡೆದುಕೊಳ್ಳಬೇಕಾಯಿತು. ಭಾರತೀಯ ಮತ್ತು ಪಾಶ್ಚಾತ್ಯ ಕಲಾ ಕ್ಷೇತ್ರದಲ್ಲಿ ಅಪಾರ ಅನುಭವಗಳಿಸಿದ್ದ ದಂಡಾವತಿಮಠರ ಗರಡಿಯಲ್ಲಿ ಪಳಗಿದ ಪಾಟೀಲರು ಪ್ರಬುದ್ಧ ಕಲಾವಿದರಾಗಿ ರೂಪುಗೊಂಡರು. ಪಾಟೀಲರು ನೂತನ ಕಲಾಮಂದಿರದಲ್ಲಿ ಹೆಸರು ನೊಂದಾಯಿಸಿ ಕಲಾ ಅಧ್ಯಯನಕ್ಕೆ ತೊಡಗಿದಾಗ ಕಲಾಗುರು ದಂಡಾವತಿಮಠ ಅವರು ಅದರ ಪ್ರಾಚಾರ್ಯರಾಗಿದ್ದರು.

ನೂತನ ಕಲಾಮಂದಿರದ ಮೂಲ ಸ್ಥಾಪಕರು ಡಿ. ಜಿ. ಬಡಿಗೇರ. ಇವರು ೧೯೩೧ ರಲ್ಲಿ ಲಂಡನ್‌ನ ರಾಯಲ್ ಅಕಾಡೆಮಿ ಆಫ್ ಆರ್ಟ್ ಸಂಸ್ಥೆಯಲ್ಲಿ ಉನ್ನತ ಕಲಾಶಿಕ್ಷಣ ಪಡೆದುಕೊಂಡು ಬಂದು ಈ ಕಲಾಮಂದಿರವನ್ನು ಸ್ಥಾಪಿಸಿದರು. ಆದರೆ ಬಡಿಗೇರರಿಗೆ ಸರಕಾರಿ ಕೆಲಸವು ಸಿಕ್ಕಕಾರಣ ಈ ಕಲಾ ಮಂದಿರವನ್ನು ವ್ಹಿ. ಆರ್. ರಾವ್ ಎಂಬವರಿಗೆ ವಹಿಸಿಕೊಟ್ಟರು ಆದರೆ ಅವರು ತಮ್ಮ ಕುಟುಂಬ ಸಮೇತರಾಗಿ ವಿದೇಶದಲ್ಲಿ ನೆಲೆಸುವ ವಿಚಾರ ಮಾಡಿದಾಗ ಆ ಜವಾಬ್ದಾರಿ ಕೆಲಸ ದಂಡಾವತಿಮಠರಿಗೆ ವಹಿಸಿಕೊಡಲಾಯಿತು.

ಕಲಾಗುರು ಎಂದೇ ಖ್ಯಾತರಾಗಿದ್ದ ಜಿ.ಎಸ್.ದಂಡಾವತಿಮಠರ ಸಾರಥ್ಯದಲ್ಲಿ ನೂತನ ಕಲಾಮಂದಿರ ಶಾಲೆ ಪ್ರಬುದ್ಧವಾಗಿ ಬೆಳೆಯ ತೊಡಗಿತು. ವಿದ್ಯಾರ್ಥಿಗಳ ಬಗ್ಗೆ ಪ್ರೀತಿ ಅಂತಕರಣಗಳನ್ನು ಹೊಂದಿದ ಇವರ ಬಗ್ಗೆ ಎಲ್ಲ ವಿದ್ಯಾರ್ಥಿಗಳಲ್ಲಿ ಭಕ್ತಿ ಅಭಿಮಾನಗಳು ತುಂಬಿದ್ದವು. ಅಂತಹ ಕಲಾಗುರು ಪಾಟೀಲರಿಗೆ ದೊರಕಿದ್ದು ಪೂರ್ವಜನ್ಮದ ಸುಕೃತ ಎನ್ನಬಹುದು. ನೂತನ ಕಲಾಮಂದಿರದಲ್ಲಿ ಪಾಟೀಲರ ಕಲಾ ಶಿಕ್ಷಣ ಒಳ್ಳೆಯ ರೀತಿಯಲ್ಲಿ ದಂಡಾವತಿಮಠರ ಮಾರ್ಗದರ್ಶನದಲ್ಲಿ ನಡೆಯತೊಡಗಿತು.

ದಂಡಾವತಿಮಠರು ಮೂಲತಃ ಬೆಳಗಾವಿ ಜಿಲ್ಲೆಯ ಬೈಲಹೊಂಗಲದವರು. ಚಿತ್ರಕಲೆಯನ್ನು ಕಲೆಯಲೆಂದೇ ಮುಂಬೈಗೆ ಬರುವ ಕರ್ನಾಟಕದ ವಿದ್ಯಾರ್ಥಿಗಳಿಗೆ ವಿಶೇಷ ಪ್ರೋತ್ಸಾಹ ನೀಡುತ್ತಿದ್ದರು. ಹಾಗಿದ್ದರೂ ಕಲಾಶಿಕ್ಷಣ ನೀಡುವಾಗ ಇವರು ಯಾವುದೇ ವಿದ್ಯಾರ್ಥಿಗಳಿಗೆ ಬೇದ-ಭಾವ ಮಾಡಿದವರಲ್ಲ, ಯಾವುದೇ ವಿದ್ಯಾರ್ಥಿಗಳಿಗೆ ಮನಸ್ಸು ನೋಯಿಸಿದವರಲ್ಲ. ತಮ್ಮ ವಿದ್ಯೆಯುನ್ನು ವಿದ್ಯಾರ್ಥಿಗಳಿಗೆ ಮೀಸಲಾಗಿರಿಸಿದವರು. ದಂಡಾವತಿಮಠರ ಜೊತೆಗೆ ಇನ್ನಿತರ ಕಲಾ ಶಿಕ್ಷಕರಾದ ದಯಾನಂದ ಶೆಟ್ಟಿ, ಹೆಗಡೆ, ಮಯ್ಯ ಮುಂತಾದವರು ತರಗತಿಗಳನ್ನು ತೆಗೆದುಕೊಳ್ಳುತ್ತಿದ್ದರು. ಮುಂಬೈಯಂತಹ ಪಟ್ಟಣದಲ್ಲಿ ಬಡತನವನ್ನು ಅಂಟಿಸಿಕೊಂಡು ಕಲಾ ಅಧ್ಯಯನ ಮಾಡಲು ಬಂದ ಕರ್ನಾಟಕದ ವಿದ್ಯಾರ್ಥಿಗಳಿಗೆ ತಮ್ಮಿಂದ ಸಾಧ್ಯವಾದ ಎಲ್ಲ ಅನುಕೂಲತೆಗಳನ್ನು ದಂಡಾವತಿಮಠರು ಒದಗಿಸಿ ಕೊಡುತ್ತಿದ್ದರು. ತರಗತಿಯ ಶುಲ್ಕಕ್ಕಾಗಿ ಅವರನ್ನೆಂದೂ ನೋಯಿಸುತ್ತಿರಲಿಲ್ಲ. ಈ ವಿಚಾರದಲ್ಲಿ ಅವರ ಪ್ರತಿಯೊಬ್ಬ ವಿದ್ಯಾರ್ಥಿಗಳು ಚಿರಋಣಿ. ಅಲ್ಲಿ ಕಲಿಯುತ್ತಿದ್ದ ವಿದ್ಯಾರ್ಥಿಗಳು ಸಹ ಅಷ್ಟೇ ಶ್ರದ್ಧೆಯಿಂದ ವಿದ್ಯಾಭ್ಯಾಸವನ್ನು ಮಾಡುತ್ತಿದ್ದರು. ವಿದ್ಯಾರ್ಥಿಗಳ ಅಭಿಲಾಷೆಯಂತೆ ಬೇರೆ ಬೇರೆ ಪ್ರಾಂತದ ವೇಷ ಭೂಷಣಗಳನ್ನು ರೂಪದರ್ಶಿಗಳಿಗೆ ತೊಡಿಸಿ ಭಾವಚಿತ್ರಣಕ್ಕೆ ಆಸ್ಪದ ಮಾಡಿಕೊಡುತ್ತಿದ್ದರು. ಹಾಗೆಯೇ ವಿದ್ಯಾರ್ಥಿಗಳ ಬೇರೆ ಬೇರೆ ಗುಂಪುಗಳನ್ನು ಮಾಡಿ ನಿಸರ್ಗ ಚಿತ್ರಣಕ್ಕೂ ರೇಖಾ ಚಿತ್ರಣಕ್ಕೂ ಕಳುಹಿಸುತ್ತಿದ್ದರು.

**ಪಾಟೀಲರ ಗೆಳೆಯರ ಬಳಗ :**

ನೂತನ ಕಲಾಮಂದಿರದ ವಿದ್ಯಾರ್ಥಿಯಾದ ಎಂ. ಬಿ. ಪಾಟೀಲರಿಗೆ ಆಗ ಮನೆಯಿಂದ ಬರುತ್ತಿದ್ದುದು ೧೦೦ ರೂಪಾಯಿ, ದಾದರ್‌ನಲ್ಲಿದ್ದ ವಸತಿ ಗೃಹದಲ್ಲಿ ತಿಂಗಳಿಗೆ ೭೫ ರೂಪಾಯಿ ಬಾಡಿಗೆಯಂತೆ ವಸತಿಯ ವ್ಯವಸ್ಥೆ ಮಾಡಿಕೊಂಡಿದ್ದರು. ಅಲ್ಲಿನ ವಾತಾವರಣ ಒಗ್ಗದಿದ್ದಾಗ ಮಾತುಂಗಾದ ಖಾಲ್ಸ ಕಾಲೇಜಿನ ಬಳಿ ಪಂಜಾಬಿ ಚಾಳದಲ್ಲಿ ಹಂಗಾಮಿಯಾಗಿ

ವಾಸ್ತವ್ಯ ಹೂಡಿದರು. ರಸ್ತೆಯಲ್ಲಿದ್ದ ನಲ್ಲಿಯಲ್ಲಿ ಪ್ರತಿ ಮುಂಜಾನೆ ಮಹಿಳೆಯರು ಸ್ನಾನಕ್ಕೆ ಬರುತ್ತಿದ್ದುದುಂಟು. ಪಾಟೀಲರಿಗೆ ಅಲ್ಲಿನ ಆಗುಹೋಗುಗಳು ಸರಿಹೋಗದಿದ್ದಾಗ ಶ್ರೀಪತಿ ಕಾಕಾ ಅವರ ನೆರವಿನಿಂದ ಅಂಧೇರಿ ರಸ್ತೆಯ ಏರ್‌ಫೋರ್ಸ್ ಕ್ವಾಟರ್ಸ್‌ನಲ್ಲಿರುವ ಕೋಣೆಯಲ್ಲಿ ವಾಸದ ಏರ್ಪಾಟನ್ನು ಮಾಡಿಕೊಂಡರು. ಇಲ್ಲಿಯೇ ಪಕ್ಕದಲ್ಲಿದ್ದ ಶ್ರೀಪತಿ ಕಾಕಾ ಪಾಟೀಲರನ್ನು ತಮ್ಮ ಮಗನಂತೆ ಸಲುಹಿದರು. ಸುಮಾರು ದಿನಗಳ ಕಾಲ ಅಲ್ಲಿಯೇ ಇದ್ದ ಪಾಟೀಲರು ನಂತರ ಥಿಯೇಟರ್ ಬಳಿಯ ಗ್ರ್ಯಾಂಟ್ ರಸ್ತೆಯಲ್ಲಿನ ಮಾಧವಭಾಗ್ ಎಂಬಲ್ಲಿಗೆ ತಮ್ಮ ವಸತಿಯನ್ನು ಸ್ಥಳಾಂತರಿಸಿದರು. ಹೀಗೆ ಪಾಟೀಲರು ತಮಗೆ ಹೊಂದುವ ಪರಿಸರದಲ್ಲಿ ಕೋಣೆಯನ್ನು ಬಾಡಿಗೆಗೆ ಪಡೆದುಕೊಳ್ಳುತ್ತಿದ್ದರು.

ಪಾಟೀಲರಿಗೆ ಯಾವಾಗಲೂ ಸುತ್ತಮುತ್ತ ಗೆಳೆಯರ ಗುಂಪು ಇರುತ್ತಿತ್ತು. ಇವರಲ್ಲಿ ಮಧು, ಮಹೇಶ, ತ್ರಿಪಾಠಿ, ಎಂಬವರು ಪಾಟೀಲರಿಗೆ ಆಪ್ತ ಮಿತ್ರರಾಗಿದ್ದರು. ಇವರ ಗುಂಪೆಂದರೆ ಗೆಳೆತನಕ್ಕೊಂದು ಒಳ್ಳೆಯ ಉದಾಹರಣೆಯಾಗಿತ್ತು. ವಸತಿ ನೀಡಿದ್ದ ಮಾಲಿಕನಿಗೆ ಮಕ್ಕಳಿರಲಿಲ್ಲ. ಪಾಟೀಲರ ಗುಂಪಿಗೋ ಸದಾಕಾಲವೂ ಅತಂತ್ರ ಹಣಕಾಸು ಪರಿಸ್ಥಿತಿ ಹಲವಾರು ತಾಪತ್ರಯಗಳು. ಇವರೆಲ್ಲರ ಪೈಕಿ ತ್ರಿಪಾಠಿಗೆ ಮಾತ್ರ ಬಾಡಿಗೆ ಕೊಡುವ ತಾಕತ್ತಿತ್ತೇ ಹೊರತು ಮಿಕ್ಕೆಲ್ಲರ ಕೈ ಸಾಮಾನ್ಯವಾಗಿ ಬರಿದಾಗಿರುತ್ತಿತ್ತು. ಕೋಣೆಯಲ್ಲಿ ಎಲ್ಲಿ ಸ್ಥಳವಿದೆಯೋ ಅಲ್ಲಿ ಮಲಗುತ್ತೇವೆಂಬ ಇವರ ಸಲಹೆಗೆ ಮಾಲಿಕನು ಒಪ್ಪಿದ್ದರಿಂದ ವಸತಿ ಸಮಸ್ಯೆ ಹೇಗೋ ಬಗೆಹರಿಯಿತು. ಕಾಸಿಲ್ಲದಿದ್ದಾಗ ಎಂದೂ ಸುಳ್ಳಾಡದಿದ್ದ ಈ ಗೆಳೆಯರು ಅನೇಕ ದಿನಗಳು ಕೇವಲ ನೀರನ್ನು ಕುಡಿದು ದಿನಗಳನ್ನು ಕಳೆಯುತ್ತಿದ್ದುದುಂಟು. ಈ ನಾಲ್ಕು ಜನರಲ್ಲಿ ಯಾರಿಗಾದರೂ ಮನೆಯಿಂದ ಮನಿಆರ್ಡರ ಮೂಲಕ ಹಣ ಬರಲಿ ಅದನ್ನು ಬಚ್ಚಿಡದೆ ಬಂದ ಹಣವನ್ನೆಲ್ಲ ಸಾಮೂಹಿಕವಾಗಿ ವಿನಿಯೋಗಿಸುತ್ತಿದ್ದರು. ಇವರ ಮಧ್ಯೆ ಎಂದೂ ಬೇಧಭಾವ ಸುಳಿಯಲೇ ಇಲ್ಲ. ಆಗ ನಾಲ್ಕು ಆಣೆಗೆ ಒಂದು ಬನ್, ಬಟಾಣಿ, ಉಸಳಿ, ಪಾವಭಾಜಿ ಸಿಗುತ್ತಿತ್ತು. ಈ ತಿಂಡಿಗಳು ಇವರ ಹಸಿವನ್ನು ತಣಿಸುತ್ತಿದ್ದವು.

ಒಂದು ಸಂದರ್ಭದಲ್ಲಿ ಪಾಟೀಲರು ಮತ್ತು ಅವರ ಗೆಳೆಯರ ಹತ್ತಿರ ಇರುವ ಹಣವೆಲ್ಲ ಖಾಲಿಯಾದವು. ಯಾರಿಗೂ ಮನಿಆರ್ಡರ ಹಣ ಬೇಗಬರಲಿಲ್ಲ. ಎಲ್ಲರೂ ಬೆಳಗಿನಿಂದ ಉಪವಾಸ ಕುಳಿತಿದ್ದರು. ಈ ಸಂದರ್ಭದಲ್ಲಿ ಯಾವುದೋ ವಸ್ತುವಿಗಾಗಿ ಪಾಟೀಲರು ತಮ್ಮ ಕಬ್ಬಿಣದ ಪೆಟ್ಟಿಗೆಯನ್ನು ತೆಗೆದರು. ಅದರಲ್ಲಿ ಆಕಸ್ಮಿಕವಾಗಿ ಪಾಟೀಲರ ಅಜ್ಜಿ ಕೊಟ್ಟ ಬಟ್ಟೆಯ ಗಂಟು ಸಿಕ್ಕಿತು. ಮುಂಬೈಗೆ ಬರುತ್ತಿದ್ದ ಪಾಟೀಲರಿಗೆ ಅಜ್ಜಿಯು ಈ ಬಟ್ಟೆಯ ಗಂಟನ್ನು ಕಟ್ಟಿ

ಪೆಟ್ಟಿಗೆಯಲ್ಲಿ ಇಟ್ಟಿದ್ದಳು. ಆದರೆ ಪಾಟೀಲರು ಅಜ್ಜಿಯ ಗಂಟೆಂದು ಅದರ ಬಗ್ಗೆ ಅಷ್ಟು ಗಮನಕೊಟ್ಟಿರಲಿಲ್ಲ. ಆದರೆ ಇವತ್ತು ಅದರಲ್ಲಿ ಏನಿರಬಹುದು ಎಂದು ಕುತೂಹಲದಿಂದ ಬಟ್ಟೆಯ ಗಂಟನ್ನು ಬಿಚ್ಚಿದರು. ಪಾಟೀಲರಿಗೆ ಆಶ್ಚರ್ಯಕಾದಿತ್ತು. ಅದರಲ್ಲಿ ಅವರ ಅಜ್ಜಿ ಕೂಡಿಟ್ಟ ೨೦೦ ರುಪಾಯಿ ಚಿಲ್ಲರೆಯ ದುಡ್ಡು ಇತ್ತು. ಬೆಳಗಿನಿಂದ ಹಸಿದ ಹೊಟ್ಟೆಯು ಅದನ್ನು ನೋಡಿದ ತಕ್ಷಣ ತುಂಬಿದಂತಾಯಿತು. ಆ ದುಡ್ಡನ್ನು ತೆಗೆದುಕೊಂಡು ಸಂತೋಷದಿಂದ ತಮ್ಮ ಗೆಳೆಯನನ್ನು ಕರೆದುಕೊಂಡು ಮಾರುಕಟ್ಟೆಗೆ ಹೋದರು.

ಮಾರುಕಟ್ಟೆಯಿಂದ ಅಡಿಗೆ ಮಾಡುವುದಕ್ಕೆ ಬೇಕಾಗುವ ಸಾಮಗ್ರಿಗಳನ್ನು ತಂದರು. ಆದರೆ ಅವರಲ್ಲಿ ಯಾರಿಗೂ ಅಡಿಗೆ ಮಾಡಲು ಬರುತ್ತಿರಲಿಲ್ಲ. ಆದರೂ ಕಷ್ಟಪಟ್ಟು ಆಲುಗಡ್ಡೆಯಿಂದ ಭಾಜಿ ಮಾಡಿದರು. ಮತ್ತು ಒಂದು ಕೆ.ಜಿ. ಗೋದಿಹಿಟ್ಟನ್ನು ತಂದು ನೀರಿನಲ್ಲಿ ಮೀಶ್ರಣಮಾಡಿ ಚಪಾತಿ ಮಾಡತೊಡಗಿದರು. ಆದರೆ ಹಿಟ್ಟು ಕಲಸುವುದು ಸರಿಯಾಗಿರದ ಕಾರಣ ಚಪಾತಿ ಮಾಡಲು ಇವರಿಗೆ ಬರಲಿಲ್ಲ. ಆಗ ಅವರ ಮನೆಯ ಮಾಲಿಕನ ಮಗಳು ಬಂದು ಇವರು ಮಾಡಿರುವ ಚಪಾತಿ ನೋಡಿ ಪೇಚಾಡಿದಳು. ಪಾಟೀಲರನ್ನು ಮತ್ತು ಗೆಳೆಯನನ್ನು ಸಹೋದರಿಯೆಂಬ ವಾತ್ಸಲ್ಯದಿಂದ ಬೆದರಿಸಿದಳು. ಅಲ್ಲದೆ ಅವರು ಕಲಸಿದ ಹಿಟ್ಟನ್ನು ಹದವಾಗಿ ಮಾಡಿಕೊಂಡು ಅದರಿಂದ ಉತ್ತಮವಾಗಿರುವ ೪೦ ಚಪಾತಿಯನ್ನು ಮಾಡಿಕೊಟ್ಟಳು. ಕೇವಲ ಇಬ್ಬರಿಗೆ ೪೦ ಚಪಾತಿಗಳು ಹೆಚ್ಚಾಗಿದ್ದವು. ಅವುಗಳನ್ನು ಒಣಗಿಸಿಟ್ಟುಕೊಂಡು ದಿನಾಲು ಹೋಟೇಲ್‌ನಿಂದ ಸಾಂಬರ ತಂದು ಊಟಮಾಡುತ್ತಿದ್ದರು. ಮನೆಯಿಂದ ಹಣ ಬರುವವರೆಗೆ ಈ ರೀತಿಯಾಗಿ ಕಷ್ಟವನ್ನು ಅನುಭವಿಸುತ್ತಿದ್ದೆವು ಎಂದು ಪಾಟೀಲರು ಇಂದಿಗೂ ನೆನಪಿಸಿ ಕೊಳ್ಳುತ್ತಾರೆ.

ಗ್ರ್ಯಾಂಟ್ ರಸ್ತೆಯಲ್ಲಿನ ವಾಸ್ತವ್ಯದ ಸಂದರ್ಭದಲ್ಲಿ ಪಾಟೀಲರ ಗುಂಪಿಗೆ ಪರಿಚಯವಾದವನು ರಬಕವಿಯ ಹುಡುಗ, ಕನ್ನಡ ಮಾತನಾಡುವ. ಅವನು ವ್ಯಾಪಾರದ ಸಂಬಂಧದಲ್ಲೂ ಇವರೊಂದಿಗೆ ತಿಂಗಳಾನುಗಟ್ಟಲೇ ಇರುತ್ತಿದ್ದವನು. ಒಮ್ಮೆ ಇದ್ದಕ್ಕಿದ್ದಂತೆ ಮಾಯವಾಗಿಬಿಟ್ಟ. ಇವರೆಲ್ಲರು ರೂಮಿನಿಂದ ಸ್ವಲ್ಪ ದೂರದಲ್ಲಿದ್ದ ಹೋಟೆಲಿಂದ ತಿಂಗಳಿಗೆ ೨೨ ರೂಪಾಯಿಕೊಟ್ಟು ದಿನಕ್ಕೆ ಎರಡು ಬಾರಿ 'ರೈಸ್ ಪ್ಲೇಟ್' ತರಿಸಿಕೊಳ್ಳುತ್ತಿದ್ದರು.

ರಬಕವಿಯ ಹುಡುಗನಿಗೆ ಕೈಯಲ್ಲಿ ಕಾಸಿಲ್ಲದೆ ಹೋದಾಗ ಅವನಿಗೆ ಕಾಸಿಲ್ಲದೇ ಊಟ ಮಾಡುವುದು ಸರಿಕಾಣಲಿಲ್ಲ. ಹಾಗಾಗಿ ಆತ ಈ ಗೆಳೆಯರನ್ನು ಬಿಟ್ಟು ಹೋಗಿದ್ದನು. ಹಣವಿಲ್ಲದೆ ಊಟ ಹಂಚಿಕೊಳ್ಳುವುದು ಹೀನಾಯವೆನ್ನಿಸಿ ಇವರಿಂದ ದೂರವಾಗಿ ಹೋಟೆಲನಲ್ಲಿ

ಉದ್ಯೋಗ ಹಿಡಿದಿದ್ದ. ಒಮ್ಮೆ ಮಹೇಶ ತ್ರಿಪಾಠಿಗೆ ಬಿಡಿ ಜಾಹೀರಾತಿನ ವಿನ್ಯಾಸವೊಂದಕ್ಕಾಗಿ ೭೫ ರೂಪಾಯಿ ಸಂಭಾವನೆ ದೊರೆಕಿತು. ಪಾಟೀಲರು ಮತ್ತು ತ್ರಿಪಾಠಿ ಸಂತೋಷದಿಂದ ಹೋಟೆಲಿಗೆ ಊಟಕ್ಕಾಗಿ ತೆರಳಿದರು. ಆ ಹೊಟೇಲಿನಲ್ಲಿ ಇವರಿಗೆ ಊಟ ತಂದವನು ಅಲ್ಲಿ ಕೆಲಸಕ್ಕಿದ್ದ ರಬಕವಿಯ ಹುಡುಗಇದನ್ನು ನೋಡಿ ಗೆಳೆಯರ ಕಣ್ಣಲ್ಲಿ ನೀರಾಡಿತು. ರಬಕವಿ ಹುಡಗನ ಸ್ವಾಭಿಮಾನ ಕಂಡು ಇವರಲ್ಲಿ ಆತನ ಬಗ್ಗೆ ಪ್ರಶಂಸೆ ಉಂಟಾಯಿತು. ಇಂತಹ ಒಂದು ಗುಂಪು ಇವರದಾಗಿತ್ತು. ಇವರೆಲ್ಲರು ಕೇವಲ ಗೆಳೆಯರೆಂದು ಭಾವಿಸದೇ ಸಹೋದರರಂತೆ ಪ್ರತಿಯೊಬ್ಬರ ಸಮಸ್ಯೆಯಲ್ಲಿ ಒಬ್ಬರನ್ನೊಬ್ಬರು ಅರ್ಥಮಾಡಿಕೊಂಡು ಭಾಗಿಯಾಗುತ್ತಿದ್ದರು. ಯಾವತ್ತೂ ಮನಸ್ಸಿನಲ್ಲಿ ಒಬ್ಬರನ್ನೊಬ್ಬರು ಆಡಿಕೊಳ್ಳುವುದು ಇವರಲ್ಲಿ ಇರಲಿಲ್ಲ. ಗೆಳೆಯರು ಸೋದರರಾಗಬಹುದೇ ಹೊರತು, ಸೋದರರು ಗೆಳೆಯರಾಗಲಾರರು ಎನ್ನುವ ಮಾತನ್ನು ಪಾಟೀಲರ ಗೆಳೆಯರ ಗುಂಪು ನಿಜಮಾಡಿತ್ತು.

ಮುಂಬೈನಲಿ ಕಲಿಯವಾಗಲೇ ಪಾಟೀಲರು ಗೆಳೆಯರೊಂದಿಗೆ ಕೈಗೊಳ್ಳುತ್ತಿದ್ದ ಚಟುವಟಿಕೆಗಳೆಲ್ಲವೂ ಚಿತ್ರಕಲೆ ಅಥವಾ ಸಾಂಸ್ಕೃತಿಕ ಸೃಜನಶೀಲತೆಗೆ ಸಂಬಂಧಿಸಿದವು ಗಳಾಗಿರುತ್ತಿದ್ದವು. ಇವರ ಇನ್ನೊಂದು ಮುಖ್ಯ ಆಕರ್ಷಣೆಯ ಸ್ಥಳವೆಂದರೆ ಪೋಟೋ ಸ್ಟುಡಿಯೋ ಪಾಟೀಲರು ಅಲ್ಲಿ ಹೆಚ್ಚಿನ ಸಮಯ ಕಳೆಯುತ್ತಿದ್ದರು. ಕೆಲವು ಸಲ ಕಲಾತ್ಮಕ ಛಾಯಾಚಿತ್ರಣದಲ್ಲಿ ತೊಡಗುತ್ತಿದ್ದರು. ಪಾಟೀಲರ ಹೆಚ್ಚಿನ ಸೃಜನಶೀಲ ಚಟುವಟಿಕೆಗಳನ್ನು ಕಾರ್ಯರೂಪಕ್ಕೆ ಇಳಿಸಲು ಅವರಿಗೆ ಅಡ್ಡ ಬರುತ್ತಿದ್ದುದೆಂದರೆ ಹಣಕಾಸಿನ ಕೊರತೆಯಾಗಿತ್ತು. ದಂಡಾವತಿಮಠರ ನೂತನ ಕಲಾಮಂದಿರದಲ್ಲಿ ಮೊದಲ ವರ್ಷದ ಶಿಕ್ಷಣವನ್ನು ಪಡೆಯುತ್ತಿದ್ದಾಗ ಚಿತ್ರಕಲೆಗೆ ಅಗತ್ಯವಾದ ಬಣ್ಣ, ಕಾಗದ, ಡ್ರಾಯಿಂಗ್ ಬೋರ್ಡ್, ಮೊದಲಾದ ಸಾಮಗ್ರಿಗಳನ್ನು ಕೊಳ್ಳಲು ೨೦೦ ರೂಪಾಯಿ ಬೇಕಾಗಿದ್ದರಿಂದ ಅಣ್ಣನಿಗೆ ಪತ್ರ ಬರೆದಿದ್ದರು. ಪಾಟೀಲರ ಅಣ್ಣನೆ ಇವರ ಆಗುಹೋಗುಗಳನ್ನು ನೋಡಿಕೊಳ್ಳುತ್ತಿದ್ದನೆ ಹೊರತು ಇವರ ತಂದೆ ಭೀಮನಗೌಡರಿಗೆ ಪಾಟೀಲರ ಕಲಾಶಿಕ್ಷಣದ ಬಗ್ಗೆ ಆಸಕ್ತಿಯೇ ಇರಲಿಲ್ಲ. ಪಾಟೀಲರು ಆಯ್ದುಕೊಂಡ ಹಾದಿಯು ಅವರಲ್ಲಿ ಅಸಮಾದಾನ ಉಂಟು ಮಾಡಿತ್ತು. ಆದ್ದರಿಂದ ಪಾಟೀಲರು ತಮ್ಮ ಕುಂದುಕೊರತೆಗಳಿಗಾಗಿ ಅಣ್ಣನಾದ ಶಿವನಗೌಡನಿಗೆ ಪತ್ರವನ್ನು ಬರೆಯುತ್ತಿದ್ದರು.

ನೂತನ ಕಲಾಮಂದಿರದ ವಿದ್ಯಾರ್ಥಿಯೊಬ್ಬನಿಗೆ ಪ್ರತಿ ದಿನವೂ ಅರ್ಧ ಇಂಪೀರಿಯಲ್ ಅಳತೆಯ ಡ್ರಾಯಿಂಗ್ ಹಾಳೆ ಅಭ್ಯಾಸಕ್ಕೆ ಅಗತ್ಯವಾಗಿತ್ತು. ಆದರೆ ಪಾಟೀಲರಿಗೆ ಚಿತ್ರಕಲೆಯಲ್ಲಿ ತುಂಬಾ ಆಸಕ್ತಿ ಇದ್ದುದರಿಂದ ಹೆಚ್ಚಿನ ಚಿತ್ರಣ ಮಾಡುತ್ತಿದ್ದರು. ಅದಕ್ಕಾಗಿ

ಇವರಿಗೆ ಹೆಚ್ಚಿನ ಡ್ರಾಯಿಂಗ್ ಕಾಗದದ ಅವಶ್ಯಕತೆ ಉಂಟಾಗುತ್ತಿತ್ತು. ಆದರೆ ಹಣಕಾಸಿನ ಕೊರತೆ ಇದ್ದುದರಿಂದ ಡ್ರಾಯಿಂಗ್ ಕಾಗದಕೊಳ್ಳಲಾಗದೇ ಅವರು ಸಾಕಷ್ಟು ರೇಖಾಚಿತ್ರಗಳನ್ನು ನೋಟ್‌ಬುಕ್‌ನಲ್ಲಿಯೇ ಮಾಡುತ್ತಿದ್ದರು. ಪಾಟೀಲರು ಅಣ್ಣನಿಗೆ ಪತ್ರ ಬರೆದರೂ ಹಣ ಬರುವುದು ಬಹಳ ತಡವಾಗುತ್ತಿತ್ತು. ಒಮ್ಮೆ ಮುಂಬೈನ ಪ್ರಸಿದ್ಧ ಜೆ. ಜೆ. ಸ್ಕೂಲ್ ಆಫ್ ಆರ್ಟ್‌ನಲ್ಲಿ ಪರೀಕ್ಷೆ ನಡೆಯುತ್ತಿತ್ತು ಪರೀಕ್ಷಾ ಕೇಂದ್ರಕ್ಕೆ ಟ್ಯಾಕ್ಸಿಮಾಡಿಕೊಂಡು ಹೋಗಲು ಕೈಯಲ್ಲಿ ಹಣವಿರಲಿಲ್ಲ. ಅಪೇರಾ ಹೌಸ್‌ನ ಬಳಿ ಇವರು ಪೆಚ್ಚು ಮೋರೆ ಹಾಕಿಕೊಂಡು ನಿಂತಿದ್ದರು.

ಇವರ ಶಾಲೆಯಲ್ಲಿ ಅಭ್ಯಾಸ ಮಾಡುತ್ತಿದ್ದ ಗುಜರಾತ ಸೋದರಿಯರಲ್ಲಿ ಒಬ್ಬಳು ಮೂಕ ಹುಡುಗಿ ಇವರನ್ನು ಕಂಡು, ಸನ್ನೆ ಮಾಡಿ, ತನ್ನ ಕಾರಿನಲ್ಲಿ ಕೂಡಿಸಿಕೊಂಡು ಪರೀಕ್ಷಾ ಕೇಂದ್ರಕ್ಕೆ ಕರೆದೊಯ್ದಳು. ಮರುದಿನ ವ್ಯಕ್ತಿ ಚಿತ್ರಣ ಪರೀಕ್ಷೆ ಇತ್ತು. ಪಾಟೀಲರು ಈಗಿನಂತೆ ಆಗಲೂ ವ್ಯಕ್ತಿ ಚಿತ್ರಣದಲ್ಲಿ ತುಂಬಾ ಆಸಕ್ತಿ ಉಳ್ಳವರಾಗಿದ್ದರು. ಆದರೂ ವ್ಯಕ್ತಿಚಿತ್ರಣದಲ್ಲಿ ಗಮನ ಹರಿಸಲಾಗಲಿಲ್ಲ. ಕಾರಣ ಮುಂಜಾನೆಯಿಂದ ಒಂದು ಚಹಾ ಸಹಿತ ಕುಡಿಯದೆ ಏನನ್ನೂ ತಿನ್ನದೇ ಬರೀ ಹೊಟ್ಟೆಯಿಂದ ಬಂದಿದ್ದರು. ಕೈಯಲ್ಲಿ ಹಣವಿರಲಿಲ್ಲ ಹೊಟ್ಟೆ ತುಂಬಾನೆ ಹಸಿದಿತ್ತು. ಎಷ್ಟು ದಿನ ಗೆಳೆಯರ ಹಣದಲ್ಲಿ ಊಟ ಮಾಡುವುದು ಎಂದು ಅವರಲ್ಲಿ ಸಂಕೋಚ ಪ್ರವೃತ್ತಿ ಉಂಟಾಗಿತ್ತು.

ಪರೀಕ್ಷಾ ಕೊಠಡಿಯಿಂದ ೧೫-೨೦ ನಿಮಿಷ ಮುಂಚಿತವಾಗಿಯೇ ಹೊರಬಂದರೆ ಹಸಿದಿದ್ದ ಹೊಟ್ಟೆ ಬೆಂಕಿಯಂತೆ ಸುಡುತ್ತಿತ್ತು. ಪಾಟೀಲರು ಬೆಂಚೊಂದರ ಮೇಲೆ ಕೂತು ಗಂಟೆಗಟ್ಟಲೆ ಅಳುತ್ತಿದ್ದರು. ಇವರ ಗೆಳೆಯರೆಲ್ಲ ಅಷ್ಟು ಹೊತ್ತಿಗಾಗಲೇ ಇವರಿಗಾಗಿ ಹುಡುಕಾಡಿದ್ದರು. ಆದರೆ ಪಾಟೀಲರು ಅವರ ಕಣ್ಣಿಗೆ ಬೀಳುವುದನ್ನು ತಪ್ಪಿಸಿಕೊಂಡು ಒಂಟಿಯಾಗಿ ಕೂತು ತಮ್ಮ ಸ್ಥಿತಿಗಾಗಿ ತಾವೇ ಮರುಕ ಪಡುತ್ತಿದ್ದರು. ಈ ರೀತಿಯಾದಂತಹ ಸ್ವಾಭಿಮಾನ ಪಾಟೀಲರಿಗೆ ಚಿಕ್ಕವರಿರುವಾಗಲೇ ಬೆಳೆದುಬಂದಿತ್ತು. ಯಾವತ್ತೂ ಅವರು ಜನರಿಗೆ ತಮ್ಮಿಂದ ಬೇಜಾರು ಮಾಡುವವರಲ್ಲ ತಮ್ಮ ನೋವನ್ನು ತಾವೇ ಅನುಭವಿಸುತ್ತಿದ್ದರೇ ಹೊರತು ಬೇರೆಯವರಿಗೆ ತೊಂದರೆಯಾಗದಂತೆ ಇರುತ್ತಿದ್ದರು. ಇಂದಿಗೂ ಅದೇ ಪ್ರವೃತ್ತಿ ಅವರಲ್ಲಿದೆ.

ಪಾಟೀಲರು ಅಳುತ್ತಾ ಕೂತಿದ್ದ ಸ್ಥಳದಲ್ಲಿ ಲೀಲಾ ಷಾ ಎಂಬ ಇವರ ಸಹಪಾಠಿ ಹುಡುಗಿ ಬಂದಳು ಮಹಾತೀಕ್ಷ್ಣ ಸ್ವಭಾವದ ಹುಡುಗಿ. ಮಧ್ಯಾಹ್ನದ ಪರೀಕ್ಷೆ ಸಮಯ ಸಮೀಪಿಸುತ್ತಿದ್ದಾಗ ಮರದ ಕೆಳಗೆ ಕೂತಿದ್ದ ಪಾಟೀಲರನ್ನು ನೋಡಿ ಅವರಲ್ಲಿಗೆ ಧಾವಿಸಿದಳು. ನಿನ್ನ ಮುಖ ನೋಡಿದರೆ ನೀನು ಊಟ ಮಾಡಿರುವ ಹಾಗಿಲ್ಲ ಎಂದು ಹೇಳಿ ಪರೀಕ್ಷಾ

ಕೋಣೆಗೆ ಇವರನ್ನು ಕರದೊಯ್ದು ಮೇಲ್ವಿಚಾರಕರಿಗೆ ಸ್ವಲ್ಪ ತಡವಾಗಿ ಬರಲು ಅನುಮತಿ ಪಡೆದು ಇವರನ್ನು ಹೋಟೆಲಿಗೆ ಕರೆದೊಯ್ದಳು. ಅಲ್ಲಿ ಊಟವಾದ ನಂತರ ನೂರರ ನೋಟನ್ನು ಹೊರತೆಗೆದು ಪಾಟೀಲರ ಕೈಯಲ್ಲಿ ಇಟ್ಟಳು. ನೋಡಿ ಪಾಟೀಲ ಸ್ವಾಭಿಮಾನ ನಿಮ್ಮನ್ನು ಕಾಡಬಹುದು. ನೀನು ಈ ಹಣವನ್ನು ಸಾಧ್ಯವಾದಾಗ ಕೊಡು ಎಂದಳು. ಗಂಡು ಹೆಣ್ಣು ಎಂಬ ಭೇದ ಭಾವವೇ ಇರದಿದ್ದ ಮುಕ್ತ ತಾವಾವರಣ ಅದಾಗಿತ್ತು. ಅಂತಹ ಕಲಾ ಶಾಲೆಯಲ್ಲಿ ವ್ಯಾಸಂಗ ಮಾಡಿದ್ದರಿಂದಲೇ ಪಾಟೀಲರಿಗೆ ಉದಾರ ದೃಷ್ಟಿಯನ್ನು ಬೆಳೆಸಿಕೊಳ್ಳುವುದು ಸಾಧ್ಯವಾಯಿತು. ವ್ಯಕ್ತಿತ್ವವನ್ನು ಕಾಯ್ದುಕೊಳ್ಳಬೇಕಾದಾಗ ಅನೇಕ ಸೂಕ್ಷ್ಮಗಳು ಪಾಟೀಲರ ಮನಸ್ಸಿನಲ್ಲಿ ಬೆಳೆದಿದ್ದವು. ಇವರ ಮನಃಸ್ಥೈರ್ಯವನ್ನು ಪರೀಕ್ಷಿಸುವಂತ ಅನೇಕ ಸಂದರ್ಭಗಳು ಮುಂಬೈನಲ್ಲಿ ನಡೆದವು. ಅದರೆ ಪಾಟೀಲರ ಸಹಪಾಠಿಗಳು ಮತ್ತು ಗೆಳೆಯರ ಗುಂಪು ಇವರನ್ನು ಕೈಬಿಡಲಿಲ್ಲ.

ಪಾಟೀಲರಿಗೆ ಹೆಚ್ಚಿನ ಪ್ರಮಾಣದ ಬಣ್ಣ ಕಾಗದಗಳನ್ನು ಕೊಳ್ಳಲು ಹಣಕಾಸಿನ ತೊಂದರೆ ಇತ್ತು. ಆದರೆ ಚಿತ್ರಿಸದೇ ಇರಲು ಅವರ ಮನಸ್ಸು ಒಪ್ಪುತ್ತಿರಲಿಲ್ಲ. ಇವರ ತರಗತಿಯಲ್ಲಿ ಒಬ್ಬ ಶ್ರೀಮಂತ ಹುಡುಗಿ ಇದ್ದಳು. ಅವಳ ಹತ್ತಿರ ಹೆಚ್ಚಿನ ಸಾಮಗ್ರಿ ಸದಾ ಇರುತ್ತಿತ್ತು. ಡ್ರಾಯಿಂಗ್ ಶೀಟ್‌ಗಳು ಹೊಸ ಹೊಸ ವಿಲ್ಸನ್ ಆ್ಯಂಡ ನ್ಯೂಟನ್ ಕಲರ್ ಟ್ಯೂಬ್‌ಗಳು,ಪೆನ್ಸಿಲಗಳು, ಚಾರಕೋಲ್ ಗಳೆಲ್ಲವುಗಳನ್ನು ಆಕೆ ಇವರೊಂದಿಗೆ ಹಂಚಿಕೊಳ್ಳುತ್ತಿದ್ದಳು.

ಜೆ. ಜೆ. ಸ್ಕೂಲ್ ಆಫ್ ಆರ್ಟ್‌ನಲ್ಲಿ ಪರೀಕ್ಷೆಗೆ ಹಾಜರಾಗಬೇಕಾಗಿದ್ದ ಎರಡನೆ ಅವಧಿಯಲ್ಲಿಯೂ ಪಾಟೀಲರಿಗೆ ಊರಿನಿಂದ ಹಣ ಬಂದಿರಲೇ ಇಲ್ಲ. ಜೆ. ಜೆ. ಶಾಲೆಯ ಬಳಿಯೇ ಇದ್ದ. ಲಕ್ಷ್ಮಿ ಹೊಟೇಲ್‌ಗೆ ಜಯಂತಿಬಾಯ್ ಎಂಬ ಕಮೀಷನ್ ಏಜಂಟ ಪ್ರತಿದಿನವೂ ಮಧ್ಯಾಹ್ನ ೧ ಗಂಟೆಗ ತಪ್ಪದೆ ಬರುತ್ತಿದ್ದ. ಪಾಟೀಲರು ಕಮೀಷನ ಏಜಂಟ ಜಯಂತಿಬಾಯ್ ಎಂಬವನಿಗೆ ತಮ್ಮಲ್ಲಿದ್ದ ಅವರ ಅಣ್ಣ ನೀಡಿದ್ದ ಚಿನ್ನದ ಉಂಗುರವನ್ನು ಒತ್ತೆ ಇಡಲು ಹೋದರು. ಪಾಟೀಲರು ಆ ಕಮಿಷನ್ ಏಜೆಂಟನ ಬಳಿ ಹೋಗಿ ಸಂಕೋಚದಿಂದ ನೀವು ಈ ಉಂಗುರವನ್ನು ನಿಮ್ಮ ಬಳಿ ಇಟ್ಟುಕೊಂಡಿರಿ, ಮನೆಯಿಂದ ಹಣ ಬಂದನಂತರ ಅದನ್ನು ಕೊಟ್ಟು ಮರಳಿ ಉಂಗುರ ಪಡೆದುಕೊಳ್ಳುತ್ತೇನೆ.

ಹಣ ಬರುವವರೆಗೂ ನಾನು ನಿಮ್ಮ ಹೆಸರಿನಲ್ಲಿ ಊಟ ಮಾಡುತ್ತೇನೆ ಎಂದು ಕೇಳಿದರು. ಆ ಕಮಿಷನ್ ಏಜಂಟ್‌ನಿಗೆ ಇವರ ಮಾತು ಕೇಳಿ ಕನಿಕರ ಉಂಟಾಯಿತು. ನಿನ್ನ ಉಂಗುರ ನೀನೇ ಇಟ್ಟುಕೋ. ನಾನು ನಿನಗೆ ಊಟದ ವ್ಯವಸ್ಥೆ ಮಾಡುತ್ತೇನೆ. ಎಂದು

ಹೇಳಿದನು. ಮಾತ್ರವಲ್ಲ ತಕ್ಷಣವೇ ಹೋಟೇಲ್ ಮಾಲಿಕನ ಬಳಿಗೆ ಇವರನ್ನು ಕರೆದೊಯ್ದು 'ಈ ಹುಡುಗನಿಗೆ ನನ್ನ ಲೆಕ್ಕದಲ್ಲಿ ಅವನು ಯಾವಾಗಲೇ ಬರಲಿ ಊಟದ ವ್ಯವಸ್ಥೆ ಮಾಡಿಕೊಡಿರಿ ಎಂದು ತಿಳಿಸಿದನು. ಇದೆಲ್ಲವೂ ಪಾಟೀಲರ ಮುಗ್ಧತೆಗೆ ಸಾಕ್ಷಿಯಾಗಿದೆ. ಪರೀಕ್ಷೆಯ ಮೂರನೇ ದಿನದ ಹೊತ್ತಿಗೆ ಪಾಟೀಲರಿಗೆ ಮನೆಯಿಂದ ೨೦೦ ರೂಪಾಯಿ ಮನಿಆರ್ಡರ್ ಬಂದಿತ್ತು. ಪಾಟೀಲರ ತಂದೆಗೆ ತಿಳಿಸದೆಯೇ ಇವರ ಅಣ್ಣ ಶಿವನಗೌಡರು ಬೆಲ್ಲದ ಲಾರಿಯಿಂದ ಬಂದ ಕಮಿಷನ್‌ನಲ್ಲಿ ಇವರಿಗೆ ಹಣ ಕಳಿಸಿದ್ದನು. ಇದನ್ನು ಯೋಗ್ಯವಾಗಿ ಬಳಸಿಕೋ ಎಂದು ತಿಳಿಸಿದ್ದನು.

ಎಂ. ಬಿ. ಪಾಟೀಲರು ಏನೇ ಕಲಾ ಸಾಮರ್ಥ್ಯವನ್ನು ತೋರಿದ್ದರೂ ಅವರ ತಂದೆಗೆ ಮಾತ್ರ ಮಗ ಆಯ್ದುಕೊಂಡ ಕ್ಷೇತ್ರದ ಬಗ್ಗೆ ಅಸಮಾಧಾನ ಕಾಡುತ್ತಲೇ ಇತ್ತು. ಪಾಟೀಲರ ಆತ್ಮೀಯ ಗೆಳೆಯ, ಸಾಹಿತ್ಯಪ್ರೇಮಿ ದಾನಪ್ಪ ಜತ್ತಿಯ ವಚನ ಸಂಕಲನವನ್ನು ಬಂಥನಾಳ ಶಿವಯೋಗಿಗಳು ಬಿಡುಗಡೆ ಮಾಡಿದ ಸಂದರ್ಭದಲ್ಲಿ ಊರಿನಲ್ಲಿ ಸಮಾರಂಭ ಏರ್ಪಟ್ಟಾಗ ಪಾಟೀಲರು ಮುಂಬೈನಿಂದ ಅಲ್ಲಿಗೆ ತೆರಳಿದ್ದರು. ದಾನಪ್ಪ ಜತ್ತಿಯ ತಂದೆಯವರು ಪಾಟೀಲರ ತಂದೆಯ ನಿಕಟವರ್ತಿಗಳು. ಸಮಾರಂಭ ಮುಗಿದ ನಂತರ ಪಾಟೀಲರು ಮನೆಯಲ್ಲಿ ಎಲ್ಲರ ಜೊತೆಗೆ ಊಟಕ್ಕೆ ಕೂಳಿತಿದ್ದರು. ಅತ್ತಿಗೆಯರೆಲ್ಲ ಊಟಕ್ಕೆ ಬಡಿಸುತ್ತಿದ್ದರು.

ಮಾತಿನ ಮಧ್ಯೆ ಸಹಜವಾಗಿಯೇ ತಂದೆ ಸಮಾರಂಭದ ವಿಷಯ ಪ್ರಸ್ತಾಪಿಸಿದರು. ಅಸಮಾಧಾನದ ಛಾಯೆಯನ್ನು ಹೊತ್ತ ಪಾಟೀಲರ ತಂದೆ ಯಾವುದೇ ರೀತಿಯ ಆರ್ಥಿಕ ಲಾಭವನ್ನು ತರದ ಸಾಹಿತ್ಯ ಕಲೆಗಳ ಬಗ್ಗೆ ತಾತ್ಸಾರದ ಮಾತುಗಳನ್ನು ಆಡತೊಡಗಿದರು. ದಾನಪ್ಪ ಜತ್ತಿ ಒಂದು ವಚನ ಸಂಕಲನ ಮಾಡ್ದ. ಅದಕ್ಕೆ ಮೂರು ಕಾಸಿನ ಬೆಲೆಯಿಲ್ಲ. ಇನ್ನು ಇವನು ನನ್ನ ಮಗ ಮಲ್ಲಿಕಾರ್ಜುನ ಚಿತ್ರ ಬರೆದು ಭಿಕ್ಷೆ ಬೇಡಬೇಕು. ಇವರೆಲ್ಲ ಜೀವನವನ್ನು ಯಾವರಿತಿಯಲ್ಲಿ ನಿಭಾಯಿಸುವರೋ ಗೊತ್ತಾಗುತ್ತಿಲ್ಲ ಅಂತ ಕಿರುಚಾಡಿದರು. ಇದನ್ನು ಕೇಳಿದ ಪಾಟೀಲರ ಕೋಪ ನೆತ್ತಿಗೇರಿತು. ಇದನ್ನು ಹೇಳಿದ್ದು ತಂದೆಯಾಗಿದ್ದರೂ ಸಹಿತ ಪಾಟೀಲರು ಕೈಲಿ ಹಿಡಿದಿದ್ದ ಅನ್ನದ ತುತ್ತನ್ನು ತಾಟಿನೊಳಗೇ ಬಿಟ್ಟರು.

ಮುಖ ಕೆಂಪಾಗಿಸಿಕೊಂಡು ಮನೆಯವರೆಲ್ಲ ತಮ್ಮನ್ನು ಆಶ್ಚರ್ಯದಿಂದ ನೋಡುತ್ತಿದ್ದಂತೆಯೇ ತಂದೆಯ ಮುಂದೆ ಮೊದಲ ಬಾರಿಗೆ ತಿರುಗು ನುಡಿದರು. 'ನೀವು ನನಗೆ ಮಾಡಿರುವ ಉಪಕಾರವನ್ನು ನಾನು ಸ್ಮರಿಸುತ್ತೇನೆ ನಿಜ, ಆದರೆ ಒಂದು ಮಾತು ಕೇಳಿ ಎಲ್ಲಿಯವರೆಗೆ ನಿವು ಸಾಹಿತ್ಯ ಹಾಗೂ ಕಲೆಯನ್ನು ತುಚ್ಛವಾಗಿ ನೋಡುತ್ತಿರೋ ಅಲ್ಲಿಯವರೆಗೆ

ನಿಮಗೆ ಏಳಿಗೆಯಿಲ್ಲ. ನಿಮ್ಮ ಕೈಲಿ ಓಡಾಡುತ್ತಿರುವ ದುಡ್ಡು, ನಿಮ್ಮ ವ್ಯವಹಾರ ಪರಿಸರ ಇವೆಲ್ಲವೂ ನಿಮ್ಮಿಂದ ಇಂಥ ಮಾತುಗಳನ್ನು ಆಡಿಸುತ್ತವೆ. ನಿಮ್ಮ ಮುಂದಿನ ಪೀಳಿಗೆ ನಿಮ್ಮ ಹೆಸರನ್ನು ಸ್ಮರಿಸುತ್ತದೋ ಇಲ್ಲವೋ ತಿಳಿಯದು. ಹೆಚ್ಚೆಂದರೆ ಒಂದು ತಲೆಮಾರು ತಮ್ಮ ಮಕ್ಕಳಿಗೆ ಆಗುವಷ್ಟು ಆಸ್ತಿಯನ್ನು ಇಟ್ಟರೂ ಇಡಬಹುದು ಅಷ್ಟೆ. ನೀವು ಕಾಲವಾದ ನಂತರ ನಿಮ್ಮಲಿರುವ ಹಣವನ್ನು ನಾವೆಲ್ಲ ಹಂಚಿಕೊಳ್ಳುತ್ತೀವಿ. ಅಲ್ಲಿಗೆ ನಿಮ್ಮ ಅಂತಸ್ತು, ಮನೆ ಮಾರು ಇವೆಲ್ಲ ಮುಗಿಯುತ್ತದೆ. ಆದರೆ ಕಲೆ, ಸಾಹಿತ್ಯ ಇವು ವ್ಯಕ್ತಿ ಕಣ್ಮರೆಯಾದ ನಂತರವೂ ಬಹುಕಾಲದವರೆಗೆ ಉಳಿಯುತ್ತವೆ ಎಂದರು.

ಮಗನ ನೇರ ಮಾತಿನಿಂದ ಪಾಟೀಲರ ತಂದೆ ಭೀಮನಗೌಡರು ದಂಗಾದರು. ಮನೆ ಹೆಂಗಸರೆಲ್ಲ ಮೌನದಿಂದ ಒಳಗೆ ಸೇರಿದರು. ಇಷ್ಟಾದರೂ ಪಾಟೀಲರ ಹಿರಿಯಣ್ಣ ಶಿವನಗೌಡ ತಮ್ಮನ ಅಭ್ಯುದಯಕ್ಕಾಗಿ ಸಾಧ್ಯವಾದುದೆಲ್ಲವನ್ನು ಮಾಡುತ್ತಿದ್ದ. ಆದರೆ ಪಾಟೀಲರ ಎರಡನೇ ಸೋದರ ಮಾತ್ರ ಇವರ ಬಗೆಗಿನ ಇರ್ಷೆಯನ್ನು ಮುಂದುವರಿಸಿಯೇ ಇದ್ದರು. ಅವಕಾಶ ಸಿಕ್ಕಾಗಲೆಲ್ಲ ಪಾಟೀಲರ ಬಗ್ಗೆ ತಂದೆಗೆ ಚಾಡಿ ಮಾತುಗಳನ್ನು ಹೇಳಿ ಇವರನ್ನು ದಂಡಿಸುವಂತೆ ಪ್ರಚೋದಿಸುತ್ತಲೇ ಇದ್ದರು. ಪಾಟೀಲರು ಕಲಾಶಿಕ್ಷಣ ಪಡೆದುಕೊಳ್ಳುವ ಬಗ್ಗೆ ಅವರ ತಂದೆಗೆ ಇದ್ದ ಅಸಮಾಧಾನಕ್ಕೆ ಮತ್ತೊಂದು ಉದಾಹರಣೆ ಕೊಡಬಹುದು. ಶಿಕ್ಷಣ ಪೂರೈಸುವ ಸಲುವಾಗಿ ಪಾಟೀಲರು ಮುಂಬೈಗೆ ತೆರಳಿದ ಪ್ರಾರಂಭಿಕ ದಿನಗಳಲ್ಲಿ ತಂದೆಯಿಂದ ಪತ್ರವೊಂದು ಬಂದಿತ್ತು.

ಅದರಲ್ಲಿರುವ ಒಕ್ಕಣೆಯಲ್ಲಿ ನೀನೇನಾದರೂ ಅಲ್ಲಿ ಶಿಕ್ಷಣವನ್ನು ಮುಂದುವರಿಸಿದ್ದೆಯಾದರೆ ನಾನು ಆಮರಣ ಉಪವಾಸ ಮಾಡುತ್ತೇನೆ ಎಂದು ಬರೆಯಲಾಗಿತ್ತು. ಆ ಪತ್ರ ಆಕಸ್ಮಿಕವಾಗಿ ಗುರುಗಳಾದ ದಂಡಾವತಿಮಠರ ಕೈಗೆ ಸಿಕ್ಕಿತು. ಗುರುಗಳೇ ಪಾಟೀಲರ ತಂದೆಗೆ ಮಾರುತ್ತರ ಬರೆದರು. ನಿಮ್ಮ ಮಗನ ಖರ್ಚನ್ನು ಪೂರೈಸುವುದು ನಿಮಗೆ ಅಷ್ಟೊಂದು ಕಷ್ಟವಾದರೆ ಅದರ ಚಿಂತೆ ಬಿಡಿ. ನನ್ನ ಮೂವರು ಮಕ್ಕಳ ಜೊತೆ ಇವನೂ ಒಬ್ಬ ಎಂದು ಭಾವಿಸಿ ನಾನು ಅವನ ಯೋಗಕ್ಷೇಮವನ್ನು ನೋಡಿಕೊಳ್ಳುತ್ತೇನೆ. ಎಂದು ಪಾಟೀಲರ ತಂದೆಗೆ ಗುರುಗಳು ಪತ್ರದ ಮೂಲಕ ತಿಳಿಸಿದರು. ಇದರಿಂದಾಗಿ ಪಾಟೀಲರ ತಂದೆಯವರು ಮಗನ ಸಹವಾಸಕ್ಕೆ ಬರಲಿಲ್ಲ.

ಪಾಟೀಲರು ವಿದ್ಯಾರ್ಥಿಯಾಗಿದ್ದಾಗ ಶಾಲೆಯಲ್ಲಿ ಬಹಳ ಗಮನವಿಟ್ಟು ಕಲಿಯುತ್ತಿದ್ದರು. ಸಮಯವನ್ನು ವಿನಾಕಾರಣ ಕಳೆಯುತ್ತಿರಲಿಲ್ಲ. ಬಿಡುವಿನ ವೇಳೆ ಇದ್ದರೂ

ಅವರು ತರಗತಿಯಲ್ಲಿ ಕುಳಿತು ಮೈಮರೆತು ಅಭ್ಯಾಸ ಮಾಡುತ್ತಿದ್ದರು. ನೂತನ ಕಲಾಮಂದಿರದ ಪ್ರತಿಯೊಬ್ಬ ವಿದ್ಯಾರ್ಥಿಗೂ ೫೦ ರಿಂದ ೧೦೦ ರ ವರೆಗೆ ಪೆನ್ಸಿಲ್ ಹಾಗೂ ಪೆನ್‌ಗಳು ಸ್ಕೆಚ್‌ಗಳನ್ನು ರಚಿಸಲು ಬೇಕಾಗುತ್ತಿತ್ತು. ಸ್ಕೆಚ್ ಬುಕ್ ಅಂತು ಕಡ್ಡಾಯವಾಗಿತ್ತು. ಪ್ರತಿಯೊಬ್ಬ ವಿದ್ಯಾರ್ಥಿ ಹೋದೆಡೆಯಲ್ಲೆಲ್ಲ ಅವಶ್ಯವಾಗಿ ಕೊಂಡೊಯ್ಯಲೇ ಬೇಕಾಗಿತ್ತು. ಪಾಟೀಲರಿಗೆ ಬೇರೆ ಬೇರೆ ಬಣ್ಣಗಳ ಮಾಧ್ಯಮದಲ್ಲಿ ಕಲಾಕೃತಿಗಳನ್ನು ರಚಿಸಲು ಮನಸ್ಸು ಹಾತೊರೆಯುತ್ತಿದ್ದರೂ ಹಣದ ಅಭಾವ ಕಾಡುತ್ತಿತ್ತು. ಹಾಗಾಗಿ ಚಾರ್ಕೋಲ್ ಹಾಗೂ ಪೆನ್ಸಿಲ್‌ಗಳಿಂದ ರೇಖಾ ಚಿತ್ರಗಳನ್ನು ಮತ್ತು ಭಾವಚಿತ್ರಗಳನ್ನು ಹೆಚ್ಚಾಗಿ ರಚಿಸುತ್ತಿದ್ದರು. ೧೯೬೨ ರಲ್ಲಿ ಅಲಿಘರ್ ವಿಶ್ವವಿದ್ಯಾಲಯದಲ್ಲಿ ಆರ್ಟ್ ಹಿಸ್ಟರಿ ಉಪನ್ಯಾಸಕರಾಗಿದ್ದ ಶ್ರೀ ಶರ್ಮಾ ಅವರು ಪಾಟೀಲರ ೧೦೦ ಭಾವಚಿತ್ರಗಳನ್ನು ೪೦೦ ರೂಪಾಯಿಗೆ ಖರೀದಿಸಿದರು. ಆಗ ಪಾಟೀಲರಿಗೆ ಆರ್ಥಿಕ ಪರಿಸ್ಥಿತಿ ತುಂಬಾ ಬಿಕ್ಕಟ್ಟಿನಲ್ಲಿತ್ತು. ಮುಂದೆ ವಿದ್ಯಾಭ್ಯಾಸಕ್ಕೆ ಅನುಕೂಲವಾಗಲಿ ಎನ್ನುವ ದೃಷ್ಟಿಯಿಂದ ಪಾಟೀಲರು ಶ್ರೀ ಶರ್ಮಾ ಅವರಿಗೆ ತಮ್ಮ ಭಾವಚಿತ್ರದ ಕಲಾಕೃತಿಗಳನ್ನು ಕಡಿಮೆ ಬೆಲೆಗೆ ಮಾರಾಟ ಮಾಡಿದರು.

ವಿದ್ಯಾರ್ಥಿ ದೆಸೆಯಲ್ಲಿಯೇ ಪ್ರತಿ ದಿನ ಮೂರು, ನಾಲ್ಕು ಭಾವಚಿತ್ರಗಳನ್ನು ರಚಿಸುತ್ತಿದ್ದರು. ಹಾಗಾಗಿ ವಾರ್ಷಿಕದ ಕೊನೆಯಲ್ಲಿ ಕೇವಲ ಭಾವಚಿತ್ರಗಳೇ ೨೫೦ ಸಂಖ್ಯೆಯಲ್ಲಿರುತ್ತಿದ್ದವು. ಇಂದಿಗೂ ಸಹಿತ ಅವರು ಕರ್ನಾಟಕದಲ್ಲಿ ಭಾವಚಿತ್ರ ರಚಿಸುವ ಕೆಲವೇ ಕಲಾವಿದರಲ್ಲಿ ಒಬ್ಬರಾಗಿದ್ದಾರೆ. ವಿದ್ಯಾರ್ಥಿಯೊಬ್ಬ ತನ್ನ ಅಧ್ಯಯನದ ಅವಧಿಯಲ್ಲಿ ವ್ಯಕ್ತಿ ಚಿತ್ರ ರಚನೆ, ಸಂಯೋಜನೆ ಹಾಗೂ ಸ್ಟಿಲ್ ಲೈಫ್ ಚಿತ್ರಣ ಕಲಿಯಬೇಕಾಗಿತ್ತು. ನಾಲ್ಕನೆ ವರ್ಷದಲ್ಲಿ ನ್ಯೂಡ್ ಸ್ಟಡಿ ಕಡ್ಡಾಯವಾಗಿತ್ತು ಇವಕ್ಕೆಲ್ಲ ಚಾರಕೋಲ್ ಹಾಗೂ ಕ್ರೇಯಾನ್ಸಗಳನ್ನು ಪ್ರಾರಂಭಿಕ ಹಂತದಲ್ಲಿ ಬಳಸಬೇಕಾಗಿತ್ತು. ರೂಪದರ್ಶಿಗಳಲ್ಲಿ ಕೆಲವರಿಗೆ ಮೂವತ್ತು ವರುಷದ ಅನುಭವವಿತ್ತು. ಅಲ್ಲಲ್ಲಿ ರೂಪದರ್ಶಿಗಳಾಗಿಯೇ ಅವರು ತಮ್ಮ ಜೀವನ ನಿರ್ವಹಿಸುತ್ತಿದ್ದರು. ಜೆ. ಜೆ. ಕಲಾಶಾಲೆ ಮತ್ತು ನೂತನ ಕಲಾಮಂದಿರಗಳಲ್ಲಿ ಹೆಚ್ಚಾಗಿ ಸರದಿಯ ಮೇಲೆ ರೂಪದರ್ಶಿಯಾಗಿ ಕುಳಿತುಕೊಳ್ಳುತ್ತಿದ್ದರು.

ಅವರನ್ನು ಜನರು ರೂಪದರ್ಶಿಗಳೆಂದೇ ಗುರುತಿಸುತ್ತಿದ್ದರು. ಪಾಟೀಲರು ಹ್ಯುಮನ್ ಅನಾಟಾಮಿಯಲ್ಲಿ ಫಿಗರೇಟಿವ್ ಡ್ರಾಯಿಂಗ್‌ಗಳಲ್ಲಿ ಅತೀವ ಆಸಕ್ತಿಯಿಂದ ಚಿತ್ರರಚಿಸುತ್ತಿದ್ದರು. ಹಾಗಾಗಿ ಯಾವುದೇ ಕಲಾಕೃತಿ ಇರಲಿ ಅಲ್ಲಿರುವ ರೇಖೆಗಳ ಮೇಲೆ ಪ್ರಭುತ್ವವನ್ನು ಸಾಧಿಸುತ್ತಿದ್ದರು. ವ್ಯಕ್ತಿಯನ್ನು ಕಂಡ ಕೇಲವೆ ನಿಮಿಷಗಳಲ್ಲಿ ಅವರ ಚಿತ್ರವನ್ನು ಯಥಾವತ್ತಾಗಿ ಪಾಟೀಲರು ಬರೆಯಬಲ್ಲವರಾಗಿದ್ದರು. ವಿದ್ಯಾರ್ಥಿದೆಸೆಯಲ್ಲಿಯೇ ಈ ಸಾಮರ್ಥ್ಯ

ಅವರಲ್ಲಿ ಬಂದಿತ್ತು.

ಪ್ರತಿ ವರ್ಷವೂ ನೂತನ ಕಲಾಮಂದಿರದ ವಿದ್ಯಾರ್ಥಿಗಳನ್ನು ಮುಂಬೈನ ಸುತ್ತಮುತ್ತ ಒಂದು ದಿನದ ವನಭೋಜನ ಜೊತೆಗೆ ನಿಸರ್ಗದ ಅಭ್ಯಾಸವನು ಮಾಡಲು ಕರೆದೊಯ್ಯುತ್ತಿದ್ದರು. ಅಲ್ಲಿ ಎಲ್ಲರೂ ಸೇರಿ ಸ್ಕೆಚ್ ಮಾಡುವುದು ಮತ್ತು ನಿಸರ್ಗಚಿತ್ರಗಳನ್ನು ರಚಿಸುವುದನ್ನು ಮಾಡುತ್ತಿದ್ದರು. ಹಾಗೂ ಎಲ್ಲಾ ವಿದ್ಯಾರ್ಥಿಗಳು ಸೇರಿ ಸಮೂಹ ಕಲಾಪ್ರದರ್ಶನವನ್ನು ಜಹಾಂಗೀರ ಆರ್ಟ್ ಗ್ಯಾಲರಿಯಲ್ಲಿ ಮಾಡುತ್ತಿದ್ದರು. ಅಲ್ಲದೆ ಎಲ್ಲ ವಿದ್ಯಾರ್ಥಿಗಳು ಸಮಯ ಸಿಕ್ಕಾಗ ವಯ್ಯಕ್ತಿಕವಾಗಿಯೂ ನಿಸರ್ಗ ಚಿತ್ರಣವನ್ನು ಪ್ರತಿದಿನ ಮಾಡುತ್ತಿದ್ದರು. ಇವೆಲ್ಲ ಕ್ರಮಗಳು ಪಾಟೀಲರ ಕಲಾಆಸಕ್ತಿ ಹೆಚ್ಚಿಸಲು ಸಹಕಾರಿಯಾದವು.

ನೈಜ ಚಿತ್ರರಚನೆ, ಸಾಂದರ್ಭಿಕ ಚಿತ್ರರಚನೆ ಇವೆಲ್ಲಕ್ಕೂ ರೇಖಾಚಿತ್ರವೇ ಮೂಲ ಎಂದು ಅದರ ಮಹತ್ವ ಬಿಂಬಿಸುತ್ತಿದ್ದರು. ಹಾಗಾಗಿ ಪಾಟೀಲರು ಅದನ್ನು ಆಳವಾಗಿ ಅಧ್ಯಯನ ಮಾಡಿ ಬೇರೆ ಬೇರೆ ಮಾಧ್ಯಮಗಳಿಗೆ ಅದನ್ನು ಪರಿಣಾಮಕಾರಿಯಾಗಿ ಬಳಸಿಕೊಳ್ಳುವುದನ್ನು ಸಾಧ್ಯವಾಗಿಸಿಕೊಂಡರು. ಪಾಟೀಲರು ಮುಂಬೈನಲ್ಲಿ ಕಲಿಯುವಾಗ ಕರ್ನಾಟಕದ ಕೆಲವು ಕಲಾವಿದರಾದ ಖಂಡೇರಾವ್, ಶೆಣೈ, ಪುಣಿಂಚಿತ್ತಾಯ, ಎ. ಎಸ್. ಪಾಟೀಲ ಇವರೆಲ್ಲ ಸಹಪಾಠಿಗಳು, ಜೊತೆಗಾರರು ಇಲ್ಲವೆ ಮಿತ್ರರಾಗಿದ್ದರು. ಇವರಲ್ಲಿ ಜೆ. ಎಸ್. ಖಂಡೇರಾವ, ಶೆಣೈ, ಪುಂಚಿತ್ತಾಯ್, ಎ.ಎಸ್.ಪಾಟೀಲ ಮುಖ್ಯರಾಗಿದ್ದರು. ಇವರಲ್ಲಿ ಕೆಲವರು ಪಾಟೀಲರಿಗಿಂತ ಹಿರಿಯರು ಮತ್ತೆ ಕೆಲವರು ಓರಿಗೆಯವರು, ಇನ್ನೂ ಹಲವರು ಕಿರಿಯರು ಇದ್ದರು. ಇವರೆಲ್ಲರ ಸಲಹೆ, ಸೂಚನೆ, ಮಾರ್ಗದರ್ಶನ, ಆತ್ಮೀಯತೆ, ಪ್ರೀತಿ, ವಾತ್ಸಲ್ಯ, ಮಿತ್ರತ್ವ, ಇವೆಲ್ಲವುಗಳನ್ನು ಪಡೆದುಕೊಳ್ಳುತ್ತ ತಮ್ಮ ಕಲಾಶಿಕ್ಷಣವನ್ನು ಪೂರೈಸಿದರು.ಬಾಲ್ಯದಲ್ಲಿ ಚಿಗುರೊಡೆದ ಕಲಾವೃಕ್ಷ ಮುಂಬೈನಲ್ಲಿಯ ಸಮೃದ್ಧ ಪರಿಸರದ ಗಾಳಿ, ಬೆಳಕು ಮತ್ತು ನೀರನ್ನುಂಡು ವಿಶಾಲವಾಗಿ ಬೆಳೆಯಿತು. ಕಲಾಶಿಕ್ಷಣದ ಸಂದರ್ಭದಲ್ಲಿ ಉಂಟಾಗುತ್ತಲಿದ್ದ ಆರ್ಥಿಕ ತೊಂದರೆ, ಮನಸ್ತಾಪ, ಇನ್ನಿತರ ಎಲ್ಲ ಬಗೆಯ ಸಂಕಟಗಳನ್ನು ನಗಣ್ಯವಾಗಿ ಭಾವಿಸಿ ಚಿತ್ರರಚನೆಯಲ್ಲಿಯೇ ತಮ್ಮ ಮನಸ್ಸನ್ನು ಕೇಂದ್ರೀಕರಿಸಿದ ಎಂ.ಬಿ.ಪಾಟೀಲರು ಯಶಸ್ವಿಯಾಗಿ ಕಲಾಶಿಕ್ಷಣ ಪಡೆದುಕೊಂಡು ಮುಂಬೈನಿಂದ ಹಿಂದಿರುಗಿದರು.

**ವೃತ್ತಿ ಬದುಕು :**

ಪ್ರತಿಯೊಬ್ಬ ವ್ಯಕ್ತಿಯ ಬದುಕಿನಲ್ಲಿ ಆತ ಆಯ್ದುಕೊಳ್ಳುವ ಅಥವಾ ಆತನಿಗೆ ದೊರಕುವ ವೃತ್ತಿಯು ಪ್ರಮುಖ ಪಾತ್ರವಹಿಸುತ್ತದೆ. ವ್ಯಕ್ತಿಯ ಆರ್ಥಿಕ, ಸಾಮಾಜಿಕ, ಕೌಟುಂಬಿಕ,

ನೆಲೆಗಟ್ಟು ನಿರ್ಧಾರವಾಗುವುದೇ ಆತ ಅನುಸರಿಸುತ್ತಿರುವ ಉದ್ಯೋಗವನ್ನು ಆಧರಿಸಿ ಎಂದು ಹೇಳಬಹುದು. ವೈವಾಹಿಕ ಸಂಬಂಧಗಳನ್ನು ಬೆಳೆಸುವಲ್ಲಿ ಆರ್ಥಿಕ ಮಾನದಂಡ ಗುರುತಿಸುವಲ್ಲಿ ಹಾಗೂ ಸಾಮಾಜಿಕ ಸ್ಥಾನಮಾನಗಳನ್ನು ನಿರ್ಧರಿಸುವ ಸಂದರ್ಭದಲ್ಲಿ ವ್ಯಕ್ತಿಯ ವೃತ್ತಿಯನ್ನು ಗಮನಿಸಲಾಗುತ್ತದೆ. ಇಂತಹ ಸಂಗತಿಗಳಲ್ಲದೆ ಯುವಕರಿಗೆ ತಮ್ಮ ಶಿಕ್ಷಣಕ್ಕೆ ಸಂಬಂಧಿಸಿದಂತೆ ಉದ್ಯೋಗ ಅವಕಾಶಗಳು ಲಭ್ಯವಾಗದೇ ಹೋದಾಗ, ಬದುಕಿನಲ್ಲಿ ನೆಲೆನಿಲ್ಲಲು ಯಾವ ಬಗೆಯ ವೃತ್ತಿಯನ್ನು ಕೈಗೊಳ್ಳಬೇಕೆಂಬ ಬಗ್ಗೆ ಗೊಂದಲ ಉಂಟಾಗುತ್ತದೆ.

ಯುವಜನರು ಬೇಗನೆ ಒಂದು ವೃತ್ತಿಯನ್ನು ಕೈಗೊಳ್ಳದೇ ತಂದೆ ತಾಯಿಗಳ ಮೇಲೆ ಅವಲಂಬನೆಯಾದರೆ ತಂದೆ ತಾಯಿ ಮೊದಲುಗೊಂಡು ಊರಿನ ಹಿರಿಯರೆಲ್ಲ ಹೀಯಾಳಿಸಿ ಮಾತನಾಡುವುದು ಸಮಾಜದಲ್ಲಿ ಸಾಮಾನ್ಯ ಸಂಗತಿಯಾಗಿದೆ. ಮತ್ತೆ ಕೆಲವು ಯುವಕ ಯುವತಿಯರಿಗೆ ಬೇಗನೆ ಉದ್ಯೋಗ ದೊರಕಿದರೂ ತಮ್ಮ ಶಿಕ್ಷಣದ ಹಿನ್ನೆಲೆ ಹೊಂದಿದ ವೃತ್ತಿ ಸಿಗಲಿಲ್ಲವೆಂಬ ಕೊರಗು ಸಾಮಾನ್ಯವಾಗಿರುತ್ತದೆ. ಮತ್ತೆ ಕೆಲವರು ಸಂಬಂಧಪಟ್ಟ ಎಲ್ಲ ಶೈಕ್ಷಣಿಕ ಅರ್ಹತೆಗಳಿದ್ದರೂ ಉದ್ಯೋಗದಿಂದ ವಂಚಿತರಾಗಿರುವುದು ಇಂದಿಗೂ ಕಂಡುಬರುತ್ತದೆ. ಹಾಗಾಗಿ ಯಾವುದೇ ವ್ಯಕ್ತಿಯ ಬದುಕಿನಲ್ಲಿ ಆತನ ವೃತ್ತಿಗೆ ಮಹತ್ವ ಇರುವಂತೆ, ಕಲಾವಿದರ ಬದುಕಿನಲ್ಲಿ ಸಹಿತ ಅವರ ವೃತ್ತಿ ಮತ್ತು ಪ್ರವೃತ್ತಿಗಳಿಗೆ ಹೆಚ್ಚಿನ ಮಹತ್ವ ಇರುತ್ತದೆ.

ಕಲಾವಿದರು ರಚಿಸುವ ಕಲಾಕೃತಿಗಳಿಗೂ ಅವರ ವೃತ್ತಿ ಹಾಗೂ ಪ್ರವೃತ್ತಿಗಳಿಗೂ ಆಂತರಿಕ ಸಂಬಂಧವಿರುತ್ತದೆ. ಹಾಗಾಗಿಯೇ ಕಲಾವಿದರ ಕುರಿತಾಗಿರುವ ಅಧ್ಯಯನಗಳಲ್ಲಿ ಅವರ ವೃತ್ತಿ ಬದುಕಿನ ಬಗ್ಗೆ ಪ್ರತ್ಯೇಕ ವಿಶ್ಲೇಷಣೆಯನ್ನು ಮಾಡಲಾಗುತ್ತದೆ. ಕೆಲವು ಕಲಾವಿದರ ವೃತ್ತಿ ಮತ್ತು ಪ್ರವೃತ್ತಿಗಳು ಭಿನ್ನವಾಗಿರುತ್ತವೆ. ಇವು ಒಂದಿಲ್ಲೊಂದು ರೀತಿಯಿಂದ ಕಲಾವಿದರ ಕಲಾಶೈಲಿ ಮತ್ತು ಕೃತಿಗಳ ಮೇಲೆ ಪರೋಕ್ಷ ಪ್ರಭಾವ ಬೀರುತ್ತವೆ. ಇಂತಹ ಸಂಗತಿಗಳ ಹಿನ್ನೆಲೆಯಲ್ಲಿ ಎಂ.ಬಿ.ಪಾಟೀಲರ ವೃತ್ತಿ ಜೀವನ ಹಾಗೂ ಪ್ರವೃತ್ತಿಗಳ ಬಗ್ಗೆ ಇಲ್ಲಿ ಅಧ್ಯಯನ ಮಾಡಲಾಗಿದೆ.

ಎಂ. ಬಿ. ಪಾಟೀಲರು ೧೯೬೪ರಲ್ಲಿ ಮುಂಬೈನ ನೂತನ ಕಲಾಮಂದಿರದಲ್ಲಿ ಡಿಪ್ಲೋಮಾ ಮುಗಿಸಿಕೊಂಡು ತಿಕೋಟಾಕ್ಕೆ ಮರಳಿದರು ಇಲ್ಲಿಗೆ ಬಂದ ಮೇಲೆ ಅವರಿಗೆ ಎದುರಾದ ಮೊದಲ ಸಮಸ್ಯೆಯೆಂದರೆ ತಾವು ಕಲಿತ ವಿದ್ಯೆಯಿಂದ ತಿಕೋಟಾದಂತ ಹಳ್ಳಿಯಲ್ಲಿ ಹೇಗೆ ಜೀವನ ಮಾಡಬೇಕೆಂಬುದಾಗಿತ್ತು. ಮುಂಬೈನಿಂದ ವಿದ್ಯಾರ್ಥಿ ಜೀವನವನ್ನು ಮುಗಿಸಿ ಬಂದ ಇವರಿಂದ ಮನೆಯವರಿಗಿದ್ದ ನಿರಿಕ್ಷೆಯೇ ಬೇರೆಯಾಗಿತ್ತು. ಪಾಟೀಲರು ಸಂಪಾದನೆಯ

ಮಾರ್ಗವನ್ನು ಹಿಡಿದು ಸಂಸಾರಕ್ಕೆ ಆರ್ಥಿಕವಾಗಿ ನೆರವಾಗಬೇಕೆನ್ನುವ ಬಯಕೆ ಎಲ್ಲರದಾಗಿತ್ತು. ಮುಂಬೈನ ವಿಶಾಲವಾದ ವಾತಾವರಣದಲ್ಲಿ ತೇಲಿ ಮುಳುಗಿ ಬಂದಿದ್ದ ಪಾಟೀಲರು ಈಗ ತಿಕೋಟಾದಂಥ ಸಣ್ಣ ಸ್ಥಳದಲ್ಲಿ ತಮ್ಮ ವ್ಯಕ್ತಿತ್ವದ ಛಾಪನ್ನು ಮೂಡಿಸಬೇಕಾಗಿತ್ತು. ಇವರ ಸಾಮರ್ಥ್ಯಕ್ಕೆ ತಿಕೋಟಾದಂಥ ಗ್ರಾಮದ ಆವರಣ ಸಣ್ಣದಾಗಿತ್ತು. ಇವರ ಕಲಾವಂತಿಕೆಯ ಪ್ರಯೋಜನವನ್ನು ಪಡೆದುಕೊಳ್ಳುವ ಅವಕಾಶ ತಿಕೋಟಾದಂತ ಸ್ಥಳಕ್ಕೆ ಇರದಿದ್ದುದೇ ಒಂದು ವಿಪರ್ಯಾಸವಾಗಿತ್ತು. ಅದರಲ್ಲೂ ತಂದೆ ಹಾಗೂ ಇನ್ನೊಬ್ಬ ಸೋದರನಿಂದ ನಿರಂತರ ತೊಂದರೆ, ಹೀಯಾಳಿಸುವಿಕೆ ನಡೆಯುತ್ತಿತ್ತು. ಇಂತಹ ಸಂದರ್ಭದಲ್ಲಿ ಪಾಟೀಲರು ಸಂಪಾದನೆಯ ಮಾರ್ಗವನ್ನು ಕಂಡುಕೊಳ್ಳಲೇಬೇಕಾದ ಅನಿವಾರ್ಯ ಪರಿಸ್ಥಿತಿಗೆ ಸಿಲುಕಿದರು.

ಮುಂಬೈನಿಂದ ತಂದಿದ್ದ ವರ್ಣಸಾಮಗ್ರಿಗಳ ನೆರವಿನಿಂದ ಮಹಾ ಪುರುಷರಾದ ಮಹಾತ್ಮಗಾಂಧಿ, ಸರ್ವಪಲ್ಲಿ ರಾಧಾಕೃಷ್ಣ ಹಾಗೂ ಪಂಡಿತ್ ಜವಾಹರಲಾಲ್ ನೆಹರು ಅವರ ಭಾವಚಿತ್ರಗಳನ್ನು ರಚಿಸಿ ಪಂಚಾಯತಿ ಆವರಣದಲ್ಲಿ ತೂಗು ಹಾಕಿದರು. ಅದನ್ನು ನೋಡಿದ ಊರಿನ ಜನರೆಲ್ಲ ಕೊಂಡಾಡಿದರೂ ಪಂಚಾಯತಿಯವರು ಮಾತ್ರ ಹಣ ನೀಡಿಕೆ ವಿಷಯದಲ್ಲಿ ಭಾರೀ ತಕರಾರು ಮಾಡಿದರು. ಪಂಚಾಯತಿಯವರಿಗೂ ಪಾಟೀಲರಿಗೂ ವಾಗ್ವಾದ ನಡೆಯಿತು. ಪಂಚಾಯಿತಿ ಮುಖ್ಯಸ್ಥರ ಮುಂದೆ ಕೂಗಾಡಿದವರೇ ಹಣ ತೆಗೆದುಕೊಳ್ಳದೆಯೇ ಹೊರಬಂದರು. ತಾರುಣ್ಯ ತುಂಬಿದ ಪಾಟೀಲರಲ್ಲಿ ಸಹಜವಾಗಿಯೇ ಯೌವನದಲ್ಲಿ ಇರುವ ರೋಷ ಇವರಲ್ಲಿ ಮನೆಮಾಡಿತ್ತು. ಪಾಟೀಲರಿಗೆ ಛಲವು ಗಟ್ಟಿಗೊಂಡಿತು.

ಇವರಿಗೆ ತಿಕೋಟಾದಲ್ಲಿ ಹೊಟ್ಟೆಗೆ ಆಹಾರ ಸಿಗುತ್ತಿತ್ತೇ ವಿನಹ ನೆತ್ತಿ ತುಂಬುವ ಜ್ಞಾನ ದಾಹ ತಣಿಸಿಕೊಳ್ಳಲು ಸಾಧ್ಯವಾಗುತ್ತಿರಲಿಲ್ಲ. ಹೀಗಾಗಿ ಪಾಟೀಲರು ತಮ್ಮ ಜ್ಞಾನದಾಹಕ್ಕಾಗಿ ತಿಕೋಟಾದಲ್ಲಿ ಪುಸ್ತಕ ಭಂಡಾರದ ಹುಡುಕಾಟದಲ್ಲಿ ನಿರತರಾಗಿದ್ದರು. ಅಲ್ಲಿ ಒಳ್ಳೆಯ ಪುಸ್ತಕ ಭಂಡಾರವಿರಲಿಲ್ಲ. ಆಸುಪಾಸಿನಲ್ಲಿ ಇದ್ದ ಉತ್ತಮ ಗ್ರಂಥಾಲಯವೆಂದರೆ ವಿಜಾಪೂರದಲ್ಲಿ ಮಾತ್ರ. ಅಲ್ಲಿಗೆ ಹೋಗಲು ಎರಡು ರೂಪಾಯಿ ಎಪ್ಪತ್ತೈದು ಪೈಸೆ ಬಸ್ ಚಾರ್ಜ ಇತ್ತು. ಊರಿಗೆ ಬರುತ್ತಿದ್ದ ಸಂಯುಕ್ತ ಕರ್ನಾಟಕ, ಪ್ರಜಾಮತ ಹಾಗೂ ಮರಾಠಿ ಪತ್ರಿಕೆಗಳಿಂದಲೇ ಪಾಟೀಲರು ತಮ್ಮ ಜ್ಞಾನಾರ್ಜನೆಯ ಹಸಿವನ್ನು ಪೂರೈಸಿಕೊಳ್ಳಬೇಕಾಗುತ್ತಿತ್ತು. ಪಾಟೀಲರಿಗೆ ಅಪ್ಯಾಯಮಾನವೆನ್ನಿಸುವ ಪುಸ್ತಕಗಳು ಅವರಿಗೆ ದೊರೆಯುತ್ತಿರಲಿಲ್ಲ. ಇಂತಹ ಒಂದು ಸಂದರ್ಭದಲ್ಲಿ ವೃತ್ತಪತ್ರಿಕೆಯೊಂದರಲ್ಲಿ ದೆಹಲಿಯ "ನ್ಯಾಶನಲ್ ಗ್ಯಾಲರಿ ಆಫ್ ಮಾಡರ್ನ್ ಆರ್ಟ್ ಸಂಸ್ಥೆ" ಚಿತ್ರಕಲಾ ಸ್ಪರ್ಧೆಗಾಗಿ ಕೃತಿಗಳನ್ನು ಆಹ್ವಾನಿಸಿರುವ ಪ್ರಕಟಣೆ ಬಂದಿತ್ತು.

ಅದನ್ನು ನೋಡಿದ ಪಾಟೀಲರು ಅದರಲ್ಲಿನ ಅರ್ಜಿಯನ್ನು ತುಂಬಿ ಅದರೊಂದಿಗೆ ತಮ್ಮ ಎರಡು ಕೃತಿಗಳನ್ನು ಕಳುಹಿಸಿದರು. ಅದರಲ್ಲಿ ಒಂದು ಚಿತ್ರ ಇಳಕಲ್ ಸೀರೆಯುಟ್ಟಿದ್ದ ತಮ್ಮ ತಂಗಿಯ ಭಾವಚಿತ್ರವಾಗಿತ್ತು. ಅರ್ಧ ಇಂಪೀರಿಯಲ್ ಅಳತೆಯಲ್ಲಿದ್ದ ಇದಕ್ಕೆ 'Artist Sister' ಎಂಬ ಶೀರ್ಷಿಕೆ ಕೊಟ್ಟಿದ್ದರು. 'My Life' ಎಂಬ ಸಂಯೋಜನಾ ಚಿತ್ರವು ಎರಡನೆಯದಾಗಿತ್ತು. ದೆಹಲಿಗೆ ಇವುಗಳನ್ನು ಕಳಿಸಿಕೊಡಲು ೨೫ ರೂಪಾಯಿ ಅಗತ್ಯವಾಗಿತ್ತು. ಆದರೆ ಇವರ ಬಳಿ ಹಣವಿರಲಿಲ್ಲ ಈ ಸಂದರ್ಭದಲ್ಲಿ ಪಾಟೀಲರು ತಮ್ಮ ಊರಿನಲ್ಲಿ ಸ್ಥಿತಿವಂತ ವರ್ತಕರಾದ ಸಿದ್ಧರಾಮಪ್ಪ ಇಂಚಗೇರಿಯವರ ಬಳಿಗೆ ಹೋಗಿ 'ನಿಮ್ಮ ತಾಯಿ ತಂದೆಯವರ ಭಾವಚಿತ್ರಗಳನ್ನು ರಚಿಸಿಕೊಡುತ್ತೇನೆ. ಹಾಗಾಗಿ ಈ ಚಿತ್ರಗಳನ್ನು ದೆಹಲಿಗೆ ಕಳಿಸಲು ಸಾಲ ಕೊಡಿ' ಎಂದು ವಿನಂತಿಸಿಕೊಂಡರು.

ಇಂಚಗೇರಿ ಅವರಿಂದ ಹಣ ಪಡೆದು ಕಲಾಕೃತಿಗಳನ್ನು ದೆಹಲಿಗೆ ಕಳಿಸಿದರು. ಅವು ದೆಹಲಿಯಲ್ಲಿ ಪ್ರದರ್ಶನಗೊಂಡವು ಮಾತ್ರವಲ್ಲದೆ ಗ್ಯಾಲರಿಯಿಂದ ಪ್ರಶಂಸೆಯ ಪತ್ರ ಬಂದವು. ಚಿತ್ರಗಳು ಮಾರಾಟವಾಗಲಿಲ್ಲ. ಕೃತಿಗಳು ಮಾತ್ರ ಮತ್ತೆ ಪಾರ್ಸಲ್ ಮೂಲಕವೇ ಇವರಿಗೆ ತಿರುಗಿ ಬಂದವು. ಹೀಗೆ ಒಮ್ಮೊಮ್ಮೆ ಇವರ ನಿರೀಕ್ಷೆಗೆ ತಕ್ಕ ಫಲ ದೊರೆಯುತ್ತಿರಲಿಲ್ಲ. ಕೆಲಸವಿಲ್ಲದೆ ಕಂಗಾಲಾಗಿದ್ದ ಪಾಟೀಲರು ಅನಂತರ ಹಿಂದಿ ಭಾಷೆಯ ಮಾಸಪತ್ರಿಕೆಯೊಂದಕ್ಕೆ ಕೃತಿಯೊಂದನ್ನು ಕಳಿಸಿದಾಗ ಅದು ಮುಖಪುಟದಲ್ಲಿ ಪ್ರಕಟವಾಯಿತು. ಅದೊಂದು ಮಹಿಳೆಯ ರೇಖಾಚಿತ್ರವಾಗಿತ್ತು. ಅದರಲ್ಲಿ ಅಲಂಕರಣವಿತ್ತು. ಇವರ ಉನ್ನತಿಯನ್ನು ಎಂದೂ ಸಹಿಸದಿದ್ದ ಇವರ ಕಿರಿಯಣ್ಣ ಚಿತ್ರವನ್ನು ಕಂಡು ಅದು ನಿಜವೋ ಸುಳ್ಳೋ ಎಂದು ಪರೀಕ್ಷಿಸಲು ಅದಕ್ಕೆ ಎಂಜಲು ಹಚ್ಚಿ ನೋಡಿದ್ದ. ಚಿತ್ರದಲ್ಲಿ ಅಂಥದೊಂದು ನೈಜತೆಯಿತ್ತು.

ಈ ಸಂದರ್ಭದಲ್ಲಿ ಪೂನಾದಿಂದ ಸ್ವರಾಜ್ಯ ಎಂಬ ಮರಾಠಿ ವಾರಪತ್ರಿಕೆ ಹೊರಡುತ್ತಿತ್ತು. ಜೋಶಿ ಎಂಬುವರು ಇದರ ಸಂಪಾದಕರಾಗಿದ್ದರು. ಈ ಪತ್ರಿಕೆಯ ಮುಖಪುಟಕ್ಕಾಗಿ ನಡೆಸಲಾದ ಚಿತ್ರಕಲಾ ಸ್ಪರ್ಧೆಯಲ್ಲಿ 'ಕೋಳಿ' ಎಂಬ ಶೀರ್ಷಿಕೆಯ ಗುಡ್ಡ ಗಾಡು ಜನಾಂಗಕ್ಕೆ ಸಂಬಂಧಿಸಿದ ಬೆಸ್ತರನ್ನು ಕುರಿತ ಕೃತಿಯೊಂದನ್ನು ಪಾಟೀಲರು ಕಳಿಸಿದ್ದರು. ಈ ಚಿತ್ರಕ್ಕೆ ಎರಡನೆಯ ಬಹುಮಾನ ಸಿಕ್ಕಿತು. ಸ್ಪರ್ಧೆಗಾಗಿ ಬಂದಿದ್ದ ೮೦೦ ಚಿತ್ರಗಳಲ್ಲಿ ಪಾಟೀಲರದ್ದು ದ್ವಿತೀಯ ಸ್ಥಾನಕ್ಕೆ ಆಯ್ಕೆಯಾಗಿತ್ತು. ಈ ರೀತಿ ಪಾಟೀಲರು ತಮ್ಮ ಕಲಿಕೆಯ ನಂತರ ಊರಿನಲ್ಲಿದ್ದುಕೊಂಡು ಕಲಾಕೃತಿಗಳನ್ನು ರಚಿಸುತ್ತಲೇ ಉದ್ಯೋಗ ಹುಡುಕಾಟದಲ್ಲಿ ತೊಡಗಿದರು. ಜೊತೆಗೆ ಕಲಾ ಸ್ಪರ್ಧೆಯಲ್ಲಿ ಭಾಗವಹಿಸುತ್ತ ತಿಕೋಟಾದಲ್ಲಿ ಸಮಯ ಕಳೆಯ ತೊಡಗಿದರು.

ಹೀಗೆ ಎಂಟು ತಿಂಗಳು ತಿಕೋಟಾದಲ್ಲಿ ನೆಲೆನಿಂತರು. ತಿಕೋಟಾದಲ್ಲಿ ಪಾಟೀಲರಿಗೆ ಸತತವಾಗಿ ಪ್ರೋತ್ಸಾಹ ಕೊಟ್ಟವರೆಂದರೆ ಗ್ರಂಥಪಾಲಕರಾಗಿದ್ದ ಶ್ರೀಪತಿ ಛತ್ರಿಮಠ ಅವರಾಗಿದ್ದರು. ಸುಶಿಕ್ಷಿತರಾಗಿದ್ದ ಅವರು ಪಾಟೀಲರ ಕಲೆಯನ್ನು ಮೆಚ್ಚಿಕೊಂಡಿದ್ದರು. ಮಾತ್ರವಲ್ಲದೆ ಇಂತಹ ಉತ್ತಮ ಕಲಾವಿದರನೊಬ್ಬ ನಮ್ಮ ಹಳ್ಳಿಯಲ್ಲಿದ್ದಾನೆ ಎಂದು ಅಭಿಮಾನದಿಂದ ಹೇಳಿಕೊಳ್ಳುತ್ತಿದ್ದರು. ಒಮ್ಮೆ ಸ್ವರಾಜ್ಯ ವಾರಪತ್ರಿಕೆಯ ಮುಖಪುಟದಲ್ಲಿ ಪಾಟೀಲರು ರಚಿಸಿದ ಕೃತಿ ಮುದ್ರಣಗೊಂಡಿದ್ದನ್ನು ಕಂಡು ತೀರಾ ಭಾವುಕರಾದ ಅವರು ಪಾಟೀಲರ ತಂದೆಯವರ ಬಳಿಗೆ ಹೋಗಿ ಸ್ವರಾಜ್ಯ ಪತ್ರಿಕೆಯ ಪ್ರತಿಯೊಂದನ್ನು ಕೊಟ್ಟು ಮಗನ ಕಲಾ ಶ್ರೇಷ್ಠತೆ ಹೊಗಳಿದರು. ಈ ವಾರಪತ್ರಿಕೆಯ ಲಕ್ಷಗಟ್ಟಲೆ ಪ್ರತಿಗಳು ಮುದ್ರಣಗೊಳ್ಳುತ್ತವೆ ದೇಶಾದ್ಯಂತ ಅನೇಕರು ಇದನ್ನು ವೀಕ್ಷಿಸುತ್ತಾರೆ ಎಂದು ಅಭಿಮಾನ ಪಟ್ಟರು. ಕ್ರಮೇಣ ತಂದೆಗೆ ಪಾಟೀಲರ ಪತ್ರಿಭೆಯ ಅರಿವಾದರೂ ಅವರ ಕಿರಿಯಣ್ಣ ಮಾತ್ರ ಸದಾ ಹೀಯಾಳಿಸುವುದರಲ್ಲೆ ಕಾಲ ಕಳೆಯುತ್ತಿದ್ದ.

ಕಿರಿಯಣ್ಣನಿಗೂ ಪಾಟೀಲರಿಗೂ ಮಧ್ಯೆ ತೀವ್ರ ಕಿತ್ತಾಟವಾಗಿ ತಂದೆ ಇವರನ್ನು ಸಂಭಾಳಿಸಲು ಅಸಹಾಯಕರಾದಂತೆ. ಪಾಟೀಲರ ಅಜ್ಜಿಯಿದ್ದ ದಂದರ್ಗಿಯಲ್ಲಿ ಇದೆ ಕಾರಣಕ್ಕೆ ನ್ಯಾಯ ಪಂಚಾಯತಿಯನ್ನೇ ಏರ್ಪಡಿಸಲಾಯಿತು. ದೇಹದಲ್ಲಿ ಸ್ವಾಸ್ಥ್ಯವಿರದಿದ್ದ ಪಾಟೀಲರು ಐದು ಮೈಲಿ ನಡೆದೇ ದಂದರ್ಗಿಯನ್ನು ತಲುಪಿದರು. ಮನೆಯ ಮುಂದಿನ ಕಟ್ಟೆಯಲ್ಲಿ ಇವರ ತಂದೆ ಇಬ್ಬರು ಅಣ್ಣಂದಿರು ಹಾಗೂ ಊರಿನ ಹಿರಿಯರು ಕುಳಿತಿದ್ದರು. ಕಂಬಕ್ಕೆ ಒರಗಿನಿಂತ ಪಾಟೀಲರಿಗೆ ಹಿರಿಯರು ಕಿರಿಯಣ್ಣನ ಕ್ಷಮಾಪಣೆ ಕೇಳು ಎಂದು ಆದೇಶಿದಾಗ ಅದಕ್ಕೆ ಪಾಟೀಲರು ನಾನು ಯಾರಿಗಾದರೂ ಕಾಲಿಗೆ ಬೀಳುತ್ತೇನೆ ಆದರೆ ಕಿರಿಯಣ್ಣನಿಗಲ್ಲ ಎಂದರು. ಈ ಸಂದರ್ಭದಲ್ಲಿ ಪಾಟೀಲರು ಕಿರಿಯಣ್ಣನ ಬದಲಾಗಿ ತನಗೆ ಪ್ರೋತ್ಸಾಹ ನಿಡುತ್ತಿದ್ದ ಹಿರಿಯ ಅಣ್ಣ ಶಿವನಗೌಡನ ಕಾಲಿಗೆ ಬಿದ್ದು ನಮಸ್ಕರಿಸಿದರು.

ಪಾಟೀಲರು ತಮ್ಮ ಅಣ್ಣನಿಗೆ ಕೊಡುತ್ತಿದ್ದ ಗೌರವವನ್ನು ತನ್ನ ತಂದೆಗಾಗಲೀ ಬೇರೆಯವರಿಗಾಗಲಿ ಕೊಡುತ್ತಿರಲಿಲ್ಲ. ಪಾಟೀಲರು ಯಾವುದೇ ಕೆಲಸವನ್ನು ಮಾಡಬೇಕಾದರೆ ತಮ್ಮ ಹಿರಿಯ ಅಣ್ಣನ ಅಪ್ಪಣೆಯನ್ನು ಪಡೆಯುತ್ತಿದ್ದರು. ಜೊತೆಗೆ ಅಣ್ಣನೂ ಸಹ ಅಷ್ಟೆ ಸಹಕರಿಸುತ್ತಿದ್ದನು. ಈ ರೀತಿಯ ನ್ಯಾಯ ಪಂಚಾಯತಿಯಿಂದಾಗಿ ತಮ್ಮ ಮಲ್ಲಿಕಾರ್ಜುನನು ಇನ್ನು ಹೆಚ್ಚುದಿನ ಊರಿನಲ್ಲಿ ಉಳಿಯುವದು ಸರಿಯಲ್ಲ ಎಂದು ತಿಳಿದುಕೊಂಡ ಶಿವನಗೌಡ ತಮ್ಮನಿಗೆ ಬುದ್ಧಿ ಹೇಳಿ ಕೆಲಸ ಹುಡುಕಿಕೊಳ್ಳಲು ತಿಳಿಸಿದರು. ಅದರಂತೆ ನಿನ್ನ ಸ್ವಭಾವದಲ್ಲಿ ಸಹನಶೀಲತೆ ಬೆಳೆಸಿಕೊಳ್ಳಬೇಕು, ಸಿಟ್ಟನ್ನು ಬಿಡು. ಈ ಊರನ್ನೆ ಬಿಟ್ಟು ನಿನ್ನ ಉದ್ಯೋಗದ

ದಾರಿಯನ್ನು ಕಂಡುಕೋ ಎಂದು ಕಣ್ಣೀರು ತುಂಬಿ ಉಪದೇಶಿಸಿ ತಮ್ಮನನ್ನು ಬೀಳ್ಕೊಟ್ಟರು. ವಿಜಾಪೂರದ ಬಾಲಕಿಯರ ಸರ್ಕಾರಿ ಪ್ರೌಢ ಶಾಲೆಯಲ್ಲಿ ಡ್ರಾಯಿಂಗ್ ಶಿಕ್ಷಕರ ಹುದ್ದೆ ತೆರವಾದಾಗ ಅದನ್ನು ದೊರಕಿಸಿಕೊಳ್ಳುವ ಸಲುವಾಗಿ ಪಾಟೀಲರು ಊರಿನ ಪ್ರಮುಖ ರಾಜಕಾರಣಿಗಳಾಗಿದ್ದ ಬಿ. ಎಂ. ಪಾಟೀಲರನ್ನು ಭೇಟಿಯಾಗಲು ಪ್ರಯತ್ನಿಸಿದರೂ ಸಾಧ್ಯವಾಗಲಿಲ್ಲ. ಮತ್ತೆ ಮರಳಿ ತಿಕೋಟಾಕ್ಕೆ ಬಂದರು.ಆದರೆ ಅವರು ಇಲ್ಲಿ ನೆಲೆ ನಿಲ್ಲುವಹಾಗಿರಲಿಲ್ಲ. ಹಾಗಾಗಿ ಧಾರವಾಡಕ್ಕೆ ಹೋಗಲು ತೀರ್ಮಾನಿಸಿದರು. ಧಾರವಾಡಕ್ಕೆ ಹೋಗುವ ಸಲುವಾಗಿ ತಂದೆಯ ಬಳಿ ಮೂವತ್ತು ರೂಪಾಯಿಗಳನ್ನು ಕೇಳಿದರು. ತಂದೆಗೆ ಮಗನ ಪ್ರತಿಭೆಯ ಬಗ್ಗೆ ಸ್ವಲ್ಪ ಅಭಿಮಾನ ಇರುವುದರಿಂದ ಪಾಟೀಲರಿಗೆ ಹಣವನ್ನು ಕೊಟ್ಟರು.

ಧಾರವಾಡಕ್ಕೆ ಹೋಗಲು ಪಾಟೀಲರು ಎಲ್ಲ ತಯಾರಿ ಮಾಡಿಕೊಂಡರು. ಅಲ್ಲಿನ ಪ್ರೌಢಶಾಲೆಯೊಂದರಲ್ಲಿ ಕಲಾಶಿಕ್ಷಕ ಹುದ್ದೆಗೆ ಸಂದರ್ಶನ ಕೊಟ್ಟರು. ಪಾಟೀಲರ ಎಲ್ಲಾ ಸರ್ಟಿಫಿಕೇಟುಗಳು, ವೃತ್ತ ಪತ್ರಿಕೆಗಳಲ್ಲಿ ಅವರ ಬಗ್ಗೆ ಬಂದ ದಾಖಲೆಗಳನ್ನೆಲ್ಲಾ ನೋಡಿದ ಇಲಾಖೆಯ ಮುಖ್ಯಸ್ಥರು ಅಲ್ಲೋ ನಿನ್ನಂಥ ಪ್ರತಿಭಾವಂತ ಕಲಾವಿದ ಇಂಥ ಸಾಮಾನ್ಯ ಡ್ರಾಯಿಂಗ್ ಟೀಚರ್ ಹುದ್ದೆಗೆ ಸೇರುವುದು ಸರಿಯಲ್ಲ ಎಂದರು. ಹೀಗೆಯೇ ಇನ್ನೊಮ್ಮೆ ವೆಟರ್ನರಿ ಕಾಂಪೌಂಡರ್ ಕೆಲಸಕ್ಕೂ ಇವರಿಗೆ ಕರೆ ಬಂತು. ಚಿತ್ರಕಲೆ ಅಭ್ಯಾಸ ಮಾಡಿ ಇಂತಹ ಚಿಕ್ಕ ಉದ್ಯೋಗದಲ್ಲಿ ನೀನು ಯಾವ ಸಾಧನೆ ಮಾಡುವೆ ಎಂದು ಹೇಳಿದ ಇವರ ಹಿರಿಯಣ್ಣ ಸಂದರ್ಶನ ಪತ್ರವನ್ನು ಸಿಟ್ಟಿನಿಂದ ಹರಿದುಹಾಕಿದರು. ಅಣ್ಣನು ಈ ಹುದ್ದೆಯನ್ನು ಅಲಂಕರಿಸುವುದು ಬೇಡ ಎಂದದ್ದು ಧಾರವಾಡದ ಶಿಕ್ಷಣ ಇಲಾಖೆಯಲ್ಲಿ ಇವರಿಗೆ ಚಿತ್ರಕಲಾ ಶಿಕ್ಷಕರಾಗಿ ನೇಮಿಸಿಕೊಳ್ಳಲು ಅಲ್ಲಿನ ಅಧಿಕಾರಿಗಳು ತೋರಿದ ನಿರಾಕರಣೆ ಬಹುಶಃ ಪಾಟೀಲರ ಬದುಕಿಗೇ ಒಂದು ಮಹತ್ವದ ತಿರುವು ಕೊಟ್ಟಿತೆಂದು ಹೇಳಬಹುದು. ಆ ಹುದ್ದೆಯನ್ನು ಹಿಡಿದಿದ್ದರೆ ಅವರ ಕಲಾಜೀವನ ಆ ಶಾಲೆಗೆ ಸೀಮಿತವಾಗುತ್ತಿತ್ತು.

ಬೇರೆ ಕೆಲಸವನ್ನು ಅರಸಿ ಪಾಟೀಲರು ಹುಬ್ಬಳ್ಳಿಗೆ ಹೊರಟರು. ಅಲ್ಲಿನ ಸ್ಟುಡಿಯೋವೊಂದರಲ್ಲಿ ಅವರಿಗೆ ಕಂಡದ್ದು ಎ. ಎ. ಅಲ್ಮೇಲ್‌ಕರ್ ಅವರ ಭಾವಚಿತ್ರ. ಆಲಮೇಲಕರ್ ಅವರು ಖ್ಯಾತ ಕಲಾವಿದರಾಗಿದ್ದು, ಬಾಲಿ, ಸುಮಾತ್ರಾ, ಸಿಂಗಪೂರ್‌ಗೆ ಹೋಗಿ ಬಂದಿದ್ದರು. ಇವರು ದಂಡಾವತಿ ಮಠರ ಶಿಷ್ಯರೂ ಆಗಿದ್ದರು. ವಿಜಾಪುರ ಜಿಲ್ಲೆಯವರಾದರೂ ಬೆಳೆದಿದ್ದು ಸೋಲ್ಲಾಪುರದಲ್ಲಿ. ಮೂರನೆಯ ಕ್ಲಾಸ್‌ವರೆಗೆ ಮಾತ್ರ ಓದಿದ್ದರೂ ಕಲೆಯ ವಿಷಯದಲ್ಲಿ ಅಗಾಧ ಸಾಧನೆ ಮಾಡಿದ ಆಲಮೇಲಕರ್ ಅಹಮದಾಬಾದ್‌ನ ಎಚ್. ಎಲ್. ಕ್ಷತ್ರಿಯವರ

ಸ್ಟುಡಿಯೋದಲ್ಲಿ ಕೆಲಸ ಮಾಡುತ್ತಿದ್ದರು. ಪಾಟೀಲರು 'ಭಾರತ ಸ್ಟುಡಿಯೋ' ಪ್ರವೇಶಿಸಿದಾಗ ಇವರನ್ನು ಬರಮಾಡಿಕೊಂಡವರು ಕಾಶಿನಾಥ ಕ್ಷತ್ರಿ, ಪಕ್ಕೂಸಾ ಕ್ಷತ್ರಿ ಹಾಗೂ ಸುಭಾಷ್ ಕ್ಷತ್ರಿ, ಅವರು ಇಲ್ಲಿ ಪಾಟೀಲರಿಗೆ ಪರಿಚಯವಾದರು. ಅಲ್ಮೇಲ್‌ಕರ್ ಅವರು ಹುಬ್ಬಳ್ಳಿಗೆ ಬಂದಾಗಲೆಲ್ಲ ಕ್ಷತ್ರಿ ಸ್ಟುಡಿಯೋದಲ್ಲಿ ತಿಂಗಳಾನುಗಟ್ಟಲೆ ಉಳಿದುಕೊಳ್ಳುತ್ತಿದ್ದರು. ಕ್ಷತ್ರಿಯವರು ಎಂ.ಬಿ.ಪಾಟೀಲರಿಗೆ ತಮ್ಮ ಭಾರತ ಸ್ಟುಡಿಯೋದಲ್ಲಿ ಕೆಲಸ ನೀಡಿದರು. ಇಲ್ಲಿ ಪಾಟೀಲರ ಕೆಲಸವೆಂದರೆ ಕಪ್ಪು ಬಿಳುಪು ಫೋಟೋಗಳಿಗೆ 'ಕಲರಿಂಗ್' ಮಾಡುವದಾಗಿತ್ತು. ಕೆಲಸವನ್ನು ನೀಡಿ ಇವರ ಊಟ ತಿಂಡಿ ಖರ್ಚನ್ನು ಪೂರೈಸಲು ಕ್ಷತ್ರಿಯವರು ಸಿದ್ಧರಾದರು. ಇಲ್ಲಿದ್ದುಕೊಂಡೆ ಪಾಟೀಲರು ಚಿತ್ರಕಲಾಕೃತಿಗಳನ್ನು ಸಹಿತ ರಚಿಸತೊಡಗಿದರು. ೧೯೬೫ನೇ ಇಸ್ವಿಯಲ್ಲಿ ಪಾಟೀಲರು ಮೊಟ್ಟಮೊದಲ ಬಾರಿಗೆ ಹುಬ್ಬಳ್ಳಿಯಲ್ಲಿ ಕಲಾಪ್ರದರ್ಶನವನ್ನು ಮಾಡಿದರು. ಈ ಪ್ರದರ್ಶನದಿಂದ ಪಾಟೀಲರಿಗೆ ಧೈರ್ಯ ಹಾಗೂ ಆತ್ಮವಿಶ್ವಾಸ ಉಂಟಾಯಿತು. ಹಾಗೂ ಏನನ್ನಾದರೂ ಸಾಧಿಸಬೇಕೆನ್ನುವ ಛಲವನ್ನು ಗಟ್ಟಿಗೊಳಿಸಿತು.

ಹುಬ್ಬಳ್ಳಿಯ ವೈದ್ಯಕೀಯ ಕಾಲೇಜು ಕಲಾವಿದರ ಹುದ್ದೆಗೆ ಅರ್ಜಿಗಳನ್ನು ಆಹ್ವಾನಿಸಿತ್ತು ಇಲ್ಲಿಗೆ ಅರ್ಜಿ ಹಾಕಿಕೊಳ್ಳುವ ಅಭ್ಯರ್ಥಿಗಳು ತಮ್ಮ ಹೆಸರನ್ನು ಉದ್ಯೋಗ ವಿನಿಮಯ ಕೇಂದ್ರದಲ್ಲಿ ಕಡ್ಡಾಯವಾಗಿ ನೋಂದಾಯಿಸಿಬೇಕಾಗಿತ್ತು. ಈ ವಿಷಯ ಪಾಟೀಲರಿಗೆ ತಿಳಿದಿರಲಿಲ್ಲ ಅಲ್ಲಿನ ಮುಖ್ಯಸ್ಥ ಡಾ. ಪಾರ್ಥಸಾರಥಿ ಹಾಗೂ ಕಾಲೇಜಿನ ಡೀನ್ ಧರ್ಮರಾಜ್ ಅವರು ಪಾಟೀಲರ ಪ್ರತಿಭೆಯನ್ನು ಮೆಚ್ಚಿಕೊಂಡರಾದರೂ ನಿಯಮದ ಪ್ರಕಾರ ಉದ್ಯೋಗ ವಿನಿಮಯ ಕೇಂದ್ರದಲ್ಲಿ ಹೆಸರನ್ನು ದಾಖಲು ಮಾಡಿಸಿದ್ದ ಬೇರೊಬ್ಬನಿಗೆ ಆ ಕೆಲಸವನ್ನು ನೀಡಿದರು. ಅಷ್ಟುಹೊತ್ತಿಗೆ ರಾಜ್ಯದ ವಾರ್ತಾ ಮತ್ತು ಪ್ರಸಾರ ಇಲಾಖೆ ಕಲಾವಿದನ ಹುದ್ದೆಗೆ ಅರ್ಜಿಯನ್ನು ಕರೆದಾಗ ಪಾಟೀಲರು ಅರ್ಜಿಯನ್ನು ಹಾಕಿದರು.

ಪಾಟೀಲರು ಆಗ ಹುಬ್ಬಳ್ಳಿಯ ಕೋಣೆಯೊಂದರಲ್ಲಿ ವಾಸವಾಗಿದ್ದರು. ಆಗ ಅವರಿಗೆ ಸಂದರ್ಶನಕ್ಕೆ ಕರೆಬಂತು, ಇಂತಹ ಒಂದು ಸಂದರ್ಭದಲ್ಲಿ ಪಾಟೀಲರಿಗೆ ಸಂದರ್ಶನಕ್ಕಾಗಿ ಹಾಜರಾಗಲು ಸರಿಯಾದ ಉಡುಪು ಇರಲಿಲ್ಲ. ಪಕ್ಕದ ಕೋಣೆಯೊಂದರಲ್ಲಿ ವಾಸವಾಗಿದ್ದ ಮಿಲಿಟರಿ ಯುವಕನನ್ನು ವಿನಂತಿಸಿಕೊಂಡು ಅವನಿಂದ ಒಳ್ಳೆಯ ಪ್ಯಾಂಟನ್ನು ಪಡೆದು ಅದನ್ನು ಧರಿಸಿ ಮೇಲೊಂದು ನಿಲುವಂಗಿ ಹಾಕಿಕೊಂಡು ಸಂದರ್ಶನಕ್ಕೆ ಹೊರಟರು. ದಾರಿಯಲ್ಲಿ ಕಾಟನ್ ಮಾರ್ಕೆಟ್‌ನಲ್ಲಿದ್ದ ಹನುಮಂತ ದೇವರ ಗುಡಿಗೆ ಹೋಗಿ ಮೊದಲ ಬಾರಿಗೆ ದೇವರಿಗೆ ನಮಸ್ಕರಿಸಿದರು. ಇದು ನನ್ನ ಸತ್ವಪರೀಕ್ಷೆ, ದೇವರೆ ನಿನಗಿಷ್ಟ ಬಂದಂತೆ ನನ್ನನ್ನು ನಡೆಸಿಕೋ

ಎಂದು ದೇವರ ಮೇಲೆ ಭಾರಹಾಕಿ ನೌಕರಿಗಾಗಿ ಸಂದರ್ಶನವನ್ನು ಕೊಟ್ಟರು. ಈ ಇಲಾಖೆಯಲ್ಲಿ ಕಲಾವಿದನ ಹುದ್ದೆಗೆ ಬಂದಿದ್ದ ಅರ್ಜಿಗಳು ಕೇವಲ ಐದು. ಮಿಕ್ಕೆಲ್ಲ ಅಭ್ಯರ್ಥಿಗಳಿಗಿಂತಲೂ ಪಾಟೀಲರು ಪ್ರತಿಭೆಯ ದೃಷ್ಟಿಯಿಂದ ಮೇಲ್ಮಟ್ಟದಲ್ಲಿದ್ದರು. ಸಂದರ್ಶನವನ್ನು ನಡೆಸಿದ ಅಧಿಕಾರಿಗಳು ಇವರ ಕಲೆಯನ್ನು ಗುರುತಿಸಿ ಮರುದಿನವೇಕೆಲಸಕ್ಕೆ ಸೇರಿಕೊಳ್ಳಲು ನೇಮಕಾತಿ ಪತ್ರಕೊಟ್ಟರು. ಎಂದು ಕೇಳಿದರು ಇಲ್ಲಿಗೆ ಅವರ ಉದ್ಯೋಗ ಬೇಟೆ ಕೊನೆಗೊಂಡು, ವೃತ್ತಿ ಬದುಕಿಗೆ ಕಾಲಿರಿಸಿದರು.



ಪಾಟೀಲರಿಗೆ ಇದು ಅತ್ಯಂತ ಅನಿರೀಕ್ಷಿತ ಪ್ರಸಂಗ. ತಮ್ಮ ಸಂತಸವನ್ನು ಮತ್ತೊಬ್ಬರೊಂದಿಗೆ ಕೂಡಲೇ ಹಂಚಿಕೊಳ್ಳಬೇಕೆನಿಸಿದಾಗ ಇವರಿಗೆ ನೆನಪಾದವರು ಬದುಕಿನುದ್ದಕ್ಕೂ ತಮ್ಮನ್ನು ಪ್ರೋತ್ಸಾಹಿಸುತ್ತಲೆ ಇದ್ದ ತಮ್ಮ ಹಿರಿಯ ಅಣ್ಣ ಶಿವನಗೌಡರು. ಪಾಟೀಲರು ಕೂಡಲೇ ಸಂತಸದ ಸುದ್ದಿಯನ್ನು ತಂತಿಯ ಮೂಲಕ ಅಣ್ಣನಿಗೆ ರವಾನಿಸಿದರು. ಅಂದು ತಿಕೋಟಾದಲ್ಲಿ ಸಂತೆಯ ದಿನ. ಪಾಟೀಲರ ಅಣ್ಣನಿಗೂ ಬಿಡುವಿಲ್ಲ. ಪಾಟೀಲರ ಮನೆತನದಲ್ಲೇ ಸರಕಾರಿ ಕೆಲಸಕ್ಕೆ ಸೇರಿದವರಲ್ಲಿ ಇವರೇ ಮೊದಲಿಗರು. ಪಾಟೀಲರ ತಂದೆ ಹಾಗೂ ತಾಯಿ ಅಂದು ಯಾವುದೋ ಕೆಲಸದ ಮೇಲೆ ದಂದರ್ಗಿಯಲ್ಲಿದ್ದರು. ಪರಿಚಯದವನ ಮೂಲಕ ಪಾಟೀಲರ ಹಿರಿಯಣ್ಣ ದಂದರ್ಗಿಯಲ್ಲಿದ್ದ ತಂದೆಗೆ ಸೋದರ ಕಳಿಸಿದ್ದ ತಂತಿಯನ್ನು ಕಳಿಸಿದಾಗ ಸರಿ ರಾತ್ರಿ. ತಾರನ್ನು ಓದುತ್ತಲೇ ತಂದೆ ಸಂತೋಷಗೊಂಡು ಹೆಂಡತಿಯ ಬಳಿಗೆ ಓಡಿದರು. ಮಗನಿಗೆ ಸರಕಾರಿ ಕೆಲಸ ದೊರಕಿದ ಸಂತಸವನ್ನು ಹಂಚಿಕೊಂಡರು.

ಪಾಟೀಲರ ತಾಯಿ ಎಂದಿಗೂ ಮಗನ ಅಭ್ಯುದಯಕ್ಕಾಗಿ ಹತ್ತಾರು ದೇವರುಗಳಿಗೆ ಹರಕೆಯನ್ನು ಹೊತ್ತಿದ್ದಾಕೆ. ನಂತರದ ದಿನಗಳಲ್ಲಿ ಮಗ ಮಲ್ಲಿಕಾರ್ಜುನ ಊರಿಗೆ ಬಂದಾಗಲೆಲ್ಲ ಮಗನೇ ನಿನ್ನ ಇಡೀ ಪಗಾರವನ್ನು ನಿಮ್ಮಮ್ಮನಿಗೆ ಕೊಟ್ಟರೂ ಸಹಿತ ಅವಳ ಹರಕೆಗೆ ಬೇಕಾದ ಖರ್ಚು ತುಂಬೋದಿಲ್ಲ ಎಂದು ತಂದೆ ಹಾಸ್ಯ ಮಾಡುತ್ತಿದ್ದುದುಂಟು.

ಪಾಟೀಲರಿಗೆ ಹುಬ್ಬಳ್ಳಿಯಲ್ಲಿ ಸರಕಾರಿ ಕೆಲಸ ದೊರಕಿ ಸಂಪಾದನೆಗೆ ವ್ಯವಸ್ಥೆಯಾದ ಕೂಡಲೇ ಅವರಲ್ಲಿನ ಒಳಮನಸ್ಸು ಕಲಾಸಂಬಂಧಿ ಕಾರ್ಯಕ್ಷೇತ್ರವನ್ನು ವಿಸ್ತರಿಸಿಕೊಳ್ಳುವುದರ ಬಗ್ಗೆ ಚಿಂತಿಸತೊಡಗಿದರು. ಅವರು ಮತ್ತಷ್ಟು ಎತ್ತರಕ್ಕೆ ಬೆಳೆಯುವ ಅವಕಾಶ ದೊರೆಯಿತು. ಆದರೆ ಹಂತ ಹಂತವಾಗಿ ಬೆಳೆಯಬೇಕಾಗಿದ್ದ ಪಾಟೀಲರಿಗೆ ಕೆಲಸ ಸಿಕ್ಕಿದ ಒಂದೇ ತಿಂಗಳಲ್ಲಿ ವಿವಾಹ ಬಂಧನ ಏರ್ಪಟ್ಟಿತು. ಇವರ ಮದುವೆ ನವೆಂಬರ್ ೧೯, ೧೯೬೫ ರಂದು ಸವದತ್ತಿ ತಾಲ್ಲೂಕಿನ ಉಗರಗೋಳದಲ್ಲಿನ ಅರ್ಚಕರ ಮಗಳು 'ಕಸ್ತೂರಿ'ಯೊಂದಿಗೆ ನಡೆಯಿತು. ಆದರೆ

ಇವರ ನಿಶ್ಚಿತಾರ್ಥವು ಪಾಟೀಲರು ಮುಂಬೈನಲ್ಲಿರುವಾಗಲೇ ನಡೆದಿತ್ತು. ಪಾಟೀಲರಿಗೆ ಉದ್ಯೋಗ ಸಿಗುವ ಹೊತ್ತಿಗಾಗಲೇ ಕಸ್ತೂರಿಯ ತಂದೆ ತೀರಿಕೊಂಡಿದ್ದರು. ಇವರ ನಾಲ್ಕು ಹೆಣ್ಣು ಮಕ್ಕಳ ಪೈಕಿ ಕಸ್ತೂರಿ ಮೂರನೆಯ ಮಗಳು. ಮಾವನವರಿಗೆ ಕಲೆಯ ಬಗ್ಗೆ ಗೌರವವಿತ್ತು. ಭಾವಿ ಅಳಿಯನ ಸ್ವಾಭಿಮಾನವನ್ನು ಅಲ್ಪಕಾಲದಲ್ಲೇ ಪರಿಚಯಿಸಿಕೊಂಡಿದ್ದರು. ಪಾಟೀಲರಿಗೆ ಉದ್ಯೋಗ ದೊರೆಯುತ್ತಿದ್ದಂತೆಯೇ ಅವರ ವಿವಾಹಕ್ಕೆ ಏರ್ಪಾಡುಮಾಡಿದಾಗ ಎಂದಿನಂತೆ ಪಾಟೀಲರ ಕೈಲಿ ಕಾಸಿಲ್ಲ. ವರದಕ್ಷಿಣೆಗೆ ವಿರೋಧವಾಗಿದ್ದರು. ತಂದೆ ಹಾಗೂ ಹಿರಿಯಣ್ಣ ಇವರ ಬಟ್ಟೆಬರೆಗೆಂದು ಕಳಿಸಿದ್ದ ೫೦೦ ರೂಪಾಯಿನಲ್ಲಿ ಒಂದು ಟೆರಿಕಾಟ್ ಪ್ಯಾಂಟ್ ಹಾಗೂ ಉಣ್ಣೆಯ ಕೋಟನ್ನು ಹೊಲಿಸಿಕೊಂಡು ವರನಾಗಿ ಸಜ್ಜುಗೊಂಡರು.ತಿಕೋಟಾದಿಂದ ೪ ಕೀ. ಮೀ. ದೂರದ ಹೊರವಲಯದಲ್ಲಿ ಇರುವ ದೇವಸ್ಥಾನ ಒಂದರಲ್ಲಿ ಪಾಟೀಲರ ವಿವಾಹವನ್ನು ಆಡಂಬರವಿಲ್ಲದಂತೆ ನೆರವೇರಿಸಲಾಯಿತು.

ಅಡವಿಯ ಮಧ್ಯದ ಈ ದೇಗುಲದಲ್ಲಿ ಆವರಣವನ್ನು ಮದುವೆಯ ಸಮಾರಂಭಕ್ಕಾಗಿ ಸ್ವಚ್ಚಗೊಳಿಸಲಾಗಿತ್ತು. ವಧುವಿನ ಕಡೆಯಿಂದ ಜನರು ಬರುವಷ್ಟರಲ್ಲಿ ಸ್ವಚ್ಚಗೊಳಿಸಿದ್ದರು. ವಧು ವರರು ಬಂದ ತಕ್ಷಣ ಅರಿಸಿಣದ ನೀರು ಮೈಮೇಲೆ ಹಾಕದೆ ಸಾಂಕೇತಿಕವಾಗಿ ಕೈಗೆ ಕಾಲಿಗೆ ಹಾಕಿ ಕೇವಲ ಅರ್ಧ ಗಂಟೆಯಲ್ಲಿ ಇವರ ಮದುವೆಯನ್ನು ಮುಗಿಸಿ, ಬಂದವರಿಗೆ ಸಜ್ಜಕ, ಅನ್ನವನ್ನು ಊಟಕ್ಕೆ ಬಡಿಸಿ ಚಕ್ಕಡಿಯಲ್ಲಿ ಊರಿಗೆ ಮರಳಿದರು. ಇಂತಹ ಆಡಂಬರವಿಲ್ಲದ ಸರಳ ಮದುವೆಯನ್ನು ಇಂದಿನ ಜನರು ಅನುಸರಿಸಬೇಕಾಗಿರುವುದು ಪ್ರಸ್ತುತದ ಅವಶ್ಯಕತೆಯಾಗಿದೆ.

ಮದುವೆ ಮುಗಿಸಿಕೊಂಡು ಮನೆಗೆ ಬಂದ ವಧು ವರರಿಗೆ ಆರತಿ ಬೆಳಗಲು ಮಹಿಳೆಯರು ಸಿದ್ದರಾಗಿದ್ದಾಗ ಪಾಟೀಲರು ಚಹಾದ ಸಣ್ಣ ಅಂಗಡಿಯ ಮುಂದೆ ನಿಂತು ಚಹಾ ಸೇವಿಸುತ್ತ ನಿಂತಿದ್ದರು. ಹೀಗೆ ಪಾಟೀಲರು ತಮ್ಮದೇ ಆದ ಲೋಕದಲ್ಲಿ ಮುಳುಗಿರುತ್ತಿದ್ದರು. ಎಂಬುದಕ್ಕೆ ಉದಾಹರಣೆಯಾಗಿದೆ. ಅವರಿಗೆ ತಮ್ಮ ವಿವಾಹದ ಕುರಿತು ಹೆಚ್ಚಿನ ಆಸಕ್ತಿ ಇರದೇ ಕಲಾಕ್ಷೇತ್ರದಲ್ಲಿ ಏನಾದರೂ ಸಾಧಿಸಬೇಕೆಂಬ ಚಿಂತೆ ಸದಾ ಕಾಡುತ್ತಿತ್ತು. ಆದರೂ ಪಾಟೀಲರ ಪರಿವಾರದವರೆಲ್ಲರೂ ಸೇರಿ ಮದುವೆಯನ್ನು ಮಾಡಿ ಸಂಸಾರದ ಭಾರವನ್ನು ವಹಿಸಿ ಹುಬ್ಬಳ್ಳಿಗೆ ಕಳುಹಿಸಿಕೊಟ್ಟರು. ಆಗ ಪಾಟೀಲರಿಗೆ ೨೫ ವಯಸ್ಸು ಇವರ ಪತ್ನಿ ಕಸ್ತೂರಿಯವರಿಗೆ ೧೮ ವಯಸ್ಸು. ಪಾಟೀಲರಿಗೆ ಸಿಗುತ್ತಿದ್ದ ೨೦೦ ರೂಪಾಯಿ ವೇತನದಲ್ಲಿ ತಿಂಗಳಿಗೆ ೧೨ ರೂಪಾಯಿ ಬಾಡಿಗೆಯಂತೆ ಪುಟ್ಟ ಮನೆಯೊಂದನ್ನು ಬಾಡಿಗೆಗೆ ತೆಗೆದುಕೊಂಡರು.

ತಂದೆಯ ಹಾಗೂ ಮಾವನ ಮನೆಯಿಂದ ಯಾವ ಸಹಾಯವಿಲ್ಲದೆ ಸಂಸಾರವನ್ನು ನಿಭಾಯಿಸಲು ಯತ್ನಿಸಿದರು.

ಪಾಟೀಲರಿಗೆ ಎರಡು ಹೊತ್ತಿನ ಊಟಬಿಟ್ಟು ಮತ್ಯಾವ ಆಡಂಬರದ ಅವಶ್ಯಕತೆ ಇದ್ದಿರಲಿಲ್ಲ ಸುತ್ತಲಿನ ಶ್ರೀಮಂತರೊಂದಿಗೆ ತಮ್ಮನ್ನು ಹೋಲಿಸಿಕೊಂಡು ಕೀಳರಿಮೆಯಿಂದ ಕೊರಗುವಂತಹ ಜಾಯಮಾನ ಇವರದಾಗಿರಲಿಲ್ಲ. ಪಾಟೀಲರ ದಾಂಪತ್ಯ ಜೀವನ ಸುಃಖಮಯವಾಗಿ ನಡೆಯಿತು. ಕಾಲ ಕಳೆದಂತೆ ಇವರಿಗೆ ಐವರು ಮಕ್ಕಳು ಹುಟ್ಟಿದರು. ಕಲಾವತಿ, ಮೀನಾಕ್ಷಿ, ಅನಿಲ್‌ಕುಮಾರ, ಜಗದೀಶ ಹಾಗೂ ವಾಣಿ ಎಂಬುದು ಇವರ ಮಕ್ಕಳ ಹೆಸರುಗಳಾಗಿವೆ. ತುರ್ತು ಪರಿಸ್ಥಿತಿಯ ಸಂದರ್ಭದಲ್ಲಿ ವಸ್ತುಪ್ರದರ್ಶನವೊಂದರ ಏರ್ಪಾಟಿಗಾಗಿ ರಾಯಚೂರಿಗೆ ತೆರಳಿದ್ದ ಎಂ. ಬಿ. ಪಾಟೀಲರು ಅಲ್ಲಿನ 'ರಾಯಚೂರ ವಾಣಿ' ಪತ್ರಿಕೆಯನ್ನು ಮೆಚ್ಚಿಕೊಂಡು ಆಗ ತಾನೇ ಜನಿಸಿದ್ದ ತಮ್ಮ ಕೊನೆಯ ಮಗಳಿಗೆ 'ವಾಣಿ' ಎಂದೇ ನಾಮಕರಣ ಮಾಡಿದರು.

**ಕಲಾ ಚಟುವಟಿಕೆಗಳು :**

ಯಾವುದೇ ಸರ್ಕಾರಿ ಇಲಾಖೆಯಲ್ಲಾಗಲಿ ಸೃಜನಶೀಲತೆಗೆ ತೀರಾ ಸೀಮಿತ ಅವಕಾಶ ಗಳಿರುತ್ತವೆ ಎಂಬುದು ಎಲ್ಲರಿಗೂ ತಿಳಿದಿರುವ ಸಂಗತಿ. ಎಂ. ಬಿ. ಪಾಟೀಲರು ಉದ್ಯೋಗದಲ್ಲಿದ್ದ ವಾರ್ತಾ ಮತ್ತು ಪ್ರಸಾರ ಇಲಾಖೆಯಲ್ಲಿ ಇಂತಹುದೇ ಪರಿಸ್ಥಿತಿ ಇತ್ತು. ಆದರೆ ಕಲಾತ್ಮಕತೆ ಸೃಜನಶೀಲತೆಗಳು ರಕ್ತಗತವಾಗಿದ್ದ ಪಾಟೀಲರು ಸರ್ಕಾರಿ ಉದ್ಯೋಗಿ ಯಾಗಿದ್ದರೂ ತಮ್ಮ ಸ್ವಂತಿಕೆಯನ್ನು ಬಿಟ್ಟುಕೊಡಲಿಲ್ಲ. ಇಲಾಖೆಯಲ್ಲಿ ನಾನಾ ರೀತಿಯ ಕರ್ತವ್ಯಗಳನ್ನು ಪೂರೈಸಬೇಕಾದಾಗಲೂ ಸಹ ವಿನೂತನ ವಿಧಾನಗಳಿಂದ ತಮ್ಮಲ್ಲಿನ ಸೃಜಶೀಲತೆಯನ್ನು ಹೊರಹಾಕಿದರು. ಇವರ ಸೃಜನಶೀಲ ಚಟುವಟಿಕೆಗಳಲ್ಲಿ ಕಲಾಕೃತಿ ರಚನೆ ಮತ್ತು ಪ್ರದರ್ಶನಗಳು ಮುಖ್ಯವಾಗಿದ್ದರೂ ನಾಟಕ, ಸಂಗೀತ, ಸಾಹಿತ್ಯಗಳಿಗೆ ಸಂಬಂಧಿಸಿದ ಕಾರ್ಯಕ್ರಮಗಳಲ್ಲಿಯೂ ಭಾಗವಹಿಸುತ್ತಲಿದ್ದರು.

ಪಾಟೀಲರು ತಮ್ಮ ವೃತ್ತಿ ಬದುಕಿನಲ್ಲಿ ಚಿತ್ರ ರಚನೆಯ ಜೊತೆಗೆ ಆಯ್ದುಕೊಂಡ ಮತ್ತೊಂದು ಸೃಜನಶೀಲ ಕಲಾ ಚಟುವಟಿಕೆ ಎಂದರೆ ಮ್ಯೂರಲ್‌ಗಳ ರಚನೆಯಾಗಿದೆ. ಪಾಟೀಲರು ರಚಿಸಿದ ಮ್ಯೂರಲ್‌ಗಳು ಕಟ್ಟಡದ ಗೋಡೆ, ಕಮಾನು, ಬಾಗಿಲು, ಜಂತಿ, ತೊಲೆ, ಹೊರಭಾಗದ ಫಲಕಗಳು ಹೀಗೆ ವಿವಿಧ ಸ್ಥಳಗಳಲ್ಲಿ ಸಂಯೋಜನೆಗೊಂಡಿವೆ. ೧೦ ಅಡಿಯಿಂದ ೪೧ ಅಡಿಯವರೆಗೂ ಈ ಮ್ಯೂರಲ್‌ಗಳನ್ನು ಮಾಡಿದ್ದಾರೆ. ಕೆಲವು ವರ್ಣಚಿತ್ರಗಳಾಗಿದ್ದರೆ, ಮತ್ತೆ

ಕೆಲವು ಭಿತ್ತಿ ಶಿಲ್ಪಗಳಾಗಿವೆ. ಇನ್ನೂ ಕೆಲವು ಮಿಶ್ರಮಾಧ್ಯಮದಲ್ಲಿವೆ. ವಾರ್ತಾ ಇಲಾಖೆಗೆ ಸಂಬಂಧಿಸಿದಂತೆ ರಾಜ್ಯ ಮತ್ತು ರಾಷ್ಟ್ರಮಟ್ಟದಲ್ಲಿ ಸ್ತಬ್ದಚಿತ್ರ (ಟ್ಯಾಬ್ಲೋ)ಮಾಡಿದ್ದಾರೆ. ರಂಗನಾಟಕಗಳಾದ ತಬರನ ಕಥೆ, ರಥಮೂಸಲ, ದೊಡ್ಡಪ್ಪ ಮುಂತಾದವುಗಳಿಗೆ ರಂಗ ಪರಿಕರಗಳನ್ನು ರಚಿಸಿಕೊಟ್ಟಿದ್ದಾರೆ. ಚಲನಚಿತ್ರಗಳಾದ ಕಿತಾಪತಿ, ಶಂಖನಾದ ಇವುಗಳಿಗೆ ಕಲಾನಿರ್ದೇಶಕರಾಗಿ ಕೆಲಸ ಮಾಡಿದ್ದಾರೆ. ಅಲ್ಲದೇ ಇತ್ತೀಚಿನ ಚಲನಚಿತ್ರ 'ಸೂರಪ್ಪ ನಾಯಕ' ಎಂಬುದಕ್ಕೆ ಪ್ರಖ್ಯಾತ ಚಲನಚಿತ್ರ ನಟ ವಿಷ್ಣುವರ್ಧನ್ ಅವರ ಪೂರ್ಣ ಪ್ರಮಾಣದ ವ್ಯಕ್ತಿ ಶಿಲ್ಪವನ್ನು ಪ್ಲಾಸ್ಟರ್ ಆಫ್ ಪ್ಯಾರೀಸ್‌ನಲ್ಲಿ ರಚನೆ ಮಾಡಿದ್ದಾರೆ. ಪಾಟೀಲರ ಕ್ರಿಯಾಶೀಲತೆಯ ಉತ್ತಮ ಉದಾಹರಣೆ ಎಂದರೆ ಬೆಂಗಳೂರಿನಲ್ಲಿ ೧೯೭೧ ರಲ್ಲಿ ರಚಿಸಿದ ಬೃಹತ್ ಮ್ಯೂರಲ್ ಆಗಿದೆ. ಇದು ೨೫ ಅಡಿ ಉದ್ದ ೮೬ ಅಡಿ ಅಗಲವಾಗಿದ್ದು ವಾರ್ತಾ ಇಲಾಖೆಯ ಅಭಿವೃದ್ಧಿ, ಸಾಧನೆಗಳನ್ನು ಬಿಂಬಿಸುತ್ತದೆ. ಇದನ್ನು ಬೆಂಗಳೂರಿನ ಸುಭಾಷ ಗ್ರೌಂಡ್‌ನಲ್ಲಿ ಏರ್ಪಟ್ಟಿದ್ದ ಕಾಂಗ್ರೆಸ್ ಅಧಿವೇಶನದಲ್ಲಿ ಪ್ರದರ್ಶನ ಮಾಡಲಾಗಿತ್ತು. ಇದು ಜನಮನ್ನಣೆ ಪಡೆಯಿತಲ್ಲದೆ ಪಾಟೀಲರ ಸೃಜಶೀಲತೆಯನ್ನು ಬೆಳಕಿಗೆ ತಂದಿತು. ಪಾಟೀಲರು ತಮ್ಮ ವೃತ್ತಿ ಜೀವನದಲ್ಲಿ ಸುಮಾರು ೩೦ ಕ್ಕೂ ಅಧಿಕ ಮ್ಯೂರಲ್‌ಗಳನ್ನು ರಚಿಸಿದ್ದಾರೆ.

**ತ್ರಿವಳಿ ಕಲಾಗುಂಪು :**

ಹುಬ್ಬಳ್ಳಿಯಲ್ಲಿ ಎಂ.ಬಿ. ಪಾಟೀಲರು, ಸುಭಾಷ್ ಕ್ಷತ್ರಿ ಹಾಗೂ ಕೆ.ಆರ್. ಸುಬ್ಬಣ್ಣ ಇವರೊಂದಿಗೆ ಕೂಡಿಕೊಂಡು 'ತ್ರಿವಳಿ ಆರ್ಟ್ ಗ್ರೂಪ್' ಎಂಬ ಹೆಸರಿನ ಕಲಾಗುಂಪನ್ನು ರಚಿಸಿಕೊಂಡು ಹಲವಾರು ಪ್ರದರ್ಶನಗಳನ್ನು ರಾಜ್ಯ ಮತ್ತು ಹೊರರಾಜ್ಯದಲ್ಲಿ ಮಾಡಿದರು. ಈ ಗುಂಪಿನ ಮೊದಲ ಪ್ರದರ್ಶನ ಹುಬ್ಬಳ್ಳಿಯಲ್ಲಿ ೧೯೭೧ ರಲ್ಲಿ ರೇಲ್ವೆ ನಿಲ್ದಾಣದ ಪಕ್ಕದ ರಸ್ತೆಯಲ್ಲಿ ಬಹಿರಂಗವಾಗಿ ನಡೆಯಿತು. ಇದು ಅಪಾರ ಜನಮನ್ನಣೆ ಪಡೆಯಿತಲ್ಲದೆ ರಾಜ್ಯ ಮತ್ತು ರಾಷ್ಟ್ರ ಮಟ್ಟದ ಪತ್ರಿಕೆಗಳು ಪ್ರಶಂಸೆ ಕೊಟ್ಟವು. ಪಾಟೀಲರ ಏಕವ್ಯಕ್ತಿ ಕಲಾ ಪ್ರದರ್ಶನವೊಂದು ಗುಲ್ಬರ್ಗಾದ ಪ್ರಾಚ್ಯವಸ್ತು ಇಲಾಖೆಯಲ್ಲಿ ನಡೆಯಿತು. ಇದರಲ್ಲಿ ಇವರ 'ಕೋಲಾಜ್' ಕೃತಿಗಳು, ಭಾವಚಿತ್ರಗಳು, ಲ್ಯಾಂಡ್ ಸ್ಕೇಪ್‌ಗಳು, ವಿಶೇಷವಾಗಿ ಬೂರ್ಖಾ ಧರಿಸಿದ ಹೆಂಗಸರ ಚಿತ್ರಗಳು, ಹಾಗೂ ಕೂಲಿ ಜನರನ್ನು ವಿವಿಧ ವಿನ್ಯಾಸಗಳಲ್ಲಿ ರಚಿಸಿದ ಕಲಾಕೃತಿಗಳಿದ್ದವು. ಇದು ಸಹಿತ ಪಾಟೀಲರಿಗೆ ಮನ್ನಣೆ ತಂದುಕೊಟ್ಟಿತು.

**ಬೃಹತ್ ಕೋಲಾಜ್ :**

ಹುಬ್ಬಳ್ಳಿಯ ವಾರ್ತಾ ಮತ್ತು ಪ್ರಚಾರ ಇಲಾಖೆಯ ಅದೀನದಲ್ಲಿ ನಡೆದ

ಬೃಹತ್ ಸಮ್ಮೇಳನ ಒಂದರಲ್ಲಿ ೧೨ ಅಡಿ ಉದ್ದ, ೪ ಅಡಿ ಅಗಲದ ಬೃಹತ್ ಕೋಲಾಜ್ ಕಲಾಕೃತಿ ರಚಿಸಿದರು. ಈ ಕಲಾಕೃತಿಯ ಮೂಲಕ ಪಾಟೀಲರು ಭಾವೈಕ್ಯವನ್ನು ಬಿಂಬಿಸಿದ್ದರು. ಅದರ ಬಗ್ಗೆ ಸಂಯುಕ್ತ ಕರ್ನಾಟಕ ವಿಸ್ತಾರವಾದ ಮಾಹಿತಿ ನೀಡಿತು. ಬಂಗ್ಲಾದೇಶದ ವಿಮೋಚನೆಯನ್ನು ಕುರಿತು ಪೋಸ್ಟರ್ ಕಲರ್ ಬಳಸಿ ಪಾಟೀಲರು ರಚಿಸಿದ ಮತ್ತೊಂದು ಚಿತ್ರ ಈ ಕಾಂಗ್ರಸ್ ಸಭೆಗೆ ಆಗಮಿಸಿದ್ದ ವರಕವಿ ದ.ರಾ.ಬೇಂದ್ರೆಯವರನ್ನು ಆಕರ್ಷಿಸಿಸಿತು. ಅವರು ತಮ್ಮ ಭಾಷಣವೇ ಅನಗತ್ಯ ಎಂದರು. ಹೀಗೆ ಪಾಟೀಲರು ಪ್ರಸಿದ್ಧ ಕವಿಗಳ ಮೆಚ್ಚುಗೆಗೂ ಪಾತ್ರವಾಗಿದ್ದಾರೆ. ಪಾಟೀಲರು ತಮ್ಮ ನಾಲ್ಕು ದಶಕಗಳ ಬಣ್ಣದ ಬದುಕಿನಲ್ಲಿ ರಾಜ್ಯದ ವಿವಿದೆಡೆ ಏಕವ್ಯಕ್ತಿ ಕಲಾಪ್ರದರ್ಶನಗಳು ಮತ್ತು ಹಲವು ಗುಂಪು ಪ್ರದರ್ಶನಗಳನ್ನು ಮಾಡಿದ್ದಾರೆ. ದೆಹಲಿಯ ನ್ಯಾಷನಲ್ ಗ್ಯಾಲರಿ ಆಫ್ ಮಾರ್ಡನ್ ಆರ್ಟ್, ಬಾಂಬೆಯ ಆರ್ಟ್ ಸೊಸೈಟಿ ಮುಂತಾದ ಪ್ರತಿಷ್ಠಿತ ಶಿಬಿರಗಳಲ್ಲಿ ನೀಡಿರುವ ಪ್ರಾತ್ಯಕ್ಷಿಕೆಗಳು ಇವರ ಕ್ರಿಯಾಶೀಲತೆಯ ಹೆಗ್ಗುರುತುಗಳಾಗಿವೆ. ಸಾಮಾನ್ಯವಾಗಿ ನಾಡಿನ ಉದ್ದಕ್ಕೂ ಪಾಟೀಲರು ಪ್ರಾತ್ಯಕ್ಷಿಕೆ ಜೊತೆಗೆ ಉಪನ್ಯಾಸವನ್ನು ನೀಡಿದ್ದಾರೆ. ತಾವು ಒಂದು ಸರಕಾರಿ ಕಚೇರಿಯಲ್ಲಿ ಇದ್ದರೂ ನಾಡಿನ ಎಲ್ಲ ಕಲಾ ವಿದ್ಯಾರ್ಥಿಗಳಿಗೆ ತಮ್ಮ ಪ್ರತಿಭೆಯ ಪರಿಚಯ ಮಾಡಿಕೊಟ್ಟಿದ್ದಾರೆ. ಪಾಟೀಲರು ದಿನನಿತ್ಯ ಸರ್ಕಾರಿ ಕೆಲಸದಲ್ಲಿ ವ್ಯಂಗ್ಯ ಚಿತ್ರಗಳನ್ನು ರಚನೆ ಮಾಡುತ್ತಿದ್ದರೂ ಮನೆಯಲ್ಲಿ ತಮ್ಮ ಸ್ವತಂತ್ರ ಕಲಾಕೃತಿಗಳನ್ನು ರಚಿಸುತ್ತಿದ್ದರು. ಇವರ ವೃತ್ತಿ ಮತ್ತು ಪ್ರವೃತ್ತಿ ಸ್ವಲ್ಪದರಲ್ಲೇ ಭಿನ್ನವಾಗಿತ್ತು. ಪಾಟೀಲರು ಕೇವಲ ಸಂಬಳಕ್ಕಾಗಿ ದುಡಿಯಲಿಲ್ಲ. ಜೀವನದಲ್ಲಿ ಏನಾದರೂ ಸಾಧಿಸಬೇಕು, ನಾಡಿಗಾಗಿ ಏನನ್ನಾದರೂ ಕಾಣಿಕೆ ಕೊಡಬೇಕೆನ್ನುವುದೇ ಇವರ ಆಸೆಯಾಗಿತ್ತು.

**ವಿಶ್ರಾಂತ ಜೀವನ**

ವೃತ್ತಿಯಿಂದ ನಿವೃತ್ತಿ ಹೊಂದಿದ ಪಾಟೀಲರು ತಮ್ಮ ಕಲಾಚಟುವಟಿಕೆಗಳನ್ನು ಮುಂದುವರಿಸುತ್ತಲೇ ಬಂದಿದ್ದಾರೆ. ವೃತ್ತಿ ಜೀವನದಲ್ಲಿ ಮಾಡಲಾಗದ ಹಲವಾರು ತಮ್ಮ ಕಲ್ಪನೆಯ ಕಲಾಕೃತಿಗಳನ್ನು ವಿಶ್ರಾಂತ ಜೀವನದಲ್ಲಿ ರಚಿಸಿದ್ದಾರೆ. ಅಲ್ಲದೆ ರಾಜ್ಯದ ಅನೇಕ ಕಲಾಶಾಲೆಗಳಲ್ಲಿ ನಿವೃತ್ತಿಯ ನಂತರವೇ ನೂರಾರು ಪ್ರಾತ್ಯಕ್ಷಿಕೆ, ಉಪನ್ಯಾಸಗಳನ್ನು ನೀಡಿದ್ದಾರೆ. ಕನ್ನಡ ವಿಶ್ವವಿದ್ಯಾಲಯ ಹಂಪಿಯಲ್ಲಿ ಸಹಿತ ಹಲವಾರು ಬಾರಿ ಪ್ರಾತ್ಯಕ್ಷಿಕೆ ಮತ್ತು ಉಪನ್ಯಾಸ ಕೊಟ್ಟಿದ್ದಾರೆ. ಕರ್ನಾಟಕ ಸರ್ಕಾರವು ಪರಿಸರ ಕುರಿತು ಬೆಂಗಳೂರಿನ ಸಿ.ಟಿ ಬಸ್‌ಗಳ ಮೇಲೆ ಮ್ಯೂರಲ್ ಚಿತ್ರ ರಚಿಸಲು ರಾಜ್ಯದಲ್ಲಿನ ೫೪ ಜನ ಕಲಾವಿದರನ್ನು ಆಯ್ಕೆ ಮಾಡಿತ್ತು. ಅದರಲ್ಲಿ ಇವರೂ ಸಹಿತ ಒಬ್ಬರಾಗಿ ಬಸ್ಸಿನ ಮೇಲೆ ಚಿತ್ರಗಳನ್ನು ರಚನೆ ಮಾಡಿದ್ದಾರೆ. ಹೀಗೆ

ಪಾಟೀಲರು ತಮ್ಮ ವಿಶ್ರಾಂತ ಜೀವನದಲ್ಲಿಯೂ ನೂರಾರು ಕಲಾಕೃತಿಗಳನ್ನು ರಚಿಸುವ ಮೂಲಕ ಸದಾ ಚಟುವಟಿಕೆಯಲ್ಲಿ ತೊಡಗಿರುತ್ತಾರೆ. ಅನೇಕ ಯುವ ಕಲಾವಿದರು ಇವರ ಮಾರ್ಗದರ್ಶನದಿಂದ ಒಳ್ಳೆಯ ಹಂತವನ್ನು ಮುಟ್ಟಿದ್ದಾರೆ. ನಿತ್ಯವೂ ಹಲವಾರು ಯುವ ಕಲಾವಿದರು, ಕಲಾವಿದ್ಯಾರ್ಥಿಗಳು ಇವರ ಮಾರ್ಗದರ್ಶನ ಹಾಗೂ ಸಲಹೆ ಸೂಚನೆಗಳಿಗಾಗಿ ಕಾಯ್ದಿರುತ್ತಾರೆ. ಅವರಿಗೆ ಮಾರ್ಗದರ್ಶನ ಮಾಡುತ್ತಲೇ ಸಾಮಾಜಿಕ ಮತ್ತು ಕಲಾತ್ಮಕ ಚಟುವಟಿಕೆಗಳಲ್ಲಿ ತೊಡಗಿಕೊಂಡಿರುತ್ತಾರೆ.

ಪಾಟೀಲರ ಇನ್ನೊಂದು ಹವ್ಯಾಸವೆಂದರೆ ಉತ್ತಮ ಸಂಗೀತ ಕೇಳುವುದು. ಅಲ್ಲದೆ ತಾವೇ ಹಾರ್ಮೋನಿಯಂ ನುಡಿಸುತ್ತ ಜಾನಪದ ಗೀತೆ, ದೇವರ ಭಜನೆಗಳನ್ನು ಹಾಡುವುದಾಗಿದೆ. ಪಾಟೀಲರು ಮುಂಬೈನಲ್ಲಿ ಇರುವಾಗ ಸವಾಯಿ ಗಂಧರ್ವರ ನಾಟಕಗಳನ್ನು ಆಸಕ್ತಿಯಿಂದ ನೋಡುತ್ತಿದ್ದರು. ಇವರು ಗಾಯನ, ನಾಟಕ ಪ್ರೀಯರು. ಮುಂಬೈನಲ್ಲಿ ಅಧ್ಯಯನ ಮಾಡುತ್ತಿದ್ದಾಗ ಉತ್ತಮ ಚಲನಚಿತ್ರಗಳನ್ನು ನೋಡುತ್ತಿದ್ದರು. ಯಾವುದೇ ಭಾಷೆ ಚಲನಚಿತ್ರಗಳಾಗಿರಲಿ, ಪೌರಾಣಿಕ, ಸಾಮಾಜಿಕ, ಐತಿಹಾಸಿಕ ಯಾವುದೇ ವಿಷಯಗಳ ಚಲನ ಚಿತ್ರಗಳಾಗಿರಲಿ ಅದು ಚನ್ನಾಗಿ ಇದ್ದರೆ ಮತ್ತೆ ಮತ್ತೆ ಹೋಗಿ ನೋಡುತ್ತಿದ್ದರು.

ಪಾಟೀಲರ ಕಲಾತ್ಮಕ ಮನಸ್ಸಿನ ಬಗ್ಗೆ ಮತ್ತೊಂದು ಸಂಗತಿ ಹೇಳಬಹುದು. ಅದೇನೆಂದರೆ, ಪಾಟೀಲರು ಯಾವಾಗಲೂ ಬಣ್ಣ ಬಣ್ಣದ ಬಟ್ಟೆಗಳನ್ನು ಧರಿಸುತ್ತಿದ್ದರು. ಯಾರಾದರೂ ಅದಕ್ಕೆ ಕಾರಣ ಕೇಳಿದರೆ ನಮಗೆ ಇಷ್ಟವಾದ ಬಣ್ಣ ಬಣ್ಣದ ಬಟ್ಟೆ ಧರಿಸುವುದರಿಂದ ಮನಸ್ಸು ಸದಾ ಉಲ್ಲಸಿತವಾಗಿರುತ್ತದೆ. ಹಾಗೂ ಬಿಳಿ ಶರ್ಟ, ಪ್ಯಾಂಟ್, ಪೈಜಾಮ್, ಹಾಕಿಕೊಳ್ಳುವುದರಿಂದ ಮನಸ್ಸು ಯಾವಾಗಲೂ ಸಮಾಧಾನ, ಶಾಂತಿ ಮತ್ತು ಆನಂದಮಯವಾಗಿರುತ್ತದೆ ಎಂದು ಹೇಳುತ್ತಾರೆ. ಇಂದಿಗೂ ಈ ಬಗೆಯ ಬಟ್ಟೆಗಳನ್ನೇ ಇವರು ಧರಿಸುತ್ತಲಿದ್ದಾರೆ.

ಪಾಟೀಲರು ಎಲ್ಲಿಗೆ ಹೋದರೂ ಅವರ ಕಿಸೆಯಲ್ಲಿ ಪೆನ್ಸಿಲ್ ಮತ್ತು ಹೆಗಲಿಗೆ ಒಂದು ಚೀಲ, ಅದರಲ್ಲಿ ಸ್ಕೆಚ್ ಬುಕ್, ಚಾರಕೋಲ್‌ಗಳು ಸದಾ ಇರುತ್ತವೆ. ತಮಗೆ ಅಂದವಾಗಿ ಕಂಡದ್ದನ್ನು ಅಲ್ಲಿಯೇ ರೇಖಾ ವಿನ್ಯಾಸದಲ್ಲಿ ಚಿತ್ರಿಸುವ ಹವ್ಯಾಸ ಇವರದಾಗಿದೆ. ಈ ಪದ್ಧತಿಯನ್ನು ಇಂದಿಗೂ ಅನುಸರಿಸಿಕೊಂಡು ಬರುತ್ತಿದ್ದಾರೆ.

ಪಾಟೀಲರು ಪರೋಪಕಾರ ಮತ್ತು ದಾಸೋಹ ತತ್ವದಲ್ಲಿ ನಂಬಿಕೆ ಇಟ್ಟವರು. ಕೊಟ್ಟಿದ್ದು ತನಗೆ ಬಚ್ಚಿಟ್ಟಿದ್ದು ಪರರಿಗೆ ಎಂಬಂತೆ ತಮ್ಮ ಕೈಲಾದ ಮಟ್ಟಿಗೆ ಇನ್ನೊಬ್ಬರಿಗೆ

ಸಹಾಯ ಮಾಡುತ್ತ ಬಂದಿದ್ದಾರೆ. 'ಮಾತು ಕಡಿಮೆ ಕೆಲಸ ಹೆಚ್ಚು' ಮಾಡಬೇಕೆಂದು ಇವರು ಯಾವಾಗಲೂ ಯುವಕರಿಗೆ ಹೇಳುತ್ತಾರೆ. ಪಾಟೀಲರು ಮಾತುಗಾರರಲ್ಲ. ಚಿತ್ರಕಲಾವಿದರು ಅನೇಕ ಸಭೆ ಸಮಾರಂಭಗಳಲ್ಲಿ ಅವರು ನನಗೆ ಭಾಷಣ ಮಾಡಲು ಬರುವುದಿಲ್ಲ. ಭಾಷಣ ಮಾಡುವದಕ್ಕೆ ಬದಲಾಗಿ ಒಂದು ಚಿತ್ರ ಬಿಡಿಸಲು ಹೇಳಿದರೆ ಪ್ರೀತಿಯಿಂದ ಚಿತ್ರಿಸಬಲ್ಲೆ ಎನ್ನುತ್ತಾರೆ. ಮನದ ಭಾವನೆಗಳನ್ನು ಚಿತ್ರಗಳ ಮೂಲಕ ಪರಿಣಾಮಕಾರಿಯಾಗಿ ಜನರಿಗೆ ತಲುಪಿಸ ಬಹುದೆಂಬುದು ಪಾಟೀಲರ ಅಭಿಪ್ರಾಯವಾಗಿದೆ.

**ಯುನಿವರ್ಸಲ್ ಕಲಾಗ್ಯಾಲರಿ :**

ಎಂ.ಬಿ.ಪಾಟೀಲರ ಕಲಾಚಟುವಟಿಕೆಗಳ ನಿರಂತರತೆ ಮತ್ತು ಕ್ರಿಯಾಶೀಲತೆಗೆ ಅವರೇ ಸ್ಥಾಪಿಸಿದ ಯುನಿವರ್ಸಲ್ ಆರ್ಟಗ್ಯಾಲರಿ ಒಂದು ಉತ್ತಮ ಉದಾಹರಣೆ. ೨೦೦೧ ರಲ್ಲಿ ಇದನ್ನು ಬೆಂಗಳೂರಿನ ಜನನಿಬಿಡ ಸ್ಥಳವಾದ ಬ್ರಿಗೇಡ್ ರಸ್ತೆಯಲ್ಲಿರುವ ಸೇಂಟ ಪೆಟ್ರಿಕ್ ಕಾಂಪ್ಲೆಕ್ಸ್‌ನ ಮೊದಲ ಮಹಡಿಯಲ್ಲಿ ಆರಂಭಿಸಿದರು. ಎಂ.ಬಿ.ಪಾಟೀಲರು ಸ್ಥಾಪಿಸಿದ ಈ ಕಲಾಗ್ಯಾಲರಿಯಲ್ಲಿ ಅವರ ಜೊತೆಗೆ ಎಂ.ಮೋಹನಸುಂದರ, ಡಾ. ಮುನಿಚಂದ್ರಶೇಖರ, ಆಲೂರು ಬಸವರಾಜ್ ಬೆನ್ನೆಲುಬಾಗಿ ಕೆಲಸ ಮಾಡುತ್ತಿದ್ದಾರೆ. ಉದಯೋನ್ಮುಖ ಕಲಾವಿದರಿಗೆ ಮತ್ತು ಸ್ಥಳೀಯ ಕಲಾವಿದರಿಗೆ ಹೆಚ್ಚು ಪ್ರಾಶಸ್ತ್ಯವನ್ನು ಇಲ್ಲಿ ನೀಡಲಾಗಿದೆ. ಸುಮಾರು ೩೦ ಕಲಾಕೃತಿಗಳನ್ನು ಒಂದೇ ಬಾರಿಗೆ ಪ್ರದರ್ಶಿಸಬಹುದಾದ ಈ ಕಿರು ಪ್ರದರ್ಶನಾಲಯ ಏಕವ್ಯಕ್ತಿ ಕಲಾಪ್ರದರ್ಶನಕ್ಕೆ ಸೂಕ್ತಸ್ಥಳವಾಗಿದೆ.

ಪಾಟೀಲರ ಕಲಾ ಬದುಕನ್ನು ಅವಲೋಕಿಸಿದಾಗ ಅನೇಕ ಕುತೂಹಲಕರವಾದ ಸಂಗತಿಗಳು ಕಂಡು ಬರುತ್ತವೆ. ಯಾವುದೇ ವ್ಯಕ್ತಿ ತನ್ನ ವೃತ್ತಿ ಬದುಕಿಗೆ ಕೊಟ್ಟಷ್ಟು ಮಹತ್ವವನ್ನು ಪ್ರವೃತ್ತಿಗಳಿಗೆ ಕೊಟ್ಟಿರುವ ನಿದರ್ಶನಗಳು ಬಹಳ ಕಡಿಮೆ ಎನ್ನಬಹುದು. ಆದರೆ ಇದಕ್ಕೆ ಅಪವಾದ ಎಂಬಂತೆ ಪಾಟೀಲರು ಸರಕಾರಿ ಇಲಾಖೆಯಲ್ಲಿ ವ್ಯಂಗ್ಯ ಚಿತ್ರಕಲಾವಿದನ ವೃತ್ತಿಯಲ್ಲಿದ್ದರೂ ಕಲಾಕೃತಿ ರಚನೆ ಮತ್ತು ಪ್ರದರ್ಶನಗಳನ್ನು ಹಮ್ಮಿಕೊಳ್ಳುವ ಪ್ರವೃತ್ತಿಯಲ್ಲಿ ತಮ್ಮನ್ನು ಹೆಚ್ಚಾಗಿ ತೊಡಗಿಸಿಕೊಂಡಿದ್ದು ಕಂಡು ಬರುತ್ತದೆ.

ಸರಕಾರಿ ಉದ್ಯೋಗದಲ್ಲಿದ್ದರೂ ಕಲಾಕ್ಷೇತ್ರದಲ್ಲಿ ಇಂತಹ ಅಗಾಧ ಸಾಧನೆ ಮಾಡಿರುವುದು ಪಾಟೀಲರ ಹಿರಿಮೆಯಾಗಿದೆ. ಹಿರಿಯ ಕಲಾವಿದರು ಯುವಕಲಾವಿದರನ್ನು ನೋಡುವ ದೃಷ್ಟಿಕೋನವೆ ಬೇರೆಯಾಗಿರುತ್ತದೆ. ಯುವಕರನ್ನು ಪ್ರೋತ್ಸಾಹಿಸುವುದು ಇನ್ನೂ ಕಡಿಮೆ. ಆದರೆ ಎಂ.ಬಿ. ಪಾಟೀಲರು ಇದಕ್ಕೆ ಅಪವಾದವಾಗಿ ನಿಲ್ಲುತ್ತಾರೆ. ಯುವ ಕಲಾವಿದರನ್ನು

ತಾವೆ ಕರೆದು ಮಾತನಾಡಿಸುವುದು, ಅವರಿಗೆ ಪ್ರೋತ್ಸಾಹ ನೀಡುವುದು, ಅವರ ಕಲಾ ರಚನೆಯಲ್ಲಿರುವ ನ್ಯೂನತೆಗಳನ್ನು ತಿದ್ದಿ ಹೇಳುವುದು, ಅವರ ಆಸಕ್ತಿಯ ಕ್ಷೇತ್ರದಲ್ಲಿ ಮುಂದುವರೆಯಲು ಸಲಹೆ ನೀಡುವಂತಹ ಕ್ರಮಗಳನ್ನು ಪಾಟೀಲರು ಇಂದಿಗೂ ಅನುಸರಿಸಿಕೊಂಡು ಬರುತ್ತಲಿದ್ದಾರೆ. ಹಿರಿಯ ಕಲಾವಿದರೆಂಬ ಹಮ್ಮು ಬಿಮ್ಮುಗಳು ಇರದ ಸರಳ ಮತ್ತು ಸಜ್ಜನಿಕೆಯ ವ್ಯಕ್ತಿ ಪಾಟೀಲರಾಗಿದ್ದಾರೆ.

ಎಂ. ಬಿ. ಪಾಟೀಲರು ಕರ್ನಾಟಕದ ಬಹುಮಟ್ಟಿನ ಕಲಾಶಾಲೆಗಳಿಗೆ ಭೇಟಿನೀಡಿ ಕಲಾಪ್ರಾತ್ಯಕ್ಷಿಕೆ ಹಾಗೂ ಉಪನ್ಯಾಸಗಳನ್ನು ನೀಡಿದ್ದಾರೆ. ಕೆಲವು ಸಂದರ್ಭದಲ್ಲಿ ಕಲಾ ಶಾಲೆಗಳ ಆಹ್ವಾನದ ಮೇರೆಗೆ ಹೋಗಿ ಪ್ರಾತ್ಯಕ್ಷಿಕೆಗಳನ್ನು ನೀಡಿದರೆ ಮತ್ತೆ ಕೆಲವು ಸಂದರ್ಭದಲ್ಲಿ ಸಹಜವಾಗಿ ತಾವೇ ಕಲಾ ಶಾಲೆಗೆ ತೆರಳಿ ಅಲ್ಲಿನ ಕಲಾ ವಿದ್ಯಾರ್ಥಿಗಳನ್ನು ಪ್ರೋತ್ಸಾಹಿಸುವ ನಿಟ್ಟಿನಲ್ಲಿ ಕಲಾಪ್ರಾತ್ಯಕ್ಷಿಕೆ ಹಾಗೂ ಉಪನ್ಯಾಸಗಳನ್ನು ನೀಡಿದ್ದಾರೆ. ಕಲಾ ಶಾಲೆಯ ಮಕ್ಕಳಿಗೆ ಭಾವಚಿತ್ರ ಹಾಗೂ ಸಂಯೋಜನಾ ಚಿತ್ರದ ಮಹತ್ವ ತಿಳಿಸಿ ಪ್ರಾಯೋಗಿಕವಾಗಿ ಮನದಟ್ಟು ಮಾಡಿಕೊಡುತ್ತಾರೆ. ಇದು ಅವರಲ್ಲಿನ ಅಪರೂಪದ ಗುಣ.

ಎಂ. ಬಿ. ಪಾಟೀಲರಲ್ಲಿ ಅಗಾಧವಾದ ಕಲಾ ಪ್ರತಿಭೆ ಇದೆ. ಅವರು ಕಲಾ ಜಗತ್ತಿಗೆ ಅದ್ವಿತೀಯವಾದುದನ್ನು ನೀಡಬಹುದಾಗಿತ್ತು. ಅದು ಅವರಿಂದ ಸಾಧ್ಯವಾಗಲಿಲ್ಲ ಎಂದು ಕೆಲವರು ವಾದಿಸುತ್ತಾರೆ. ಈ ಮಾತನ್ನು ಒಪ್ಪುವಹಾಗಿಲ್ಲ. ಇದಕ್ಕೆ ರಾಮಕೃಷ್ಣ ಪರಮಹಂಸರು ಮತ್ತು ವಿವೇಕಾನಂದರ ಉದಾಹರಣೆಯನ್ನು ಕೊಡಬಹುದು. ರಾಮಕೃಷ್ಣ ಪರಮಹಂಸರು ಅದ್ವಿತೀಯ ಸಾಧಕರು, ಮಹಾನ್ ವ್ಯಕ್ತಿತ್ವ ಹೊಂದಿದ ಧಾರ್ಮಿಕ ಪುರುಷರೂ ಆಗಿದ್ದರು. ಆದರೆ ಭಾರತ ಮತ್ತು ವಿಶ್ವದ ಧಾರ್ಮಿಕ ಇತಿಹಾಸದಲ್ಲಿ ಸ್ವಾಮಿ ವಿವೇಕಾನಂದರು ಸಾಧಿಸಿದ ಕಾರ್ಯವನ್ನು ಅವರು ಸಾಧಿಸಲಿಲ್ಲ. ಇದರಿಂದ ಧಾರ್ಮಿಕ ಕ್ಷೇತ್ರಕ್ಕೆ ವಿಶಿಷ್ಠ ಕೊಡುಗೆ ನೀಡುವ ಸಾಮರ್ಥ್ಯ ರಾಮಕೃಷ್ಣ ಪರಮಹಂಸರಿಗೆ ಇರಲಿಲ್ಲ ಎಂದಲ್ಲ. ಅವರು ತಮ್ಮಲ್ಲಿರುವ ಅಗಾಧವಾದ ಪಾಂಡಿತ್ಯ, ಜ್ಞಾನ, ತಿಳುವಳಿಕೆ ಎಲ್ಲವನ್ನು ಸ್ವಾಮಿ ವಿವೇಕಾನಂದರಿಗೆ ಧಾರೆ ಎರೆದು ಆ ಮೂಲಕ ತಮ್ಮ ಕಾರ್ಯವನ್ನು ಪೂರೈಸಿದರು. ಹಾಗೆ ಪಾಟೀಲರು ಕರ್ನಾಟಕದ ಕಲಾಕ್ಷೇತ್ರದಲ್ಲಿ ಅಪಾರ ಅನುಭವ ಹೊಂದಿದ ಜ್ಞಾನವಂತರಾಗಿದ್ದು, ಎಲ್ಲ ಕಾರ್ಯವನ್ನು ತಾವೇ ಮಾಡದೆ ತಮ್ಮ ಜ್ಞಾನ ಮತ್ತು ಅನುಭವಗಳನ್ನು ಯುವಕರಿಗೆ ಧಾರೆ ಎರೆಯುತ್ತಲಿದ್ದಾರೆ. ಈ ಮೂಲಕ ಕಲಾಕ್ಷೇತ್ರದಲ್ಲಿ ತಾವು ಅಂದುಕೊಂಡದ್ದನ್ನು ಸಾಧಿಸಲು ಪ್ರಯತ್ನಿಸುತ್ತಿದ್ದಾರೆ.

ಕಲಾವಿದ ಚಿತ್ರರಚನೆ ಮಾಡುವುದು ಆನಂದಾನುಭವದ ಹಿನ್ನೆಲೆಯನ್ನು

ಹೊಂದಿದ್ದರೂ ಅದರಲ್ಲಿ ಸಮಾಜದ ನೈತಿಕತೆಯ ಮೌಲ್ಯಗಳು ಅಡಗಿವೆ. ಪಾಟೀಲರು ಸಮಾಜದ ನೈತಿಕ ಮೌಲ್ಯಗಳನ್ನು ಮುರಿಯುವ ಅಥವಾ ಸಾಮರಸ್ಯ ಸಹಬಾಳ್ವೆಗೆ ಭಂಗತರುವ ಕಲಾಕೃತಿಗಳನ್ನು ಎಂದಿಗೂ ರಚಿಸಲಿಲ್ಲ. ಹಾಗಾಗಿ ಕಲೆಯ ಮೂಲಕ ಸಮಾಜಕ್ಕೆ ಒಳ್ಳೆಯ ಸಂದೇಶವನ್ನು ನೀಡಿದ ಸಾಮಾಜಿಕ ಜವಾಬ್ದಾರಿ ಹೊಂದಿದ ವ್ಯಕ್ತಿಯಾಗಿ ಪಾಟೀಲರು ಹೆಚ್ಚು ಪ್ರಸ್ತುತರಾಗುತ್ತಾರೆ ಎಂಬುದು ಇವರ ಕಲಾಬದುಕನ್ನು ಅವಲೋಕಿಸಿದಾಗ ತಿಳಿದು ಬರುವುದು.

ಕಲಾವಿದ ಪ್ರಸ್ತುತ ದಿನಮಾನಗಳಿಗೆ ಸ್ಪಂದಿಸಬೇಕಾಗುತ್ತದೆ. ಹಿಂದಿನ ಸಂಪ್ರದಾಯ, ಪರಂಪರೆ ಎಂಬ ನಿಲುವುಗಳಿಗೆ ಅಂಟಿಕೊಂಡರೆ ಪ್ರವಾಹದ ಸೆಳೆತದಲ್ಲಿ ಆತ ಒಂದಾಗಿ ಸಾಗಲಾರ ಪಾಟೀಲರು ಹಳ್ಳಿಯ ಪರಿಸರ ಪರಂಪರೆ, ಕೋಳಿ ಎಂದು ಹಿಂದಿನ ವಿಷಯಗಳನ್ನೆ ಇಂದಿಗೂ ಚಿತ್ರಿಸುತ್ತಲಿದ್ದಾರೆ. ಹಾಗಾಗಿ ಅವರು ಇಂದಿನ ದಿನಗಳಲ್ಲಿ ಹೆಚ್ಚು ಪ್ರಸ್ತುತರಾಗುವುದಿಲ್ಲ ಎಂದು ಕೆಲವರು ಅಭಿಪ್ರಾಯ ವ್ಯಕ್ತಪಡಿಸುತ್ತಾರೆ. ಆದರೆ ಸೂಕ್ಷ್ಮವಾಗಿ ಅವಲೋಕಿಸಿದಾಗ ವಿವಿಧ ರೀತಿಯ ಆಧುನಿಕ ಕೃತಿಗಳ ಜೊತೆಗೆ ಸುತ್ತಮುತ್ತಲಿನ ಪ್ರೇಕ್ಷಣೀಯ ಸ್ಥಳಗಳು, ಹೊರನಾಡು, ಕೊಲ್ಲೂರುಗಳಂತಹ ನಿಸರ್ಗದ ರಮಣೀಯ ಪ್ರದೇಶಗಳ ಚಿತ್ರಣವನ್ನು ಪಾಟೀಲರು ರಚಿಸಿದ್ದನ್ನು ನೆನಪಿಸಿಕೊಳ್ಳಬಹುದು. ಅವರ ಕಲಾ ಬದುಕು, ನಿರಂತರ ಕಲಾಕೃತಿಯ ರಚನೆ, ಶ್ರಮವರಿಯದ ದುಡಿಮೆ ಇವೆಲ್ಲ ಇಂದಿನ ಯುವಕರಿಗೆ ಸ್ಫೂರ್ತಿಯಾಗಿವೆ. ತಮ್ಮ ಕಲಾಬದುಕಿನಲ್ಲಿ ಪಾಟೀಲರು ಕರ್ನಾಟಕದ ಅನೇಕ ಹಿರಿಯ ಕಲಾವಿದರೊಂದಿಗೆ ನಿಕಟ ಸಂಪರ್ಕಹೊಂದಿದ್ದಾರೆ. ಅಂತಹ ಕಲಾವಿದರಲ್ಲಿ ರಾಮಚಂದ್ರನ್ ಅವರು ಒಬ್ಬರಾಗಿದ್ದಾರೆ.

ಪಾಟೀಲರು ಹೆಚ್ಚು ಪ್ರಮಾಣದಲ್ಲಿ ಕಲಾಕೃತಿಯನ್ನು ರಚಿಸುವಂತೆ ಕಲೆಯ ಕುರಿತು ಮಾತುಗಳನ್ನು ಆಡುತ್ತಾರೆ. ಇದು ಒಂದು ರೀತಿಯ ಸಮತೋಲನ ಸ್ಥಿತಿ ಎನ್ನಬಹುದು. ಕಾರಣ ಕರ್ನಾಟಕದ ಬಹುಮಟ್ಟಿನ ಹಿರಿಯ ಕಲಾವಿದರು ಸಾಕಷ್ಟು ಪ್ರಮಾಣದಲ್ಲಿ ಕಲಾಕೃತಿಗಳನ್ನು ರಚಿಸುತ್ತಾರಾದರೂ ಅವುಗಳ ಕುರಿತು ಮಾತನಾಡಲು ಹೇಳಿದರೆ ನಮ್ಮ ಕಲಾಕೃತಿಯೇ ಎಲ್ಲವನ್ನು ಹೇಳುತ್ತದೆ ಎಂದು ಕಾರಣ ಕೊಡುತ್ತಾರೆ. ಆದರೆ ಪಾಟೀಲರು ಕಲಾಕೃತಿ ರಚನೆಯ ಜೊತೆಗೆ ಮಾತನಾಡುವುದನ್ನು ರೂಢಿಸಿಕೊಂಡಿರುವುದು ಮಹತ್ವದ್ದಾಗಿದೆ. ಇಂತಹ ಸಾಮರ್ಥ್ಯ ದಿವಂಗತ ಆರ್. ಎಂ. ಹಡಪದ ಅವರಲ್ಲಿದ್ದುದನ್ನು ಗಮನಿಸಬಹುದು.

ಓದಿನ ತಿಳುವಳಿಕೆಗಳಿಗಿಂತ ಅನುಭವದ ಜ್ಞಾನ ಹೆಚ್ಚು ಪ್ರಭಾವಶಾಲಿಯಾಗಿದ್ದು, ಅನುಭವಿಗಳಿಂದ ಪಾಠಕಲಿಯಬೇಕು ಕಲಾಕ್ಷೇತ್ರದಲ್ಲಿ ಅಪಾರ ಅನುಭವ ಹೊಂದಿದ ಪಾಟೀಲರ ಪ್ರತಿಮಾತುಗಳು ಒಂದೊಂದು ಕಲಾಪಾಠದ ಪರಿಣಾಮವನ್ನು ಬೀರುತ್ತವೆ. ಅವರ ಮಾತುಗಳಿಂದ

ಅವರ ಕಲಾಕೃತಿಗಳಿಂದ ಸಾಕಷ್ಟು ವಿಷಯಗಳನ್ನು ಕಲಿತು ಕೊಳ್ಳಬಹುದು. ಇಪ್ಪತ್ತೈದು ವರ್ಷಗಳಿಂದ ಪಾಟೀಲರೊಡನೆ ಒಡನಾಟವಿದೆ. ಇಂತಹ ಇಳಿ ವಯಸ್ಸಿನಲ್ಲಿಯೂ ಅವರು ಯುವಕರನ್ನು ನಾಚಿಸುವ ರೀತಿಯಲ್ಲಿ ಕಲಾಕೃತಿ ರಚಿಸುತ್ತಾರೆ. ಅಲ್ಲದೆ ಪ್ರತಿ ಹಂತದಲ್ಲಿ ಅವರ ಕೃತಿರಚನೆಯಲ್ಲಿ ಹೊಸತನ ಇರುವುದನ್ನು ಗಮನಿಸಬಹುದು. ಇಪ್ಪತ್ತೈದು ವರ್ಷಗಳ ಹಿಂದಿನ ಅವರ ಕೃತಿಗಳಿಗೂ ಇಂದು ರಚಿಸುತ್ತಿರುವ ಕೃತಿಗಳಿಗೂ ಬಹಳಷ್ಟು ಪರಿವರ್ತನೆಗಳು ಕಂಡು ಬರುತ್ತವೆ. ಕಾಲದೊಂದಿಗೆ ನಿರಂತರವಾಗಿ ಇವರ ಕಲಾಬದುಕು ಬದಲಾಗುತ್ತ ಬಂದಿದೆ. ಕರ್ನಾಟಕದ ಹಿರಿಯ ಕಲಾವಿದರಲ್ಲಿ ಪರಿಣಾಮಕಾರಿಯಾಗಿ ಹೆಚ್ಚಿನ ಪ್ರಮಾಣದಲ್ಲಿ ಕಲಾಕೃತಿಗಳನ್ನು ರಚಿಸುತ್ತ ಕ್ರಿಯಾಶೀಲವಾಗಿರುವವರಲ್ಲಿ ಪಾಟೀಲರು ಪ್ರಮುಖರಾಗಿದ್ದಾರೆ.

ಅವರ ಕಲಾರಚನೆಯಲ್ಲಿ ಗಟ್ಟಿತನವಿದೆ. ವಾರ್ತಾ ಮತ್ತು ಪ್ರಚಾರ ಇಲಾಖೆಯಲ್ಲಿದ್ದುಕೊಂಡು ಇಷ್ಟುಕೆಲಸ ಮಾಡಿರುವುದು ಒಂದು ದೊಡ್ಡ ಕೊಡುಗೆ. ಅವರು ಕೇವಲ ಕಲಾವಿದರಾಗಿ ಕೆಲಸ ಮಾಡಿದ್ದರೆ ಕರ್ನಾಟಕದ ಕಲಾಕ್ಷೇತ್ರಕ್ಕೆ ಇನ್ನೂ ಗಮನಾರ್ಹ ಕೊಡುಗೆ ಪಾಟೀಲರಿಂದ ಕೊಡಲ್ಪಡುತ್ತಿತ್ತು.

ಕಮಲಾಬಾಯಿಯವರು ಪಾಟೀಲರ ಕುಟುಂಬದ ಹಿರಿಯ ಸೊಸೆ, ಎಂ. ಬಿ. ಪಾಟೀಲರ ಮೇಲೆ ಅತ್ಯಂತ ಪ್ರೀತಿ ಮಮತೆ ಹೊಂದಿದ್ದ ಹಿರಿಯಣ್ಣ ಶಿವನಗೌಡರ ಪತ್ನಿ. ಅವಳು ಸಹಿತ ಮೈದುನನ ಮೇಲೆ ಅಪಾರ ಮಮತೆ, ಪ್ರೀತಿ, ಹೊಂದಿದವರಾಗಿದ್ದರು. ಕಮಲಾಬಾಯಿ ಮನೆಗೆ ಬಂದಾಗ ಎಂ. ಬಿ. ಪಾಟೀಲರು ಕೇವಲ ಎಂಟು ವರ್ಷದ ಬಾಲಕನಾಗಿದ್ದರು. ಹಾಗಾಗಿ ಮಗನಂತೆ ಆತನನ್ನು ಸಾಕಿ ಸಲುಹಿದರು. ಮಾವನವರ ಶಿಸ್ತು, ಕಟ್ಟುನಿಟ್ಟಿನ ನಿಯಮಗಳ ಮಧ್ಯದಲ್ಲಿಯೂ ಆಗಾಗ ಅವರ ಕಣ್ತಪ್ಪಿಸಿ ಊಟ, ತಿಂಡಿ, ತಿನಿಸುಗಳನ್ನು ಬಾಲಕನಿಗೆ ಕೊಡುತ್ತಿದ್ದರು.

ಎಂ. ಬಿ. ಪಾಟೀಲರಿಗೆ ಕಷ್ಟಗಳನ್ನು ಸಹಿಸಿಕೊಳ್ಳುವ ಗುಣ ಚಿಕ್ಕಂದಿನಿಂದಲೇ ರೂಢಿಯಾಗಿತ್ತು. ಬಾಲಕನಾಗಿದ್ದಾಗ ಶಾಲೆಯಲ್ಲಿ ಓದುಬರಹದಲ್ಲಿ ಹಿಂದಿದ್ದ ಕಾರಣಕ್ಕಾಗಿ ಶಿಕ್ಷಕರು, ಹೊಡೆಯುತ್ತಿದ್ದರು, ಮನೆಯಲ್ಲಿ ಅವರ ತಂದೆಯವರು ಹೊಡೆಯುವುದರ ಜೊತೆಗೆ ಬಯ್ಯುತ್ತಿದ್ದರು. ಕೊನೆಗೆ ಆತನನ್ನು ದಂದರ್ಗಿಗೆ ದನಕಾಯಲು ಕಳಿಸಿದರು. ಹೀಗೆ ಚಿಕ್ಕವನಿರುವಾಗಿನ ಕಷ್ಟಗಳು ಒಂದು ರೀತಿಯಾದರೆ ಮುಂದೆ ಕಲಾ ಶಿಕ್ಷಣ ಪಡೆಯಲು ಮುಂಬೈಗೆ ತೆರಳಿದ ಮೇಲೆ ಅಲ್ಲಿ ಆತ ಅನುಭವಿಸಿದ ತೊಂದರೆಗಳು ನೂರಾರು ಹೈಸ್ಕೂಲ್ ಶಿಕ್ಷಣಕ್ಕಾಗಿ ಬಿಜಾಪುರಕ್ಕೆ ಹೋಗುವಾಗಲೂ ಕಷ್ಟದ ಜೀವನವೇ ಇವರದಾಗಿತ್ತು. ಮುಂಬೈನಲ್ಲಿ

ಕಲಾಶಿಕ್ಷಣದ ಅವಧಿಯಲ್ಲಿ ಕೆಲವು ಸಂದರ್ಭಗಳಲ್ಲಿ ಉಪವಾಸವಿದ್ದು ಕೇವಲ ನೀರು ಕುಡಿದು ಜೀವನ ಸಾಗಿಸಿದ್ದಾರೆ. ಹಣದ ಅವಶ್ಯಕತೆ ಇದ್ದಾಗ ಎಂ. ಬಿ. ಪಾಟೀಲರು ಅವರ ತಂದೆಗೆ ಪತ್ರ ಬರೆಯದೇ ತಮ್ಮ ಅಣ್ಣ ಶಿವನಗೌಡರಿಗೆ ತಿಳಿಸುತ್ತಿದ್ದರು. ಅವರು ತಮ್ಮ ಹತ್ತಿರ ಇಲ್ಲದಿದ್ದರೂ ಯಾರಿಂದಲಾದರೂ ಕೇಳಿ ಪಡೆದುಕೊಂಡು ತಮ್ಮನಿಗೆ ಹಣ ಕಳಿಸುತ್ತಿದ್ದರು. ಒಂದು ಸಲ ಮನೆಯಲ್ಲಿನ ರೆಡಿಯೋ ಮಾರಿ ತಮ್ಮನಿಗೆ ಹಣ ಕಳಿಸಿದ್ದಾರೆ. ಸಮಯಕ್ಕೆ ಸರಿಯಾಗಿ ಹಣ ತಲುಪದೆ ಇದ್ದಾಗ ಮುಂಬೈನಲ್ಲಿ ಯಾರ ಹತ್ತಿರವೂ ಕೇಳದೆ ಸ್ವಾಭಿಮಾನದಿಂದ ಉಪವಾಸ ಇರುವುದನ್ನು ಪಾಟೀಲರು ರೂಢಿಸಿಕೊಂಡಿದ್ದರು. ಒಮ್ಮೆ ತೀರಾ ಅವಶ್ಯವಾಗಿ ಹಣ ಬೇಕಾದಾಗ ತಮ್ಮಲ್ಲಿರುವ ಚಿನ್ನದ ಉಂಗುರವನ್ನು ಮಾರಿದ್ದನ್ನು ನೆನಪಿಸಿಕೊಳ್ಳುತ್ತಾರೆ. ಶಿವನಗೌಡರು ತಮ್ಮನನ್ನು ಎಂದಿಗೂ ಹೊಡೆದಿಲ್ಲ ಮತ್ತು ಎಂದಿಗೂ ಒಂದು ಮಾತನ್ನು ಆಡಿದವರಲ್ಲ. ತಮ್ಮ ಹೆಂಡತಿ, ಮಕ್ಕಳು ಎಂಬುದಕ್ಕಿಂತ ತಮ್ಮಂದಿರ ಒಳಿತಿಗಾಗಿಯೇ ಜೀವನ ಸವೆಸಿದ ಶಿವನಗೌಡರ ಬಗ್ಗೆ ಎಂ. ಬಿ. ಪಾಟೀಲರಿಗೆ ಅಪಾರ ಅಭಿಮಾನವಿತ್ತು. ಅಣ್ಣನು ಹೇಳಿದ ಯಾವ ಮಾತನ್ನು ಮೀರುತ್ತಿರಲಿಲ್ಲ. ಹೊಲ ಮನಿ ಇದೆ ಅದನ್ನು ಮಾಡಿಕೊಂಡು ಹೋಗಿರಿ, ಶಾಲೆ, ಶಿಕ್ಷಣ ಎಂದು ಹಾಳಾಗಬೇಡಿ ಎಂದು ತಂದೆಯವರು ಹೇಳುತ್ತಿದ್ದರೆ, ಮನೆಯಲ್ಲಿ ಯಾರಾದರೂ ಹೆಚ್ಚಿನ ಶಿಕ್ಷಣ ಪಡೆಯಬೇಕೆಂದು ಶಿವನಗೌಡರ ಆಸೆಯಾಗಿತ್ತು. ಹಾಗಾಗಿ ತಮ್ಮನಾದ ಎಂ. ಬಿ. ಪಾಟೀಲರಿಗೆ ಎಲ್ಲ ರೀತಿಯ ಸಹಾಯ ಸಹಕಾರವನ್ನು ಶಿವನಗೌಡರು ನೀಡುತ್ತಿದ್ದರು.

ಎಂ. ಬಿ. ಪಾಟೀಲರು ಚಿಕ್ಕವರಿರುವಾಗ ಇದ್ದಂತಹ ಗೌರವ, ಆದರ, ಪ್ರೀತಿಗಳನ್ನು ತಮ್ಮ ಅತ್ತಿಗೆ ಕಮಲಾಬಾಯಿಯವರ ಬಗ್ಗೆ ಇಂದಿಗೂ ಹೊಂದಿದ್ದಾರೆ. ಅಂದು ಅವರ ತ್ಯಾಗ, ಮಮತೆ, ಪ್ರೀತಿಗಳಿಂದಾಗಿ ಇಂದು ಉನ್ನತ ಗೌರವ ಹೊಂದಿದ ವ್ಯಕ್ತಿಯಾಗಿದ್ದೇನೆಂದು ಹೇಳುತ್ತಾರೆ. ಕಮಲಾಬಾಯಿ ಹಾಗೂ ಅವರ ಪತಿ ಶಿವನಗೌಡರು ತಮ್ಮ ಸ್ವಂತ ಮಕ್ಕಳಿಗಿಂತ ಹೆಚ್ಚಾಗಿ ತಮ್ಮಂದಿರ ಒಳಿತಿಗಾಗಿ ಜೀವ ಸವೆಸಿದರು. ಸ್ವಂತಕ್ಕಾಗಿ ಏನೊಂದೂ ಆಸ್ತಿ ಮಾಡಿಕೊಳ್ಳದ ಶಿವನಗೌಡರು ತ್ಯಾಗ ಜೀವನ ನಡೆಸಿದರು. ಅದಕ್ಕೆ ಮಡದಿ ಕಮಲಾಬಾಯಿ ಜೊತೆಯಾಗಿ ಹೊಂದಾಣಿಕೆ ಜೀವನಸಾಗಿಸಿದರು.

ಎಂ. ಬಿ. ಪಾಟೀಲರು ಕಲಾಶಿಕ್ಷಣ ಮುಗಿಸಿಕೊಂಡು ಬಂದು ಹಳ್ಳಿಯಲ್ಲಿ ಕೆಲದಿನಗಳು ಕೆಲಸವಿಲ್ಲದೆ ತಿರುಗಾಡುತ್ತಿದ್ದಾಗ, ಅವರ ತಂದೆಯವರು ಮತ್ತೆ ಬಯ್ಯುವುದು ಹೀಯಾಳಿಸುವುದನ್ನು ಮಾಡತೊಡಗಿದರು. ಕೆಲಸಕ್ಕೆ ಬಾರದ ಶಾಲೆ ಕಲಿತು ಹಣವನ್ನು ಹಾಳುಮಾಡಿದೆ ಎಂದು ನಿಂದಿಸುತ್ತಿದ್ದರು. ಮೈದುನನ ಈ ತೊಂದರೆಯನ್ನು ಕಂಡ ಕಮಲಾಬಾಯಿ

ಬಹಳ ನೊಂದುಕೊಳ್ಳುತ್ತಿದ್ದಳು. ಇದರಿಂದಾಗಿ ಮೈದುನನಿಗೆ ಒಂದು ನೌಕರಿ ಸಿಕ್ಕರೆ 'ಗಲ್ಲೀಪು' ಹಾಕಿಸುತ್ತೇನೆ ಎಂದು ದೇವರಿಗೆ ಬೇಡಿಕೊಂಡಳು. ಅದಕ್ಕೆ ಪ್ರತಿಫಲವೆಂಬಂತೆ ಕೆಲವೆ ದಿನಗಳಲ್ಲಿ ಎಂ. ಬಿ. ಪಾಟೀಲರಿಗೆ ಹುಬ್ಬಳ್ಳಿಯಲ್ಲಿ ನೌಕರಿ ದೊರಕಿತು. ಆದರೆ ಕೆಲಸದ ನಿರಂತತೆಯಲ್ಲಿ ದೇವರಿಗೆ ಬೇಡಿಕೊಂಡ ಹರಕೆಯನ್ನು ತೀರಿಸಲು ಕಮಲಾಬಾಯಿಗೆ ಬೇಗ ಸಾಧ್ಯವಾಗಲಿಲ್ಲ. ಅಂತಹ ಸಂದರ್ಭದಲ್ಲಿ ಕಮಲಾಬಾಯಿಯ ಸ್ವಂತ ಮಗನಿಗೆ ಕಾಯಿಲೆ ಉಂಟಾಯಿತು ಎಷ್ಟು ಔಷಧಿ ಕೊಡಿಸಿದರೂ ಕಡಿಮೆಯಾಗಲಿಲ್ಲ. ಆಗ ದೇವರ ವಾಕ್ಯ ಹೇಳುವವರೊಬ್ಬರು ನೀವು ದೇವರಿಗೆ ಬೇಡಿಕೊಂಡ ಹರಕೆಯನ್ನು ತೀರಿಸದೇ ಇರುವ ಕಾರಣ ನಿಮ್ಮ ಮಗನಿಗೆ ಕಾಡುತ್ತಿದೆ ಎಂದರು.

ಆಗ ಕಮಲಾಬಾಯಿ ತಾವು ಅಂದು ಕೊಂಡಂತೆ ಹರಕೆ ಹೊತ್ತ ದೇವರಿಗೆ 'ಗಲ್ಲೀಪು' ಹೊಲಿಸಿ ಹಾಕಿದರು. ಆಗ ಮಗನಿಗೆ ಸಂಪೂರ್ಣ ಆರಾಮವಾಯಿತು ಎಂದು ಅಂದಿನ ದಿನಗಳನ್ನು ಪಾಟೀಲರು ನೆನಪಿಸಿಕೊಳ್ಳುತ್ತಾರೆ. ಈ ಘಟನೆ ಒಂದು ಮೂಢ ನಂಬಿಕೆಯಂತೆ ಕಂಡರೂ ಇಲ್ಲಿ ಕಮಲಾಬಾಯಿ ತನ್ನ ಮಕ್ಕಳಿಗಾಗಿ ಏನನ್ನೂ ಬೇಡದೆ ತನ್ನ ಮೈದುನನ ಒಳಿತಿಗಾಗಿ ದೇವರಿಗೆ ಹರಕೆ ಹೊತ್ತುಕೊಂಡಂತಹ ಸಂಗತಿ ಅವಳ ತ್ಯಾಗ, ನಿಸ್ವಾರ್ಥ ಬದುಕಿಗೆ ಹಿಡಿದ ಕನ್ನಡಿಯಾಗಿದೆ ಎಂದು ಹೇಳಬಹುದು.

ಎಂ. ಬಿ. ಪಾಟೀಲರನ್ನು ಹತ್ತಿರದಿಂದ ಕಂಡು ಅವರ ಕಲಾಬದುಕಿನ ಪರಿಧಿಯೊಳಗೆ ಬಂದ ಮತ್ತೊಬ್ಬ ಪ್ರಮುಖ ವ್ಯಕ್ತಿಎಂದರೆ, ಬಸವರಾಜ ಬುಳ್ಳಾ. ಹುಬ್ಬಳ್ಳಿಯಲ್ಲಿ ಪಾಟೀಲರು ವಾರ್ತಾ ಇಲಾಖೆಯಲ್ಲಿ ಕೆಲಸ ಮಾಡುತ್ತಿದ್ದಾಗ ಅದೇ ಕಛೇರಿಯಲ್ಲಿ ಬಸವರಾಜ ಬುಳ್ಳಾ ಅವರು ಇದ್ದರು. ಪಾಟೀಲರಿಗಿಂತ ವಯಸ್ಸಿನಲ್ಲಿ ಕಿರಿಯರಾದ ಇವರು ಪಾಟೀಲರನ್ನು ಒಬ್ಬ ಮಾರ್ಗದರ್ಶಕರೆಂದು ಬಣ್ಣಿಸುತ್ತಾರೆ. ಪಾಟೀಲರು ತುಂಬಾ ಸಹಾಯ ಮಾಡುವ ಮನೋಭಾವದವರು ಅದರಲ್ಲೂ ಯುವಕಲಾವಿದರಿಗೆ ಹೆಚ್ಚಿನ ಸಹಾಯ ಸಹಕಾರ ನೀಡುತ್ತಾರೆ. ಪಾಟೀಲರ ಜೊತೆಗೆ ಅವರ ಮನೆಯಲ್ಲಿ ಕುಳಿತು ಮಾತಿಗಿಳಿದಾಗ ಕಲಾಲೋಕದ ದರ್ಶನವಾಗುತ್ತದೆ. ಸುತ್ತಲೂ ಕಲಾಕೃತಿಗಳು, ಎದುರಿಗೆ ಕಲಾಲೋಕದ ಮೇರುಪರ್ವತ ಎಂ. ಬಿ. ಪಾಟೀಲರು ತಮ್ಮ ಮಾತಿನ ಮೂಲಕ ಇಡೀ ವಿಶ್ವಕಲಾ ಲೋಕವನ್ನೇ ದರ್ಶನ ಮಾಡಿಸುತ್ತಾರೆ. ಅಲ್ಲಿ ಸಿಗುವ ಆನಂದ ಅನುಭವಗಳೇ ವಿಶಿಷ್ಟವಾಗಿರುತ್ತವೆ. ಕಲಾಗ್ಯಾಲರಿ ಅಥವಾ ಕಲಾ ಪ್ರದರ್ಶನಗಳಿಗೆ ಅವರೊಡನೆ ತೆರಳುವುದು ಸಹಿತ ಒಂದು ವಿಶಿಷ್ಟ ಅನುಭವ. ಪ್ರತಿಯೊಂದು ಕಲಾಕೃತಿಯ ತಂತ್ರಗಾರಿಕೆ, ರಚನಾ ವಿಧಾನ, ವಸ್ತುವಿಷಯ, ಶೈಲಿ, ಪ್ರಭಾವ, ಪ್ರೇರಣೆಗಳಂತಹ

ಸಂಗತಿಗಳನ್ನು ತಿಳಿಸುತ್ತಾರಲ್ಲದೆ ಕಲಾಕೃತಿಗಳ ಬಗ್ಗೆ ವಿಮರ್ಶೆ ಮಾಡುತ್ತ ನಮ್ಮ ತಿಳುವಳಿಕೆಯ ಪರಿಧಿಯನ್ನು ವಿಸ್ತರಿಸುತ್ತಾರೆ.

ಪಾಟೀಲರು ವಾರ್ತಾ ಇಲಾಖೆಯಲ್ಲಿ ಕೆಲಸ ನಿರ್ವಹಿಸುತ್ತಿದ್ದಾಗ ಅಲ್ಲಿ ಒಬ್ಬ ಮುಖ್ಯಕಲಾವಿದ ಆತನ ಕೈಕೆಳಗೆ ಸಹಾಯಕರಾಗಿ ಮೂರ್‍ನಾಲ್ಕು ಜನ ಕಲಾವಿದರು ಕೆಲಸ ಮಾಡುತ್ತಿದ್ದರು. ಆದರೆ ಇಂದು ಅಲ್ಲಿ ಕಲಾವಿದರಿಗೆ ಹೆಚ್ಚಿನ ಮಾನ್ಯತೆ ಇಲ್ಲ. ಕಂಪ್ಯೂಟರ ಮೂಲಕ ಬಹುಮಟ್ಟಿನ ಕೆಲಸ ನಿರ್ವಹಿಸಲಾಗುತ್ತದೆ. ಜೊತೆಗೆ ವಾರ್ತಾ ಇಲಾಖೆಯಲ್ಲಿ ಪಾಟೀಲರಿಗೆ ಅವರ ಕಲೆಗಾರಿಕೆಗೆ ಸಿಗಬೇಕಾದ ಪ್ರಾಮುಖ್ಯತೆ ಸಿಗದೇ ಹೋಗಿರುವುದು ಸಹಿತ ಹಲವು ಬಾರಿ ನಡೆದಿದೆ. ಪಾಟೀಲರು ವ್ಯಕ್ತಿತ್ವದಲ್ಲಿ ಸರಳ ಹಾಗೂ ಮೃದುಸ್ವಭಾವದಾಗಿರುವುದರಿಂದ ಅವರ ಕಲಾಕೃತಿಗಳಿಗೆ ಬೇರೆಯವರ ಹೆಸರನ್ನು ನಮೂದಿಸಿ ಅದರಿಂದ ಪ್ರಯೋಜನಗಳನ್ನು ಇಲಾಖೆಯವರು ಪಡೆದುಕೊಂಡಿರುವ ಸಂದರ್ಭಗಳು ನಡೆದಿವೆ.

ಎಂ. ಬಿ. ಪಾಟೀಲರು ತಮ್ಮ ಕಲಾಬದುಕಿನಲ್ಲಿ ವಿಜಾಪೂರದ ಸಿದ್ದೇಶ್ವರ ಕಲಾಮಂದಿರದ ಬಗ್ಗೆ ವಿಶೇಷ ಪ್ರೀತಿ, ಆದರ, ಅಭಿಮಾನಗಳನ್ನು ಹೊಂದಿದ್ದಾರೆ. ಅದನ್ನು ಉತ್ತರ ಕರ್ನಾಟಕದಲ್ಲಿ ವಿಶಿಷ್ಟವಾಗಿ ರೂಪಿಸಬೇಕೆಂದು ಅವರ ಅನಿಸಿಕೆಯಾಗಿತ್ತು. ಅದಕ್ಕಾಗಿ ತಾವು ಹಾಕಿಕೊಂಡಂತಹ ಅನೇಕ ಯೋಜನೆಗಳನ್ನು ಕಾಜಾಪೂರವರ ಜೊತೆಗೆ ಆಗಾಗ ಚರ್ಚಿಸುತ್ತಿದ್ದರು. ತಮ್ಮ ಭಾಗದಲ್ಲಿ ಇಂತಹ ಒಂದು ಒಳ್ಳೆಯ ಕಲಾಶಾಲೆ ಇದೆ ಎಂಬುವುದೇ ಅವರಿಗೆ ಅಭಿಮಾನದ ಸಂಗತಿಯಾಗಿತ್ತು. ಹಾಗಾಗಿ ವಿಜಾಪುರಕ್ಕೆ ಬಂದಾಗಲೆಲ್ಲ ಸಿದ್ದೇಶ್ವರ ಕಲಾಮಂದಿರಕ್ಕೆ ಬಂದು ಅಲ್ಲಿನ ವಿದ್ಯಾರ್ಥಿಗಳೊಂದಿಗೆ ಕಲೆಯ ಕುರಿತು ಚರ್ಚಿಸುತ್ತಿದ್ದರು. ಕೆಲವು ಸಂದರ್ಭದಲ್ಲಿ ಕಲಾ ಶಾಲೆಯ ವತಿಯಿಂದ ಕಲಾ ಪ್ರಾತ್ಯಕ್ಷಿಕೆ, ಉಪನ್ಯಾಸ, ಪ್ರದರ್ಶನ, ಇನ್ನಿತರ ಸಾಂಸ್ಕೃತಿಕ ಕಾರ್ಯಕ್ರಮಗಳಿಗೆ ಅವರನ್ನು ವಿಶೇಷವಾಗಿ ಆಹ್ವಾನಿಸಿ ಅವರಿಂದ ಪ್ರಯೋಜನ ಪಡೆಯಲಾಗುತ್ತಿತ್ತು. ತಾವೊಬ್ಬ ದೊಡ್ಡ ಕಲಾವಿದರಾಗಿದ್ದರೂ, ಕಲಾ ಪ್ರಾತ್ಯಕ್ಷಿಕೆ ನೀಡುವಾಗ ನಿಧಾನವಾಗಿ ಹಂತ ಹಂತವಾಗಿ ವಿದ್ಯಾರ್ಥಿಗಳಿಗೆ ತಿಳಿಯುವಂತೆ ನಡೆಸಿಕೊಡುತ್ತಾರೆ.

ಇಂದಿಗೂ ವಿಜಾಪೂರದಲ್ಲಿರುವವರೆಗೂ ಪ್ರತಿದಿನ ಕಲಾ ಶಾಲೆಗೆ ಬಂದು ವಿದ್ಯಾರ್ಥಿಗಳೊಂದಿಗೆ ತಮ್ಮ ಅನುಭವಗಳನ್ನು ಹಂಚಿಕೊಳ್ಳುತ್ತಾರೆ. ವಿದ್ಯಾರ್ಥಿಗಳಿದ್ದಾಗ ತಾವು ಕಲಿತ ರೀತಿ, ತಮ್ಮ ಮೇಲೆ ಪ್ರಭಾವ ಬೀರಿದ ಶಿಕ್ಷಕರು, ಅವರು ಹೇಳಿಕೊಡುತ್ತಿದ್ದ ವಿಧಾನ, ಮುಂಬೈನಗರದ ಜನಜೀವನ, ಅಲ್ಲಿನ ಕಲಾವಾತಾವರಣ ಇಂತಹ ಹಲವಾರು ಸಂಗತಿಗಳನ್ನು ವಿದ್ಯಾರ್ಥಿಗಳೊಂದಿಗೆ ಹಂಚಿಕೊಳ್ಳುವ ಮೂಲಕ ಅವರ ಜ್ಞಾನ ಪರಿಧಿಯನ್ನು ವಿಸ್ತರಿಸುತ್ತಾರೆ.

ವಿದ್ಯಾರ್ಥಿಗಳಿಗೆ ತಮ್ಮ ಅನುಭವಗಳನ್ನು ಹೇಳುವುದರ ಜೊತೆಗೆ ಕಲಾಕ್ಷೇತ್ರದಲ್ಲಿ ಹೇಗೆ ಬೆಳೆಯಬೇಕು, ಕಲಾ ಪ್ರದರ್ಶನಗಳನ್ನು ಆಯೋಜಿಸುವುದು, ಹೊರ ಪ್ರಪಂಚಕ್ಕೆ ತೆರೆದುಕೊಳ್ಳುವುದು, ಸೃಜನಶೀಲತೆ, ಪಾಶ್ಚಾತ್ಯ ಆಧುನಿಕ ಕಲಾಶೈಲಿಯಲ್ಲಿ ಚಿತ್ರಿಸುವ ವಿಧಾನ ಮುಂತಾದವುಗಳನ್ನು ಸಹಿತ ತಿಳಿಸುವ ಮೂಲಕ ವಿದ್ಯಾರ್ಥಿಗಳ ಕಲಾ ಬದುಕಿನ ಸ್ಫೂರ್ತಿ ಸೆಲೆಯಾಗಿ ಪಾಟೀಲರು ಕಾರ್ಯನಿರ್ವಹಿಸುತ್ತಲಿದ್ದಾರೆ. ಅಲ್ಲದೆ ವಿದ್ಯಾರ್ಥಿಗಳ ಕಲಾ ಪ್ರದರ್ಶನಕ್ಕೆ ತಮ್ಮಿಂದಾದ ಸಹಾಯ ಸಹಕಾರಗಳನ್ನು ಇಂದಿಗೂ ನೀಡುತ್ತಿದ್ದಾರೆ.

ಪಾಟೀಲರು ತಮ್ಮ ಕಲಾಬದುಕಿನಲ್ಲಿ ಅನೇಕ ಪ್ರಾತ್ಯಕ್ಷಿಕೆಗಳನ್ನು ಹಲವಾರು ಬಾರಿ ನಡೆಸಿಕೊಟ್ಟಿದ್ದಾರೆ. ಅದರಲ್ಲಿ ನವ್ಯಕಲಾಕೃತಿಗಳು, ಆಧುನಿಕ, ಅಮೂರ್ತ ಕೃತಿಗಳು, ನೈಜಶೈಲಿಯ ಚಿತ್ರಗಳು, ಗ್ರಾಮೀಣ ಪರಿಸರದ ಚಿತ್ರಗಳು, ಸಂಯೋಜನಾ ಚಿತ್ರಗಳು, ಸ್ಟಿಲ್ ಲೈಫ್, ನಿಸರ್ಗಚಿತ್ರ, ಭಾವಚಿತ್ರ ಹಾಗೂ ವಿಶೇಷವಾಗಿ ವ್ಯಕ್ತಿಚಿತ್ರಗಳನ್ನು ರಚಿಸಿದ್ದು ಕಂಡು ಬರುತ್ತದೆ. ಕಲಾಶಾಲೆಗಳಲ್ಲಿ ಆಯೋಜಿಸಿದಂತಹ ಕಲಾಶಿಬಿರ, ಕಲಾಪ್ರದರ್ಶನ, ಕಾರ್ಯಾಗಾರ ಮುಂತಾದವುಗಳಲ್ಲಿ ಪಾಟೀಲರು ಇತರ ಕಲಾವಿದರೊಂದಿಗೆ ಸಕ್ರೀಯವಾಗಿ ಭಾಗವಹಿಸಿದ್ದಾರೆ. ಸಹಕಲಾವಿದರು ಹಿರಿಯರು, ಕಿರಿಯರು ಅಥವಾ ಸಮಕಾಲೀನ ವಯೋಮಾನದವರೆಲ್ಲ ರೊಂದಿಗೆ ಆತ್ಮೀಯವಾಗಿ ಬೆರೆಯುವುದು ಇವರ ಗುಣವಾಗಿದೆ. ಅದನ್ನು ಇಂದಿಗೂ ಉಳಿಸಿಕೊಂಡಿದ್ದಾರೆ. ಈ ಸಂದರ್ಭದಲ್ಲಿ ತಾವೊಬ್ಬ ದೊಡ್ಡ ಕಲಾವಿದನೆಂಬ ಹಮ್ಮುಬಿಮ್ಮುಗಳು ಅವರಲ್ಲಿ ಎಂದಿಗೂ ತೋರಿಬಂದಿಲ್ಲ. ಈ ಕಾರಣಗಳಿಂದಾಗಿಯೇ ಅವರೊಬ್ಬ ಕಲಾಲೋಕದ ಸ್ನೇಹ ಜೀವಿ ಎಂದು ಕರೆಸಿಕೊಂಡಿದ್ದಾರೆ.

ಉತ್ತರ ಕರ್ನಾಟಕ ಗ್ರಾಮ್ಯಸೊಗಡು, ಇಲ್ಲಿನ ಸಂಸ್ಕೃತಿ ಹಾಗೂ ಆಹಾರ ಪದ್ಧತಿಗಳನ್ನು ಹೆಚ್ಚು ಇಷ್ಟಪಡುತ್ತಾರೆ. ಬಿಳಿಜೋಳದ ರೊಟ್ಟಿ, ಶೇಂಗಾ ಹಿಂಡಿ, ಇವರಿಗೆ ಪ್ರೀಯವಾದ ಊಟ, ವಿಜಾಪೂರಕ್ಕೆ ಇಲ್ಲವೆ ತಮ್ಮ ಹಳ್ಳಿಗೆ ಬಂದಾಗ ಊಟದಲ್ಲಿ ಇವುಗಳನ್ನು ಕೇಳಿ ಮಾಡಿಸಿಕೊಂಡು ತಿನ್ನುತ್ತಾರೆ. ಈ ಭಾಗದ ವೇಷಭೂಷಣಗಳಲ್ಲಿ ಧೋತರ ನೆಹರುಶರ್ಟ, ಟೊಪ್ಪಿಗೆ ಇಲ್ಲವೆ ರುಮಾಲು, ಮಹಿಳೆಯರು ಸಾಂಪ್ರದಾಯಿಕವಾದ ಕೈಮಗ್ಗದ ಸೀರೆ, ಕುಪ್ಪಸಗಳನ್ನು ತೊಟ್ಟುಕೊಳ್ಳುವುದು ಪಾಟೀಲರಿಗೆ ಅಪ್ಯಾಯಮಾನವೆನಿಸುತ್ತದೆ.

ಸರಕಾರಿ ನೌಕರಿಯಲ್ಲಿ ಇದ್ದುಕೊಂಡು ಇವರು ಕಲಾಕ್ಷೇತ್ರದಲ್ಲಿ ಮಾಡಿರುವ ಸಾಧನೆಗಳು ನಿಜಕ್ಕೂ ಶ್ಲಾಘನೀಯವಾದುದು. ಉತ್ತರ ಕರ್ನಾಟಕದ ಕಲಾವಿದರು ಇಲ್ಲವೆ ಕಲಾವಿದ್ಯಾರ್ಥಿಗಳು ಬೆಂಗಳೂರು ಇಲ್ಲವೆ ಮೈಸೂರು ದಸರಾಗೆ ಹೋದರೆ ಅವರಿಗೆ ಪಾಟೀಲರು

ಅನುಕೂಲ ಮಾಡಿಕೊಡುತ್ತಿದ್ದರು. ಟ್ಯಾಬ್ಲೋ ಕಲಾಕೃತಿಗಳನ್ನು ರಚಿಸುವಲ್ಲಿ ವಿಶಿಷ್ಟ ಪ್ರತಿಭಾ ಸಂಪನ್ನತೆಯನ್ನು ಹೊಂದಿದ್ದಾರೆ. ಅಂತಹ ಕೃತಿಗಳನ್ನು ರಚಿಸುವಾಗ ಅನೇಕ ಯುವಕಲಾವಿದರು ಮತ್ತು ಕಲಾವಿದ್ಯಾರ್ಥಿಗಳನ್ನು ಸಹಾಯಕ್ಕೆ ಕರೆದುಕೊಂಡು ಅವರಿಗೆ ಮಾರ್ಗದರ್ಶನ ಮಾಡುತ್ತ ಪೂರ್ತಿಗೊಳಿಸುವುದು ಅವರ ಶೈಲಿಯಾಗಿದೆ. ಚಿತ್ರಕಲೆಯಾಗಲಿ ಅಥವಾ ಇನ್ನಾವುದೇ ಕಲಾಪ್ರಕಾರವಾಗಲಿ ಅದರಲ್ಲಿ ಪರಿಣಿತರಾದವರು ಸಹಜವಾಗಿ ಅದನ್ನು ಇನ್ನೊಬ್ಬರಿಗೆ ಕಲಿಸುವುದು ಕಡಿಮೆ. ಆದರೆ ಪಾಟೀಲರು ಎಂದಿಗೂ ಅಂತಹ ಸ್ವಾರ್ಥ ಮನೋಭಾವನೆ ಹೊಂದಿದವರಲ್ಲ. ತಮ್ಮಲ್ಲಿರುವ ವಿದ್ಯೆ ಮತ್ತು ತಿಳುವಳಿಕೆಗಳನ್ನು ಕಿರಿಯರಿಗೆ ಧಾರೆ ಎರೆಯುತ್ತಲೆ ಬದುಕು ಸಾಗಿಸುತ್ತಿದ್ದಾರೆ. ಒಂದು ರೀತಿಯ ವಿದ್ಯಾದಾಸೋಹಿ ಜೀವನ ಅವರದಾಗಿದೆ.

ಪಾಟೀಲರು ಸಾಧಿಸಬೇಕೆಂಬ ಮನೋಭಾವದಿಂದ ಚಿತ್ರಕಲೆಯನ್ನು ಅಧ್ಯಯನ ಮಾಡಿದವರು. ಅವರ ತಂದೆಗೆ ಮಗನನ್ನು ಚಿತ್ರಕಲಾವಿದನಾಗಿ ಮಾಡಲು ಇಷ್ಟವಿರಲಿಲ್ಲ. ಪಾಟೀಲರದು ಮಧ್ಯಮ ವರ್ಗದ ಗೌಡರ ಕುಟುಂಬವಾದರೂ ಅವರಿಗೆ ಕಲಾಶಿಕ್ಷಣ ಪಡೆದುಕೊಳ್ಳುವುದು ಹೆಚ್ಚಿನ ತೊಂದರೆಯಾಯಿತು. ತಂದೆ ಯಾವುದೆ ಹಣಕಾಸಿನ ಸಹಾಯ ಮಾಡದಿದ್ದರೂ ಅಣ್ಣ ಕಳುಹಿಸುತ್ತಿದ್ದ ಹಣದಲ್ಲಿ ಕಲಾಶಿಕ್ಷಣ ಪೂರೈಸಿದರು. ಅವರ ಜೀವನದಲ್ಲಿ ನಡೆದ ಘಟನಾವಳಿಗಳು, ನೋವು, ತೊಂದರೆ, ಸಂಕಷ್ಟಗಳು ಅವರ ಮೇಲೆ ಪ್ರಭಾವ ಬಿರಿ ಅವರೊಬ್ಬ ಪ್ರಬುದ್ಧ ಕಲಾವಿದರಾಗಿ ರೂಪಗೊಳ್ಳಲು ಸಾಧ್ಯವಾಗಿರಬಹುದು. ಪಾಶ್ಚಾತ್ಯ ಕಲಾವಿದರಾದ ಪಾಬ್ಲೋ ಪಿಕಾಸೋ ಮತ್ತು ವ್ಯಾನಗಾಗ್ ಅವರು ಸಹಿತ ತಮ್ಮ ಕಷ್ಟಮಯ ಜೀವನದಲ್ಲಿ ಉಂಟಾದ ತೊಂದರೆಗಳನ್ನೇ ಕಲಾಕೃತಿಯಲ್ಲಿ ಅಭಿವ್ಯಕ್ತಿಸಿ ಶ್ರೇಷ್ಠ ಕಲಾವಿದರೆನಿಸಿಕೊಂಡಂತೆ ಪಾಟೀಲರ ಕಲಾಕೃತಿಗಳಲ್ಲಿಯೂ ಕೂಡಾ ಅಂತಹ ಸೆಳಕುಗಳು ಕಂಡು ಬರುತ್ತವೆ.

ಒಂದು ಗ್ರಂಥ. ಒಂದು ಕಲಾಕೃತಿ ಹೇಗೆ ದೇಶದ ಸಾಂಸ್ಕೃತಿಕ ಸಂಪತ್ತು ಎಂದು ಪರಿಗಣಿಸಲ್ಪಡುತ್ತದೆಯೋ ಹಾಗೆ ಒಬ್ಬ ಶ್ರೇಷ್ಠ ಕಲಾವಿದ ಕೂಡಾ ನಾಡಿನ ಸಂಪತ್ತು ಆದರೆ ಆ ಕಲಾವಿದನಲ್ಲಿ ತನ್ನಲ್ಲಿರುವ ವಿದ್ಯೆಯನ್ನು ಇನ್ನೊಬ್ಬರಿಗೆ ತಿಳಿಸಿಕೊಡುವ ಮಹತ್ವಕಾಂಕ್ಷೆ ಇದ್ದಾಗ ಆ ಕಲಾವಿದ ನಾಡಿನ ಸಂಪತ್ತಾಗಬಲ್ಲ. ಪಾಟೀಲರಲ್ಲಿ ಅಂತಹ ಗುಣಗಳಿವೆ. ಉಳಿದ ಕೆಲವು ಕಲಾವಿದರಂತೆ ಅವರು ತಾವೊಬ್ಬರೇ ಬೆಳೆಯದೇ ತಮ್ಮಲ್ಲಿರುವ ವಿದ್ಯೆಯನ್ನು ಯುವಪೀಳಿಗೆಗೆ ನಿರಂತರವಾಗಿ ಧಾರೆ ಎರೆಯುತ್ತಲಿದ್ದಾರೆ. ಇಂದಿಗೂ ಸಹಿತ ಅತ್ಯಂತ ಪ್ರೀತಿಯಿಂದ ಯಾರೇ ಅವರಲ್ಲಿಗೆ ಹೋದರೂ ಯಾವುದೇ ಫಲಾಪೇಕ್ಷೆ ಇಲ್ಲದೆ ಮಾರ್ಗದರ್ಶನ, ತಿಳುವಳಿಕೆ, ಕಲಾವಿಚಾರಗಳನ್ನು ತಿಳಿಸಿಕೊಡುತ್ತಾರೆ. ಕಲಾವಿದನೊಬ್ಬನ ಕಲಾಬದುಕು,

ಹೊರನೋಟಕ್ಕೆ ಒಂದು ರೀತಿಯಲ್ಲಿ ಕಂಡುಬಂದರೆ, ಅದರ ವಿಶ್ಲೇಷಣೆ, ವಿಮರ್ಶೆ, ಅಧ್ಯಯನಗಳಿಗೆ ತೊಡಗಿದಾಗ ಒಳನೋಟಗಳು, ಮತ್ತೊಂದು ರೂಪಗಳು ಅನಾವರಣಗೊಳ್ಳುತ್ತವೆ.

ತಿಕೋಟಾ ಮತ್ತು ದಂಧರಗಿ ಎಂಬ ಹಳ್ಳಿಯಲ್ಲಿ ತಮ್ಮ ಬಾಲ್ಯದ ದಿನಗಳನ್ನು ಪಾಟೀಲರು ಕಳೆದಿದ್ದಾರೆ. ಅಲ್ಲಿಯ ಪರಿಸರದಿಂದ ಪ್ರಭಾವವಿತರಾಗಿದ್ದಾರೆ. ತಮ್ಮ ಪ್ರದೇಶದ ಜನರೆಂದರೆ ಪಾಟೀಲರಿಗೆ ಇನ್ನಿಲ್ಲದ ಪ್ರೀತಿ, ಪಾಟೀಲರು ಯುವಕಲಾವಿದರಿಗೆ ಕೊಡುವ ಪ್ರೋತ್ಸಾಹ, ವಿಶ್ವಾಸದಿಂದ ಕೂಡಿದ ಸಲಹೆ ಸೂಚನೆಗಳು ಮಹತ್ವದ್ದಾಗಿವೆ. ಹೆಚ್ಚಿನ ಹಿರಿಯ ಕಲಾವಿದರಿಗೆ ಸ್ವಾಭಿಮಾನ. ಯುವಕರನ್ನು ಕೇವಲವಾಗಿ ಕಾಣುವ ಮನೋಭಾವ ಇರುತ್ತದೆ ಆದರೆ ಪಾಟೀಲರು ಯುವಕರನ್ನು ಅತ್ಯಂತ ಪ್ರೀತಿ, ವಿಶ್ವಾಸ, ಆದರದಿಂದ ತಾವಾಗಿಯೇ ಮಾತನಾಡಿಸುತ್ತಾರೆ. ತಮ್ಮಲ್ಲಿರುವ ಕಲಾಜ್ಞಾನವನ್ನು ಅವರಿಗೆ ಧಾರೆ ಎರೆಯುತ್ತಾರೆ. ಇಂತಹ ಕಲಾವಿದರು ಅಪರೂಪ.

ತೆಳುವಾದ ದೇಹ, ಆಕರ್ಷಕವಾದ ತೀಕ್ಷ್ಣವಾದ ಕಣ್ಣುಗಳು, ಪಾಟೀಲರ ಬಾಹ್ಯರೂಪದ ಪ್ರಮುಖ ಲಕ್ಷಣಗಳಾಗಿವೆ. ಪಾಟೀಲರು ಇದ್ದಲ್ಲಿ ಮಾತು, ಹರಟೆ, ಹೆಚ್ಚಾಗಿರುತ್ತೆ, ಕೇವಲ ಒಂದೇ ವಿಷಯವಲ್ಲದೇ ಹತ್ತು ಹಲವು ಸಂಗತಿಗಳ ಬಗ್ಗೆ ಅವರು ಮಾತನಾಡುತ್ತಾರೆ. ರಾಜ್ಯ ರಾಷ್ಟ್ರ ಮತ್ತು ಅಂತರಾಷ್ಟ್ರ ಮಟ್ಟದ ವಿಚಾರಗಳನ್ನು ಅವರು ತಮ್ಮ ಮಾತುಗಳಲ್ಲಿ ಅಡಕಗೊಳಿಸಿಕೊಳ್ಳುತ್ತಾರೆ. ಚಿತ್ರಕಲೆ ಮಾತ್ರವಲ್ಲದೆ, ಶಿಲ್ಪ, ಚಲನಚಿತ್ರ, ರಾಜಕೀಯ ವಿದ್ಯಮಾನ, ಪ್ರಚಲಿತ ಘಟನಾವಳಿಗಳು, ಸಾಂಸಾರಿಕ ಬದುಕು, ಹೆಣ್ಣುಗಂಡಿನ ಸಂಬಂಧ, ಪ್ರೀತಿ, ಪ್ರೇಮ, ಕಾಮ, ವೈಜ್ಞಾನಿಕ ಬೆಳವಣಿಗೆ, ಸಾಮಾಜಿಕ ಪರಿಣಾಮಗಳು, ಪ್ರಕೃತಿ ಸಂಬಂಧಿ ವಿಚಾರಗಳು ಹೀಗೆ ಹತ್ತು ಹಲವು ವಿಷಯಗಳ ಬಗ್ಗೆ ಪಾಟೀಲರು ಮುಕ್ತವಾಗಿ ಚರ್ಚಿಸುತ್ತಾರೆ. ಅವರೊಂದಿಗೆ, ಸಮಯದ ಪರಿವೆ ಇರುವುದಿಲ್ಲ. ಹಿರಿಯರು, ಕಿರಿಯರು ಎಂಬ ಭೇದ ಭಾವ ಅವರಲ್ಲಿಲ್ಲ. ಎಲ್ಲರೊಂದಿಗೆ ಸಮನಾಗಿ ಬೆರೆಯುತ್ತಾರೆ. ಮುಂಬೈನಲ್ಲಿ ತಾವು ಕಳೆದ ದಿನಗಳನ್ನು ಪಾಟೀಲರು ಪರಿಣಾಮಕಾರಿಯಾಗಿ ಹೇಳುತ್ತಾರೆ. ತಮ್ಮ ಒಡನಾಡಿಗಳು, ತಮಗೆ ಸಹಾಯ ಮಾಡಿದವರು, ತೊಂದರೆ ಕೊಟ್ಟವರು, ಪ್ರಾಭವ ಬಿರಿದವರು, ಶಿಕ್ಷಕರು ಹೀಗೆ ಹಲವು ಸಂಗತಿ ತಿಳಿಸುತ್ತಾರೆ.

ತಮ್ಮ ಕಲಾಬದುಕಿನುದ್ದಕ್ಕೂ ಪಾಟೀಲರು ಎಂದಿಗೂ ಪ್ರಶಸ್ತಿ, ಬಹುಮಾನಗಳನ್ನು ಬಯಸಿ ಕೆಲಸ ಮಾಡಿದವರಲ್ಲ. ಯಾವ ಫಲಾಪೇಕ್ಷೆ ಇಲ್ಲದೆ ಸಹಜವಾಗಿ ಕಾರ್ಯಮಾಡುತ್ತ ಬಂದವರಾಗಿದ್ದಾರೆ. ಪಾಟೀಲರು ಪ್ರಾತಿಕ್ಷಿಕೆ ಮತ್ತು ಉಪನ್ಯಾಸ ಕೊಡುವುದರ ಜೊತೆಗೆ ಕಲಾ ಶಾಲೆಯ ವಿದ್ಯಾರ್ಥಿಗಳಿಗೆ ಹೇಗೆ ಪಾಠ ಮಾಡಬೇಕೆಂದು ಶಿಕ್ಷಕರಿಗೂ ಸೂಚನೆಕೊಡುತ್ತಾರೆ.

ಪ್ರಾರಂಭಿಕ ಹಂತದಲ್ಲಿ ವಿದ್ಯಾರ್ಥಿಗಳು ರೇಖಾಚಿತ್ರರಚನೆಯನ್ನು ಹೇಗೆ ಸರಳವಾಗಿ ಮಾಡಬೇಕೆಂದು ತಿಳಿಸುತ್ತಾರೆ. ನಂತರ ಸ್ಮರಣ ಚಿತ್ರಣ ವಿಧಾನವನ್ನು ಮನದಟ್ಟು ಮಾಡಿಕೊಡುತ್ತಿದ್ದರು. ಪಾಟೀಲರು ಇಂದು ಬೆಂಗಳೂರಿನಲ್ಲಿ ನೆಲೆಸಿದ್ದು ಬಹುಮಟ್ಟಿನ ಪ್ರಮುಖ ಕಲಾವಿದರು ಉತ್ತರ ಕರ್ನಾಟಕದವರೆ ಆಗಿರುವುದನ್ನು ಅವರು ಒತ್ತಿ ಹೇಳುತ್ತಾರೆ. ಎಸ್. ಎಂ. ಪಂಡಿತ್, ಹಡಪದ, ಎಂ. ಎ. ಚಟ್ಟಿ, ಮಿಣಜಗಿ, ದಂಡಾವತಿಮಠ ಮಲ್ಲಿಕಾರ್ಜುನ ಮನಸೂರ ಅವರಂತವರು ಉತ್ತರ ಕರ್ನಾಟಕದ ಪ್ರತಿಭೆಗಳು ಎಂದು ಹೇಳುತ್ತಾರೆ. ಕಲಾಕ್ಷೇತ್ರ ಬೆಳೆಯುಬೇಕಾದರೆ ಒಬ್ಬ ವ್ಯಕ್ತಿಯಿಂದ ಸಾಧ್ಯವಾಗಲಾರದು ಅದಕ್ಕಾಗಿ ಒಂದುಗುಂಪು, ಅಸೋಸಿಯೇಷನ್ ದಂತಹ ಸಂಘಟನೆಗಳನ್ನು ಹುಟ್ಟಿ ಹಾಕಬೇಕೆಂಬುದು ಪಾಟೀಲರ ಅನಿಸಿಕೆಯಾಗಿದೆ.

ಇಡಿ ದಿವಸ ಮಾತ್ರವಲ್ಲದೆ ರಾತ್ರಿಯಿಂದ ಬೆಳಗಿನವರೆಗೂ ಕಲೆಯ ಬಗ್ಗೆ ನಿರಂತರವಾಗಿ ಮಾತನಾಡಬಲ್ಲ ಗಟ್ಟಿತನ ಪಾಟೀಲರಲ್ಲಿದೆ. ಅವರ ಇನ್ನೊಂದು ಆಸಕ್ತಿದಾಯಕ ವಿಚಾರವೆಂದರೆ ನಾಟಕದ ಬಗೆಗಿರುವ ಒಲವು. ಕಲೆ ಎಂದರೆ ಒಂದು ರೀತಿಯ ಯೋಗ ಸಾಧನೆ ಎಂಬುದು ಪಾಟೀಲರ ಅನಿಸಿಕೆ. ಯೋಗದಲ್ಲಿ ಹೇಗೆ ಬಾಹ್ಯ ಪ್ರಪಂಚದ ಅರಿವಿನಿಂದ ಮುಕ್ತಿ ಹೊಂದುತ್ತೇವೆಯೋ ಹಾಗೆ ಕೃತಿರಚನೆಯ ಸಂದರ್ಭದಲ್ಲಿ ನಮಗೆ ಇಹಲೋಕದ ಅರಿವಿನಿಂದ ಹೊರತಾದ ಆಂತರಿಕ ಪ್ರಪಂಚದೊಂದಿಗೆ ಸಂಬಂಧ ಏರ್ಪಟ್ಟು ಆನಂದಿಸುತ್ತಿರುತ್ತೇವೆ ಎಂಬುದಾಗಿ ಹೇಳುತ್ತಾರೆ. ಎಂದಿಗೂ ಪ್ರಶಸ್ತಿಗಳ ಹಿಂದೆ ಪಾಟೀಲರು ಹೋದವರಲ್ಲ. ನಿರ್ಲಿಪ್ತತೆಯಿಂದ ತಮ್ಮ ಕಲಾ ಕಾಯಕ ಮಾಡಿಕೊಂಡಿರುವುದೊಂದೆ ಅವರ ಸಹಜ ಸ್ವಭಾವವಾಗಿದೆ.

ಪಾಟೀಲರು ಕೇವಲ ಸಂಯೋಜನಾ ಚಿತ್ರಕಲಾವಿದರು ಮಾತ್ರವಲ್ಲ ಅವರೊಬ್ಬ ನಿಸರ್ಗ ಚಿತ್ರಕಲಾ ರಚನಾಕಾರರಾಗಿ, ಭಾವಚಿತ್ರ ಕಲಾವಿದನಾಗಿ, ಆಧುನಿಕ ಅಮೂರ್ತ ಕೃತಿಕಾರರಾಗಿ, ವುಡ್ ಬರ್ನಿಂಗ್ ರಚನಾಕಾರರಾಗಿ, ಹೆಚ್ಚು ಪ್ರಸ್ತುತರಾಗುತ್ತಾರೆ. ಸರಳತೆ, ಸಂಕೀರ್ಣತೆ, ಸಾಂಕೇತಿಕತೆಗಳಂತಹ ಹಲವಾರು ಅಂಶಗಳು ಅವರ ಕಲಾಕೃತಿಗಳಲ್ಲಿ ಕಂಡು ಬರುತ್ತವೆ. ಪಾಟೀಲರು ಇಲಾಖೆಯಲ್ಲಿದ್ದಾಗ ಅನೇಕ ರೀತಿಯ ಚಿತ್ರಗಳನ್ನು ರಚಿಸಿದ್ದರ ಬಗ್ಗೆ ತಿಳಿದುಬರುತ್ತದೆ. ಗಂಗಾಕಲ್ಯಾಣ, ಭಾಗ್ಯಜ್ಯೋತಿ, ಗ್ರಾಮನೈರ್ಮಲ್ಯ, ರೋಜಗಾರ ಯೋಜನೆ ಹೀಗೆ ಹತ್ತು ಹಲವು ಕಾರ್ಯಕ್ರಮಗಳ ಹಿನ್ನೆಲೆಯಲ್ಲಿ ಪಾಟೀಲರು ಕಲಾಕೃತಿಗಳನ್ನು ರಚಿಸಿದ್ದಾರೆ. ಈ ಬಗೆಯ ಚಿತ್ರಗಳನ್ನು ರಚಿಸಿ ಕಟೌಟಗಳನ್ನು ನಿರ್ಮಿಸಿಕೊಂಡು ಪ್ರದರ್ಶನಕ್ಕೆ ಕೊಂಡೊಯ್ಯುತ್ತಿದ್ದರು. ಪ್ರದರ್ಶನಕ್ಕಾಗಿ ಇಲಾಖೆಯಲ್ಲಿ ಒಂದು ಬಸ್ಸು ಇದ್ದು ಅದರಲ್ಲಿ ಎಲ್ಲ ಕಲಾಕೃತಿಗಳನ್ನು ತುಂಬಿಕೊಂಡು ಊರಿಂದ ಊರಿಗೆ ಪ್ರಚಾರಕ್ಕಾಗಿ ಪ್ರದರ್ಶಕ್ಕಾಗಿ ತೆರಳುತ್ತಿದ್ದರು.

ಪ್ರದರ್ಶನದಿಂದ ಮರಳಿದ ಮೇಲೆ ಅದೇ ಪ್ಯಾನಲ್‌ಗಳ ಮೇಲೆ ಮತ್ತೆ ಬೇರೆ ಯೋಜನೆಗೆ ಸಂಬಂಧಿಸಿದ ಚಿತ್ರವನ್ನು ಹೆಚ್ಚಿನ ಸಂದರ್ಭದಲ್ಲಿ ರಚಿಸುತ್ತಿದ್ದರು.

ಕೆಲವು ಚಿತ್ರಗಳು ಮಾತ್ರ ಬೇರೆ ಬೇರೆ ಪುಸ್ತಕಗಳಲ್ಲಿ, ಪತ್ರಿಕೆಗಳಲ್ಲಿ, ಜಾಹೀರಾತು ಫಲಕಗಳಲ್ಲಿ ಕಂಡು ಬರುತ್ತವೆ. ಕಲಾ ಕ್ಷೇತ್ರದಲ್ಲಿ ಕೆಲಸ ಮಾಡುತ್ತಿರುವ ವ್ಯಕ್ತಿಗಳಲ್ಲಿ ಎರಡು ರೀತಿಯ ಜನರಿದ್ದಾರೆ. ಕೆಲವರು ಉನ್ನತ ಸ್ಥಾನಮಾನ, ಪ್ರಶಸ್ತಿ ಗೌರವಗಳನ್ನು ಹೊಂದಿ ಕಲಾಕ್ಷೇತ್ರದಲ್ಲಿ ದೊಡ್ಡಹೆಸರು ಮಾಡಿದ್ದರೂ ಕೇವಲ ವ್ಯಕ್ತಿಗತ ಅಭಿವೃದ್ಧಿ ಮತ್ತು ಬೆಳವಣಿಗೆಯ ಹಿನ್ನೆಲೆಯಲ್ಲಿ ತಾವೊಬ್ಬರೇ ಬೆಳೆದಿರುತ್ತಾರೆ. ಮತ್ತೆ ಕೆಲವರು ಎಷ್ಟೋ ಪ್ರತಿಭಾವಂತರಿದ್ದರೂ ಸೃಜನಶೀಲ ಗುಣಧರ್ಮಗಳನ್ನು ಹೊಂದಿದವರಾಗಿದ್ದರೂ ತಮಗಾಗಿ ಏನನ್ನೂ ಪಡೆದುಕೊಳ್ಳದೆ ತಮ್ಮ ವಿದ್ಯಾರ್ಥಿಗಳಿಗೆ, ಯುವ ಕಲಾವಿದರಿಗೆ ಮಾರ್ಗದರ್ಶನ ಮಾಡುತ್ತ ಅವರನ್ನು ಬೆಳೆಸುವ ನಿಟ್ಟಿನಲ್ಲಿ ಸೇವೆ ಮಾಡುತ್ತಿರುತ್ತಾರೆ. ಈ ರೀತಿಯ ಎರಡನೇ ಗುಂಪಿಗೆ ಸೇರಿದ ವ್ಯಕ್ತಿಗಳಲ್ಲಿ ಎಂ. ಬಿ. ಪಾಟೀಲರು ಗುರುತಿಸಲ್ಪಡುತ್ತಾರೆ.

ತಮ್ಮ ಸಾಧನೆ, ಪ್ರಸಿದ್ಧಿ, ಪ್ರಯತ್ನಗಳಿಂದಾಗಿ ಅವರು ಅನೇಕ ರಾಷ್ಟ್ರಮಟ್ಟದ ಉನ್ನತ ಸ್ಥಾನಮಾನಗಳನ್ನು ಪಡೆದುಕೊಳ್ಳಬಹುದಾಗಿತ್ತು ಆದರೆ ತಾವು ಕಲಿತ ಜ್ಞಾನ ತಮ್ಮೊಂದಿಗೆ ಕೊನೆಯಾಗದೆ ಮುಂದಿನ ಪೀಳಿಗೆಗೆ ಹರಿದು ಬರಬೇಕು ಎಂಬುದು ಅವರ ಆಸೆ. ಹಾಗಾಗಿ ನಿರಂತರವಾಗಿ ಯುವಕರಿಗೆ ಮಾರ್ಗದರ್ಶನ ಮಾಡುವ ಒಬ್ಬ ಕಲಾ ಜ್ಞಾನಿಯಾಗಿ ಅವರು ಕೆಲಸ ಮಾಡುತ್ತಿದ್ದಾರೆ. ಇದೆ ಕಾರಣದಿಂದಾಗಿ ಅವರು ಇತರ ಸಮಕಾಲೀನ ಹಿರಿಯ ಕಲಾವಿದರಿಗಿಂತ ಭಿನ್ನವಾಗಿ ನಿಲ್ಲುತ್ತಾರೆ. ಇದು ಅವರಲ್ಲಿನ ವಿಶೇಷತೆಯೂ ಆಗಿದೆ. ಯುವಕರನ್ನು ಬೆಳೆಸುತ್ತ ಕಲಾಕ್ಷೇತ್ರಕ್ಕೆ ಅನನ್ಯ ಕೊಡುಗೆ ನೀಡುತ್ತಿದ್ದಾರೆ ಧಾರವಾಡ ಮತ್ತು ಹುಬ್ಬಳ್ಳಿಯ ಕಲಾವಿದರು ಕೂಡಿಕೊಂಡು ಕಲಾಗುಂಪೊಂದನ್ನು ರಚಿಸಿಕೊಂಡಾಗ ಅದರಲ್ಲಿ ಪಾಟೀಲರೂ ಪ್ರಮುಖ ಪಾತ್ರವಹಿಸಿದ್ದರು. ಬೆಂಗಳೂರಿನಿಂದ ಹುಬ್ಬಳ್ಳಿಯವರೆಗೆ ಸ್ವಂತ ಖರ್ಚಿನಿಂದ ಬಂದು ಹೋಗುತ್ತಿದ್ದರು. ವೃತ್ತಿಯಿಂದ ನಿವೃತ್ತಿಯಾಗಿದ್ದರೂ ಪ್ರವೃತ್ತಿಯಿಂದ ಇನ್ನೂ ಯುವಕರಾಗಿ ಸದಾ ಚಟುವಟಿಕೆಗಳಿಂದ ಕೂಡಿರುತ್ತಾರೆ.

ಯುವಕರನ್ನು ನಾಚಿಸುವಂತೆ ಚುರುಕಿನಿಂದ ಓಡಾಡಿಕೊಂಡು ಕೆಲಸ ಮಾಡುವುದನ್ನು ನೋಡುವುದೇ ಒಂದು ಸುಂದರ ಅನುಭವ ಕಲಾಕ್ಷೇತ್ರಕ್ಕಾಗಿ ತಾವೇ ಹಣ ಖರ್ಚುಮಾಡಿಕೊಳ್ಳುವ ಪ್ರವೃತ್ತಿ ಅವರಲ್ಲಿದೆ. ಅವರು ತಮ್ಮ ಮಕ್ಕಳಿಗಾಗಿ ಯಾವುದೇ ದೊಡ್ಡ ಆಸ್ತಿಗಳಿಸಿಲ್ಲ. ಕಲಾವಿದ್ಯಾರ್ಥಿಗಳೆ ನನ್ನ ಮಕ್ಕಳು ನಾನು ರಚಿಸಿದ ಕಲಾಕೃತಿಗಳು, ನಾನು

ಖರೀದಿಸಿದ ಪುಸ್ತಕಗಳೇ ನನ್ನ ಆಸ್ತಿ ಎಂದು ಪಾಟೀಲರು ಹೇಳುತ್ತಾರೆ. ಕೆಟ್ಟ ಮಕ್ಕಳಿಂದಾಗಿ ದುಃಖ, ಕಣ್ಣೀರು ತೊಂದರೆಗಳುಂಟಾಗ ಬಹುದು ಆದರೆ ಕಲಾಕೃತಿ ಮತ್ತು ಪುಸ್ತಕಗಳಿಂದ ಎಂದೂ ದುಃಖ, ಕನ್ನೀರು ಬರುವದಿಲ್ಲ. ಹಾಗಾಗಿ ಅದೇ ನಿಜವಾದ ಸಂಪತ್ತು ಅಭಿಮಾನದಿಂದ ನುಡಿಯುತ್ತಾರೆ. ಪಾಟೀಲರು ಕಲಾವಿಚಾರಗಳನ್ನು ಕುರಿತು ದಿನಗಳವರೆಗೆ ಚರ್ಚಿಸಬಲ್ಲರು. ಆದರೆ ಕಲೆಗೆ ಸಂಬಂಧ ಪಡದ ಮಾತುಗಳಾದರೆ ಅಲ್ಲಿಂದ ಸುಮ್ಮನೆ ಎದ್ದು ಹೋಗುತ್ತಾರೆ. ಹಸಿವು ಬಾಯಾರಿಕೆಗಳನ್ನು ಮರೆತು ಕಲೆಯ ವಿಚಾರಗಳನ್ನು ಇವರು ಚರ್ಚಿಸುತ್ತಾರೆ. ಪಾಟೀಲರು ಹುಬ್ಬಳ್ಳಿಯಲ್ಲಿ ಮೂರುಜನ ಕಲಾವಿದರು ಕೂಡಿಕೊಂಡು ಕಲಾಗುಂಪೊಂದನ್ನು ರಚಿಸಿಕೊಂಡು ಅದರ ಮೂಲಕ ರಾಜ್ಯ ಮತ್ತು ರಾಷ್ಟ್ರ ಮಟ್ಟದಲ್ಲಿ ಪ್ರಥಮ ಬಾರಿಗೆ ಗುರುತಿಸಲ್ಪಟ್ಟರು.

ಒಂದು ಶೈಲಿಯನ್ನು ಅನುಸರಿಸಿಕೊಂಡು ಈ ಮೂವರೂ ಕೃತಿರಚನೆ ಮಾಡುತ್ತಿದ್ದರು. ಪಾಟೀಲರು ಹೆಚ್ಚು ಪ್ರಮಾಣದಲ್ಲಿ ನವ್ಯತೆಗೆ ಹೊರಳಿದ್ದು ಇದೆ ಗುಂಪಿನಲ್ಲಿ, ಬಹುಶ ಬೆಂಗಳೂರು ಭಾಗದಲ್ಲಿ ಅಂದರೆ ದಕ್ಷಿಣ ಕರ್ನಾಟಕದಲ್ಲಿ ಹಡಪದವರ ನೇತೃತ್ವದ 'ನಾವು ನಾವ್ವರು' ಕಲಾ ಗುಂಪು ಉಂಟು ಮಾಡಿದ ಸಂಚಲನ ಹಾಗೂ ಪ್ರತಿಸ್ಪಂದನೆಗಳನ್ನು ಉತ್ತರ ಕರ್ನಾಟಕದಲ್ಲಿ ಎಂ. ಬಿ. ಪಾಟೀಲರು ಹುಬ್ಬಳ್ಳಿಯಲ್ಲಿ ಹುಟ್ಟುಹಾಕಿದ ಮೂವರು ಕಲಾವಿದರ ಗುಂಪು ಉಂಟು ಮಾಡಿತು ಎಂದು ಹೇಳಬಹುದು.

ಪಾಟೀಲರ ವ್ಯಕ್ತಿತ್ವದಲ್ಲಿ ಪ್ರಮುಖ ಅಂಶವೆಂದರೆ ಅನಿಸಿದ್ದನ್ನು ನೇರವಾಗಿ ಹೇಳಿಬಿಡುವುದಾಗಿದೆ. ಅಲ್ಲದೆ ಕಲಾಕೃತಿ ರಚನಾ ವಿಧಾನದಲ್ಲಿ ಯಾವುದೇ ರೀತಿಯ ಹೊಂದಾಣಿಕೆ ತಂತ್ರವನ್ನು ಇವರೆಂದೂ ಒಪ್ಪಿದವರಲ್ಲ. ತಮ್ಮ ಕಲಾಶೈಲಿ, ಕೃತಿಗಳ ಬಗ್ಗೆ ಬಹುಸುಂದರವಾಗಿ ವಿಶ್ಲೇಷಣೆ ಮಾಡುವುದು ಪಾಟೀಲರ ಹೆಚ್ಚುಗಾರಿಕೆ ಜೀವನವನ್ನೇ ಕಲೆಗಾಗಿ ಮುಡಿಪಾಗಿಟ್ಟ ಕೆಲವೇ ವ್ಯಕ್ತಿಗಳಲ್ಲಿ ಪಾಟೀಲರು ಒಬ್ಬರಾಗಿದ್ದಾರೆ. ನಾವು ಕಲಿತ ವಿದ್ಯೆಯನ್ನು ನಾಲ್ಕು ಜನಕ್ಕೆ ಹೇಳಿಕೊಟ್ಟಾಗ ಅದರಿಂದ ಜೀವನ ಸಾರ್ಥಕವಾಗುತ್ತದೆ ಮಾತ್ರವಲ್ಲ ಕಲಿತ ವಿದ್ಯೆಗೆ ಮಹತ್ವ ಉಂಟಾಗುತ್ತದೆ. ಹಾಗಾದಾಗ ಯುವಕರ ಜೀವನವನ್ನು ಕಟ್ಟುವಲ್ಲಿ ಪ್ರಮುಖಪಾತ್ರವಹಿಸಿದಂತಾಗುತ್ತದೆ. ಇಂತಹ ಗುಣಗಳನ್ನು ಹೊಂದಿದವರು ಪಾಟೀಲರಾಗಿದ್ದಾರೆ.

ಯುವಕರನ್ನು ಬೆಳೆಸುವುದಲ್ಲದೆ ಕಲಾಕ್ಷೇತ್ರಕ್ಕೆ ಅನೇಕ ರೀತಿಯಲ್ಲಿ ಕೊಡುಗೆಗಳನ್ನು ಕೊಟ್ಟಿದ್ದಾರೆ. ನಿರಂತರವಾಗಿ ಕಲಾಕೃತಿ ರಚನೆ ಮಾಡುವುದು, ಕಲಾಪ್ರದರ್ಶನಗಳನ್ನು ಆಯೋಜಿಸುವುದು, ಕಲಾಶಿಬಿರ, ಪ್ರಾತ್ಯಕ್ಷಿಕೆಗಳಲ್ಲಿ ಪಾಲ್ಗೊಳ್ಳುವುದು, ಉಪನ್ಯಾಸಗಳನ್ನು ನೀಡುವುದು, ಬೇರೆ ಬೇರೆ ಮಾಧ್ಯಮ, ಶೈಲಿಗಳಲ್ಲಿ ಚಿತ್ರರಚಿಸಿರುವುದು. ಮತ್ತು ಕಲಾಗ್ಯಾಲರಿ, ಕಲಾಗುಂಪುಗಳನ್ನು

ಸ್ಥಾಪಿಸುವ ಮೂಲಕ ಕರ್ನಾಟಕದ ಕಲಾಕ್ಷೇತ್ರಕ್ಕೆ ಅಮೂಲ್ಯ ಕೊಡುಗೆ ಕೊಟ್ಟಿದ್ದಾರೆ. ಕರ್ನಾಟಕದ ಕಲಾ ಕ್ಷೇತ್ರದ ಬೆಳವಣಿಗೆಯ ಬಗ್ಗೆ ಪಾಟೀಲರಿಗೆ ತುಂಬಾ ಅಸಮಾಧಾನವಿದೆ. ಸರಕಾರ ಕಲೆಗೆ ಕೊಡಬೇಕಾದ ಮಹತ್ವ, ಸಹಾಯ, ಸಹಕಾರ ಕಲೆಗೆ ಕೊಟ್ಟಿರುವ ಪ್ರೋತ್ಸಾಹ ತುಂಬಾ ಕಡಿಮೆ ಎನ್ನುವುದು ಇವರ ಅನಿಸಿಕೆ. ಯುವಕರು ಕೇವಲ ಹೆಸರಿಗಾಗಿ ಉದ್ಯೋಗಕ್ಕಾಗಿ ಕಲಾ ಶಿಕ್ಷಣ ಪಡೆದುಕೊಳ್ಳಬಾರದು. ಕಲೆಯನ್ನು ಕಲಿಯುವುದರಿಂದ ಆನಂದ, ಸಂಸ್ಕೃತಿ, ಸಚ್ಚಾರಿತ್ರ್ಯ ಉಂಟಾಗುತ್ತದೆ. ಇದರಿಂದಾಗಿ ಸಾಮಾಜಿಕವಾಗಿ ಗೌರವಾದರಗಳು ಲಭಿಸುತ್ತವೆ. ವೃತ್ತಿಗಿಂತ ಪ್ರವೃತ್ತಿಯಾಗಿ ಕಲೆಯನ್ನು ತೆಗೆದುಕೊಂಡಾಗ ಅದರಿಂದ ದೊರಕುವ ಸಂತೋಷ ಅತೀತವಾಗಿರುತ್ತದೆ. ಹೀಗೆ ಹಲವು ವಿಷಯಗಳನ್ನು ಪಾಟೀಲರು ಯುವಕರಿಗೆ ತಿಳಿಸುತ್ತಾರೆ.

ಸಂಸಾರ ತಾಪತ್ರಯಗಳು ಎಂತಹ ಪ್ರಬುದ್ಧರನ್ನೂ ಅಲ್ಲಾಡಿಸಿಬಿಡುತ್ತವೆ. ಎಂ.ಬಿ. ಪಾಟೀಲರೂ ಇದಕ್ಕೆ ಹೊರತಲ್ಲ. ಆದರೂ ಸಂಸಾರದೊಳಿದ್ದು ಅದನ್ನು ಅತಿಯಾಗಿ ಹಚ್ಚಿಕೊಳ್ಳದೇ ಸರಳ ಬದುಕನ್ನು ಇವರು ನಡೆಸಿದ್ದಾರೆ. ಅದರಿಂದಾಗಿಯೇ ಇವರಿಗೆ ಕಲಾಕ್ಷೇತ್ರಕ್ಕೆ ಹೆಚ್ಚಿನ ಕೊಡುಗೆ ನೀಡಲು ಸಾಧ್ಯವಾಗಿದೆ. ಸಹನಶೀಲ ಸ್ವಭಾವದ ಪಾಟೀಲರು ಯುವಕರ ಬಗ್ಗೆ ಅಪಾರ ಕಳಕಳಿ ಹೊಂದಿದ್ದಾರೆ. ಮುಂದೆ ಕಲಾ ಕ್ಷೇತ್ರವನ್ನು ಮಾತ್ರವಲ್ಲದೆ ಸದೃಢ ಆರೋಗ್ಯಭರಿತ ಸಮಾಜವನ್ನು ರೂಪಿಸುವ ಯುವಕರು ಒಳ್ಳೆಯ ದಾರಿಯಲ್ಲಿ ನಡೆಯಬೇಕೆಂದು ಹೇಳುತ್ತಾರೆ. ಅದಕ್ಕಾಗಿ ಅವರು ಸಮಕಾಲಿನ ವಯಸ್ಕರಿಗಿಂತ ಯುವ ಕಲಾವಿದರೊಂದಿಗೆ ಹೆಚ್ಚಾಗಿ ಬೆರೆಯುತ್ತಾರೆ. ಈ ಸಂದರ್ಭದಲ್ಲಿ ಅವರು ಹೇಳುವ ಕಲಾ ವಿಚಾರಗಳಲ್ಲಿ ಜೊತೆ ಜೊತೆಗೆ ನೈತಿಕತೆ, ಸಾಮಾಜಿಕ ಜವಾಬ್ದಾರಿಯ ಮೌಲ್ಯಗಳನ್ನು ತಿಳಿಸುತ್ತಾರೆ. ಇಂತಹ ವ್ಯಕ್ತಿತ್ವದವರು ಅಪರೂಪ. ಕಲಾ ವಲಯದಲ್ಲಿ ಗುಂಪು ಕಟ್ಟುವುದು, ಯೋಜನೆಗಳನ್ನು ರೂಪಿಸುವುದು, ಅದರ ಮೂಲಕ ಕಲಾ ಚಟುವಟಿಕೆಗಳನ್ನು ಹಮ್ಮಿಕೊಳ್ಳುವುದು ಪಾಟೀಲರ ಹವ್ಯಾಸಗಳಲ್ಲೊಂದಾಗಿದೆ. ಗುಂಪುಗಳಲ್ಲಿ ಗುರುತಿಸಿಕೊಂಡು ನಂತರ ವೈಯಕ್ತಿಕವಾಗಿ ಹೆಸರು ಮಾಡಲು ಅನುಕೂಲವಾಗುತ್ತದೆ. ಇದಕ್ಕೆ ಪಾಟೀಲರ ಕಲಾ ಬದುಕೆ ಉತ್ತಮ ಉದಾಹರಣೆ.

ಪಾಟೀಲರು ದಂಡಾವತಿಮಠರ ನೂತನ ಕಲಾ ಮಂದಿರದಲ್ಲಿ ವಿದ್ಯಾರ್ಥಿಯಾಗಿದ್ದರು. ಆದರೆ ಪರೀಕ್ಷಾ ಸಂದರ್ಭದಲ್ಲಿ ಎಲ್ಲರೂ ಜೆ. ಜೆ. ಕಲಾ ಶಾಲೆಯಲ್ಲಿಯೇ ಸೇರಬೇಕಾಗಿತ್ತು. ಕರ್ನಾಟಕದಿಂದ ಮುಂಬೈಗೆ ಕಲಾ ಶಿಕ್ಷಣ ಪಡೆದುಕೊಳ್ಳಲು ಹೋದ ವಿದ್ಯಾರ್ಥಿಗಳಲ್ಲಿ ಕೆಲವರು ಜೆ. ಜೆ. ಕಲಾಶಾಲೆಯಲ್ಲಿ ಮತ್ತೆ ಕೆಲವರು ನೂತನ ಕಲಾಮಂದಿರದಲ್ಲಿ ಕಲಿಯುತ್ತಿದ್ದರು. ಆದರೆ ಬಿಡುವಿನ ವೇಳೆಯಲ್ಲಿ ಕರ್ನಾಟಕದ ಎಲ್ಲ ವಿದ್ಯಾರ್ಥಿಗಳು ಒಂದೇ ಕಡೆಗೆ ಸೇರಿಕೊಂಡು ಚರ್ಚಿಸುತ್ತಿದ್ದರು. ಪಾಟೀಲರು ತಮ್ಮ ಮನೆಯಲ್ಲಿ ತಂದೆಯವರು ಚಿತ್ರ

ಕಲೆಯನ್ನು ಕಲಿಯಲು ತೀವ್ರವಾಗಿ ವಿರೋಧಿಸಿದರೂ ಮುಂಬೈಗೆ ಬಂದಿದ್ದರು. ಹಾಗಾಗಿ ಅವರ ಒಬ್ಬ ಅಣ್ಣ ಆಗಾಗ ಇವರಿಗೆ ಕಳಿಸುತ್ತಿದ್ದ ಹಣ ಇವರ ಉಪಜೀವನ ಹಾಗೂ ಕಲಾ ಅಧ್ಯಯನಕ್ಕೆ ಸಾಕಾಗುತ್ತಿರಲಿಲ್ಲ. ಆದುದರಿಂದಾಗಿ ಮುಂಬೈನ ಫಾರ್ಮಗಳಲ್ಲಿ ಸಮಯಸಿಕ್ಕಾಗ ಕೆಲಸ ಮಾಡಿ ಅದರಿಂದ ಅಲ್ಪ ಪ್ರಮಾಣದ ಹಣವನ್ನು ಗಳಿಸುತ್ತಿದ್ದರು. ಅದು ಕೂಡಾ ಅವರಿಗೆ ಸಾಕಾಗುವಷ್ಟು ದೊರೆಯುತ್ತಿರಲಿಲ್ಲ. ಕೆಲವು ಸ್ನೇಹಿತರು ಇವರಿಗೆ ಕಾಗದ, ಪೆನ್ಸಿಲ್, ಬಣ್ಣಗಳನ್ನು ಆಗಾಗ ಕೊಡುತ್ತಿದ್ದರು. ಇವರು ಹೆಚ್ಚು ಮಹತ್ವಾಕಾಂಕ್ಷೆಯುಳ್ಳವರು, ಸೃಜನಶೀಲ ಪ್ರವೃತ್ತಿಯವರೂ ಆಗಿರು ಕಾರಣ ಇತರರಿಗಿಂತ ಹೆಚ್ಚಿನ ಕಲಾ ಪರಿಕರಗಳು ಇವರಿಗೆ ಬೇಕಾಗುತ್ತಿತ್ತು.

ಇತರ ವಿದ್ಯಾರ್ಥಿಗಳು ಒಂದು ಕಲಾಕೃತಿ ರಚಿಸುವ ಸಂದರ್ಭದಲ್ಲಿ ಇವರು ಎರಡರಿಂದ ಮೂರು ಕಲಾಕೃತಿ ರಚಿಸುತ್ತಿದ್ದರು. ಕಾರಣ ಹೆಚ್ಚಿನದನ್ನು ಕಲಿಯಬೇಕೆಂಬ ಹಂಬಲ ಇವರಲ್ಲಿತ್ತು. ಭಾವಚಿತ್ರ, ವ್ಯಕ್ತಿ ಚಿತ್ರಗಳನ್ನು ಉಳಿದವರು ಎರಡು ಅಥವಾ ಮುರು ದಿನಗಳಿಗೆ ಒಂದು ಕೃತಿಯನ್ನು ರಚಿಸಿದರೆ, ಇವರು ಒಂದು ಅಥವಾ ಎರಡು ತಾಸಿಗೊಂದರಂತೆ ವಿದ್ಯಾರ್ಥಿದೆಸೆಯಲ್ಲಿಯೇ ಚಿತ್ರಿಸುತ್ತಿದ್ದರು. ಹಾಗಾಗಿ ಇವರಿಗೆ ಕಲಾ ಪರಿಕರಗಳ ಅವಶ್ಯಕತೆ ಹೆಚ್ಚಾಗಿರುತ್ತಿತ್ತು. ಸಾಲದಕ್ಕೆ ಬಡತನ ಬೇರೆ ಇವರಿಗೆ ಕಾಡುತ್ತಿತ್ತು.

ಇಂತಹ ಕಠಿಣ ಪರಿಸ್ಥಿತಿಯಲ್ಲಿ ಅವರು ಪರಿಶ್ರಮವಹಿಸಿ ಏಕಾಗ್ರತೆಯಿಂದ ಕಲಿಯುತ್ತಿದ್ದರು. ಇವರ ಈ ಸ್ಥಿತಿಯನ್ನು ಕಂಡು ಗುರುಗಳಾದ ದಂಡಾವತಿಮಠರು ಪಾಟೀಲರಿಗೆ ಹೆಚ್ಚಿನ ಸಹಾಯ ಸಹಕಾರ ಕೊಡುತ್ತಿದ್ದರು. ಪಾಟೀಲರು ಎಲ್ಲರೊಂದಿಗೆ ಹೊಂದಿಕೊಂಡು ಹೋಗುವ ಅನನ್ಯತೆಯ ಸ್ವಭಾವದವರಾಗಿದ್ದರು. ಹಾಗಾಗಿಯೇ ಅವರು ಹೆಚ್ಚು ಆತ್ಮೀಯರಾಗಿದ್ದರು ಪಾಟೀಲರಿಗೆ ಅಂದಿನ ವಿದ್ಯಾರ್ಥಿ ದಿನಗಳಲ್ಲಿಯೂ ಉತ್ತರ ಕರ್ನಾಟಕದವರೆಂದರೆ ವಿಶೇಷ ಪ್ರೀತಿ, ತಮ್ಮ ಕಲಾಕೃತಿಯ ರಚನಾ ವಿಧಾನ, ಶೈಲಿ, ವಸ್ತುವಿಷಯ, ಸಂಯೋಜನೆ ಮುಂತಾದ ತಾಂತ್ರಿಕ ಅಂಶಗಳನ್ನು ಸಮಕಾಲೀನ ವಿದ್ಯಾರ್ಥಿ ಮಿತ್ರರೊಂದಿಗೆ ಹಂಚಿಕೊಳ್ಳುತ್ತಿದ್ದರು. ಹಿರಿಯ ಮಿತ್ರರಿಂದ ಸಲಹೆ ಸೂಚನೆಗಳನ್ನೂ ಪಡೆದುಕೊಳ್ಳುತ್ತಿದ್ದರು.

ಮುಂಬೈನಲ್ಲಿ ಅಂದಿನ ದಿನಗಳಲ್ಲಿ ಜೆ. ಜೆ. ಕಲಾಶಾಲೆಯಲ್ಲದೆ ಇನ್ನುಳಿದ ಕಲಾಶಾಲೆಗಳು ಕಲಾ ಶಿಕ್ಷಣವನ್ನು ಕೊಡುತ್ತಲಿದ್ದವು. ಆದರೆ ಪಠ್ಯಕ್ರಮ ಮಾತ್ರ ಒಂದೇ ತೆರನಾಗಿ ಏಕರೂಪತೆಯಿಂದ ಕೂಡಿತ್ತು. ಒಟ್ಟು ಐದು ವರ್ಷಗಳ ಕಲಾ ಶಿಕ್ಷಣ ಪದ್ಧತಿ ಜಾರಿಯಲ್ಲಿತ್ತು. ಅಲ್ಲಿ ಪ್ರಮುಖವಾಗಿ ಮಾದರಿ ನಕ್ಷಾ ಚಿತ್ರಣ, ಜಾಮೆಟ್ರಿ, ಭಾವಚಿತ್ರಣ, ಸ್ಥಿರಚಿತ್ರಣ, ಮೂರ್ತಿಶಿಲ್ಪ, ಮಾದರಿ ಚಿತ್ರಣ ಎಂಬ ವಿಷಯಗಳು ಕಲಿಸಲ್ಪಡುತ್ತಿದ್ದವು. ಇವುಗಳಲ್ಲಿ ಪಾಟೀಲರು ಭಾವಚಿತ್ರಣ, ಸ್ಥಿರಚಿತ್ರಣಗಳಲ್ಲಿ ಹೆಚ್ಚು ಆಸಕ್ತಿಉಳ್ಳವರಾಗಿದ್ದರು. ಸಂಯೋಜನೆ (ಕಂಪೋಜೇಷನ್)

ಒಂದು ಪ್ರಮುಖ ವಿಷಯವಾಗಿದ್ದು, ಇಪ್ಪತ್ತನಾಲ್ಕು ದಿನಗಳವರೆಗೆ ಇದನ್ನು ಪರೀಕ್ಷಾ ಸಂದರ್ಭದಲ್ಲಿ ರಚಿಸಬೇಕಾಗಿತ್ತು.

ಮೊದಲಿಗೆ ಮೂರು ಅಥವಾ ನಾಲ್ಕು ಕೀ ಸ್ಕೆಚ್ ಗಳನ್ನು (ಕರಡು ಚಿತ್ರಣ) ಜಲವರ್ಣದಿಂದ ರಚಿಸಿಕೊಂಡು ಹೋಗಬೇಕಿತ್ತು. ಅದರಲ್ಲಿ ಒಂದನ್ನು ಶಿಕ್ಷಕರು ಆಯ್ಕೆ ಮಾಡುತ್ತಿದ್ದರು. ಆಯ್ಕೆ ಮಾಡಿದ ಕೃತಿಯನ್ನು ಕ್ಯಾನವಾಸ ಮೇಲೆ ರಚಿಸಬೇಕಾಗುತ್ತಿತ್ತು. ಪಾಟೀಲರು ಸಂಯೋಜನಾ ಚಿತ್ರಣವನ್ನು ಅತ್ಯಂತ ಆಸಕ್ತಿಯಿಂದ ಚಿತ್ರಿಸುತ್ತಿದ್ದರು. ವಿದ್ಯಾರ್ಥಿದೆಸೆಯಲ್ಲಿಯೇ ಅವರು ಒಂದು ಶೈಲಿಯನ್ನು ಕಂಡುಕೊಳ್ಳಲು ಹವಣಿಸುತ್ತಿದ್ದರು, ಸರಳತೆ, ಸಾಂಕೇತಿಕತೆ, ವರ್ಣವೈವಿಧ್ಯತೆಗಳನ್ನು ಅವರು ಸಂಯೋಜನಾ ಕೃತಿಗಳಲ್ಲಿ ಆವಾಗಲೇ ಕಂಡು ಬರುತ್ತಿದ್ದವು. ಗ್ರಾಮೀಣ ಪರಿಸರ, ಮಹಿಳೆ, ಪಕ್ಷಿ, ಕುದುರೆ ಮುಂತಾದ ವಿಷಯಗಳು ಅಂದಿಗೂ ಅವರನ್ನು ಕಾಡುತ್ತಿದ್ದವು.

ಪಾಟೀಲರು ಶಾಂತವರ್ಣಗಳಿಗೆ ಬಿಳಿವರ್ಣವನ್ನು ಮಿಶ್ರಮಾಡಿಕೊಂಡು ಚಿತ್ರಿಸುತ್ತಾರೆ. ಪಾಟೀಲರು ಭಾವಚಿತ್ರ, ವ್ಯಕ್ತಿಚಿತ್ರ, ಸಂಯೋಜನಾಚಿತ್ರ, ರೇಖಾಚಿತ್ರ, ನಿಸರ್ಗಚಿತ್ರ, ಅಮೂರ್ತಚಿತ್ರ, ಸ್ಥಿರಚಿತ್ರ ಹೀಗೆ ವೈವಿಧ್ಯ ಪ್ರಕಾರಗಳಲ್ಲಿ ಸಹಜವಾಗಿ ಚಿತ್ರಿಸುವರಲ್ಲದೆ ಕೋಲಾಜ್ ಕಲಾಕೃತಿಗಳನ್ನು ಪ್ರಬುದ್ಧವಾಗಿ ರಚಿಸುತ್ತಾರೆ. ಜೊತೆಗೆ ಸಂಗೀತ, ಸಾಹಿತ್ಯ, ನಾಟಕ ಕ್ಷೇತ್ರದಲ್ಲಿ ಆಸಕ್ತಿ ಹೊಂದಿದ್ದು ಅವುಗಳಲ್ಲಿಯೂ ಕೃಷಿ ಮಾಡಿದ್ದಾರೆ. ವಿಚಾರ ಸಂಕಿರಣಗಳು, ಉಪನ್ಯಾಸಗಳು, ಚರ್ಚಾಕೂಟಗಳಂತಹ ಸಂದರ್ಭಗಳಲ್ಲಿ ಪಾಟೀಲರು ಯಾವಾಗಲೂ ಮಾತನಾಡಲು ಮುಂದಾಗಿರುತ್ತಾರೆ. ಉಳಿದವರಿಗಿಂತ ಸ್ವಲ್ಪ ಹೆಚ್ಚಾಗಿ ಮಾತನಾಡುತ್ತಾರೆ. ಕಾರಣ ಅವರಲ್ಲಿ ಮಾತನಾಡುವ ಕಲೆ ಇದೆ. ಅವರು ಅನೇಕ ವಿಷಯಗಳ ಬಗ್ಗೆ ತಿಳಿದುಕೊಂಡಿದ್ದಾರೆ. ಸಾಹಿತ್ಯ ಸಂಗೀತ, ಚಲನಚಿತ್ರ, ನಾಟಕ ಮುಂತಾದ ವಿಷಯುಗಳನ್ನು ಓದಿ, ಅನುಭವದಿಂದ ತಿಳಿದುಕೊಂಡಿರುವುದು ಮಾತ್ರವಲ್ಲದೆ ರಾಜಧಾನಿಯಂತಹ ಸ್ಥಳದಲ್ಲಿ ನೆಲೆಸಿರುವುದರಿಂದ ಮೇಲೆ ಹೇಳಿದಂತಹ ಅನೇಕ ಕ್ಷೇತ್ರಗಳ ವಿದ್ವಾಂಸರೊಂದಿಗೆ ನಿಕಟ ಸಂಪರ್ಕ ಹೊಂದಿದ್ದಾರೆ.

ಹಾಗಾಗಿ ಅವರು ಯಾವುದೇ ವಿಷಯದ ಬಗ್ಗೆ ನಿರರ್ಗಳವಾಗಿ ಮಾತನಾಡಬಲ್ಲ ಪಾಟೀಲರು ಚಿಕ್ಕಂದಿನಿಂದಲೂ ಅನ್ಯಾಯ, ದಬ್ಬಾಳಿಕೆ, ಮೋಸ, ತಾರತಮ್ಯಗಳನ್ನು ಸಹಿಸುತ್ತಿರಲಿಲ್ಲ. ಸ್ಮರಣಚಿತ್ರಣ ವಿಷಯವನ್ನು ತುಂಬಾ ಆಸಕ್ತಿಯಿಂದ ರಚಿಸುತ್ತಿದ್ದರು. ಹೈಸ್ಕೂಲ ಹಂತದಲ್ಲಿಯೆ ಚಿತ್ರಕಲಾ ಶಿಕ್ಷಕರ ಮಾರ್ಗದರ್ಶನದಲ್ಲಿ ಹಲವಾರು ಚಿತ್ರಕಲಾ ಪ್ರದರ್ಶನಗಳನ್ನು ಮಾಡಿದ್ದಾರೆ. ಪಾಟೀಲರು ಹುಬ್ಬಳ್ಳಿಯಲ್ಲಿ ವಾರ್ತಾ ಮತ್ತು ಪ್ರಚಾರ ಇಲಾಖೆಯಲ್ಲಿ ಕೆಲಸ ಮಾಡುತ್ತಿದ್ದುದು ಅವರ ವೃತ್ತಿಯಾಗಿತ್ತು. ಪ್ರವೃತ್ತಿಯಿಂದ ಅವರೊಬ್ಬ ಕಲಾವಿದರಾಗಿದ್ದು ಸುಬ್ಬಣ್ಣ, ಕ್ಷತ್ರಿಯವರೊಂದಿಗೆ

ಕೂಡಿ, "ತ್ರಿವಳಿ" ಎಂಬ ಕಲಾ ಗುಂಪನ್ನು ರಚಿಸಿಕೊಂಡು ಕಲಾಕ್ಷೇತ್ರದಲ್ಲಿ ಬಹಳ ಕೆಲಸ ಮಾಡಿದ್ದಾರೆ. ಆ ಸಂದರ್ಭದಲ್ಲಿ ಪಾಟೀಲರ ಹೆಸರು ಬಹಳವಾಗಿ ಕೇಳಿಬರುತ್ತಿತ್ತು ಮನೆಗೆ ಬಂದ ಮುತ್ತೈದೆಯರಿಗೆ ಕುಂಕುಮ ಕೊಡುವಷ್ಟು ಸಹವಾಗಿ ಎಂ. ಬಿ. ಪಾಟೀಲರು ತಮ್ಮ ಹತ್ತಿರಕ್ಕೆ ಬರುವ ಗೆಳೆಯರಿಗೆ ತಮ್ಮ ಕಲೆಯ ತಿಲಕವನ್ನಿಟ್ಟು ಕಳಿಸುತ್ತಾರೆ. ಅವರು ರೂಪುಗೊಂಡ ಬಗೆಯನ್ನು ಅವರ ಮಾತಿಗಳಿಂದ, ಅನುಭವಗಳಿಂದ ಅದ್ಭುತ ಕಲಾಕೃತಿಗಳಿಂದ ತಿಳಿದುಕೊಂಡಾಗ, ಕಣ್ಣುಗಳು ಹೆಮ್ಮೆಯಿಂದ ಹನಿಗೂಡುತ್ತವೆ. ಕವಿ ದ. ರಾ. ಬೇಂದ್ರೆಯವರು ಸಹಜವಾಗಿ ಮಾತನಾಡುವಾಗಲೂ ಕಾವ್ಯ ಶೃಂಗಾರದ ಲೇಪನವಿರುತ್ತಿತ್ತು. ಹಾಗೆಯೇ ಪಾಟೀಲರ ಮಾತು, ಮಾತಿನಲ್ಲೂ ಕಲೆಯ ಲೇಪನವಿರುತ್ತದೆ. ಅವರು ಗೆಳೆಯರೊಂದಿಗೆ ಮಾತನಾಡುತ್ತ ಕುಳಿತರೆಂದರೆ, ಸಮಯ ಸರಿದದ್ದು ತಿಳಿಯುವುದಿಲ್ಲ. ತನ್ನ ಮಾಂತ್ರಿಕ ಮುಗುಳುನಗೆಯಲ್ಲಿ, ಕಣ್ಣುಗಳ ಕಾಂತಿಯಲ್ಲಿ, ಮಾತಿನ ಮೋಡಿಯಲ್ಲಿ ಹಲವಾರು ವಿಷಯಗಳ ಗಂಭೀರ ಚರ್ಚೆಯ ವಿಸ್ತಾರದಲ್ಲಿ ತೇಲಿಸಿ, ಬೇರೊಂದು ಲೋಕಕ್ಕೆ ಕರೆದೊಯ್ಯುವ ಗಾರುಡಿಗ.

ಎಂ. ಬಿ. ಪಾಟೀಲರ ಹಿರಿಯ ಸಹೋದರ ದಿ. ಶಿವನಗೌಡರು ವ್ಯಾಪಾರದ ಜೊತೆಗೆ ಸಂಗೀತ, ಸಾಹಿತ್ಯ, ಚಿತ್ರಕಲೆ, ಬಯಲಾಟಗಳಲ್ಲಿ ಬಹಳ ಆಸಕ್ತಿ ಹೊಂದಿದ್ದರು. ಊರಲ್ಲಿ ದೊಡ್ಡ ಗೆಳೆಯರ ಗುಂಪೆ ಇತ್ತು. ಕೀರ್ತನ ಕೇಸರಿ ಎನಿಸಿದ್ದ ದಿ. ದಾನಪ್ಪಾ ಜತ್ತಿ ಎಲ್ಲರಿಗೂ ಮಾರ್ಗದರ್ಶನ ಮಾಡುತ್ತಿದ್ದರು. ವೀರಣ್ಣ ಇಜೇರಿ, ದಿ. ಈರಯ್ಯ ಸಾಲಿಮಠ, ದಿ. ಸಂಗಪ್ಪ. ಮಮದಾಪುರ, ಹಲವೇಗಾರ ಮಾಸ್ತರರು, ದಿ. ಗೂಳಪ್ಪ ಅವಟಿ, ಶಿವಪ್ಪ. ಕುಂಬಾರ, ದಿ. ಹಾಜಪ್ಪ ಕುಂಬಾರ ಮೊದಲಾದವರು ಗ್ರಾಮದ ಜೀವನಾಡಿಯಂತಿದ್ದರು. ಕಲಾವಿದ ಎಂ. ಬಿ. ಪಾಟೀಲರು ಇಂತವರ ಒಡನಾಟದಲ್ಲೇ ಬೆಳೆದವರು. ಆದರೂ ಎಂ. ಬಿ. ಪಾಟೀಲರ ಗುರಿಯೇ ಬೇರೆಯಾಗಿತ್ತು. ಅವರೊಳಗಿನ ಕಲಾವಿದ ಪರಿಪೂರ್ಣತೆಯನ್ನು ಮುಟ್ಟಲು ಗುದ್ದಾಡುತ್ತಲೇ ಇದ್ದ.

ಪಾಟೀಲರನ್ನು ಅರ್ಥ ಮಾಡಿಕೊಂಡು ಸರಿಯಾದ ಮಾರ್ಗದತ್ತ ಕೊಂಡ್ಯೊಯಲು ಸದಾ ಸಹಾಯ ಹಸ್ತವನ್ನು ನೀಡಿದವರು ಅವರ ಹಿರಿಯ ಅಣ್ಣ ಶಿವನಗೌಡರು. ಈ ದಿಸೆಯಲ್ಲಿ ಎಂ. ಬಿ. ಪಾಟೀಲರು ಪಟ್ಟ ಪಾಡನ್ನು ಅವರಿಂದ ತಿಳಿದಾಗ, ಅವರು ಎಂತಹ ಕಬ್ಬಿಣದ ಮನುಷ್ಯ ಎಂಬುದು ಅರಿವಾಗುತ್ತದೆ. ಅವರು ಅಂದು ಎದುರಿಸಿದ ಸಮಸ್ಯೆಗಳು, ಕಷ್ಟಗಳು, ಕಳೆದ ಉಪವಾಸದ ದಿನಗಳು ಅವರನ್ನು ಸಂಪೂರ್ಣ ಹಣ್ಣಾಗಿಸಿದವು. ಜೊತೆಗೆ ನಿರಾಡಂಬರತೆ ಕಷ್ಟಸಹಿಷ್ಣುತೆ, ಸೌಜನ್ಯ, ವಿಶಾಲ ಮನೋಭಾವನೆ, ಹೃದಯವಂತಿಕೆಗಳು ಅವರ ವ್ಯಕ್ತಿತ್ವಕ್ಕೆ ರಂಗು ತುಂಬಿದ್ದವು. ಹುಬ್ಬಳ್ಳಿಯಲ್ಲಿ ಕಲಾವಿದ ಗೆಳೆಯರ ಗುಂಪೇ ಇತ್ತು.

ಭಾರತ ಸ್ಟುಡಿಯೋದಲ್ಲಿ ಪಾಟೀಲರು ಕುಳಿತು ಗಂಟೆಗಳ ಕಾಲ ಚರ್ಚೆ ಮಾಡುತ್ತಿದ್ದರು. ಡಾ. ಶಿವರಾಂ ಕಾರಂತ, ಡಾ. ಬುದ್ದಣ್ಣಾ ಹಿಂಗಮಿರೆ, ಡಾ. ಚಂದ್ರಶೇಖರ ಪಾಟೀಲ, ಅಲ್ಲಿಗೆ ಬರುತ್ತಿದ್ದರು. ಪಾಟೀಲರ ವೈಚಾರಿಕ ಗಾಂಭೀರ್ಯಕ್ಕೆ ಈ ಮಹನೀಯರ ಸಂಪರ್ಕವು ಕಾರಣವೆಂಬುದನ್ನು ಅಲ್ಲಗಳೆಯಲಾಗದು.

ಪಾಟೀಲರು ಊರಿಗೆ ಬಂದಾಗಲೆಲ್ಲಾ, ಅವರನ್ನು ಊರಿನ ಜನರು ಬಹಳ ಪ್ರೀತಿ, ವಾತ್ಸಲ್ಯದಿಂದ ಕಾಣುತ್ತಿದ್ದರು. ಊರಿನ ಬಾಜಾರಿನಲ್ಲಿ ಎಲ್ಲ ಅಂಗಡಿಯವರು ಇವರನ್ನು ಕಂಡು ಅಭಿಮಾನದಿಂದ ಮಾತನಾಡಿಸುವರು. ಒಂದು ಅಂಗಡಿಯಿಂದ ಮತ್ತೊಂದು ಅಂಗಡಿಗೆ ಹೋಗಿ ಕುಳಿತು ಚರ್ಚೆಯಲ್ಲಿ ಮುಳುಗುತ್ತಿದ್ದರು. ಪ್ರಾಪಂಚಿಕ ಮಾತುಗಳಿಂದ ಪ್ರಾರಂಭಗೊಂಡ ಅವರ ಚರ್ಚೆ ಎಲ್ಲೆಲ್ಲೋ ತಿರುಗಿ, ಕಲಾಕ್ಷೇತ್ರಕ್ಕೆ ಹೊರಳುತ್ತಿತ್ತು. ಪಾಟೀಲರ ವಿಚಾರಗಳು, ಮಾತನಾಡುವ ಶೈಲಿ, ಇತರರೊಂದಿಗೆ ಬೆರೆಯುವಲ್ಲಿ ಯಾವ ಆಡಂಬರ ಇರುತ್ತಿರಲಿಲ್ಲ. ತಮ್ಮ ಕಲಾಯಾತ್ರೆಯ ಹಲವಾರು ಪ್ರಸಂಗಗಳನ್ನು ಮುಕ್ತವಾಗಿ ತೆರೆದಿಡುತ್ತಿದ್ದರು.

೧೯೯೦ ರಲ್ಲಿ ನಡೆದ ಪ್ರಸಂಗವನ್ನು ಎಂದಿಗೂ ಮರೆಯಲಾಗದು. ಇವರ ಸಾಧನೆ, ಸಿದ್ಧಿಯ ಪರಿಚಯವಾದ ದಿನವನ್ನು ಇಂದಿಗೂ ಎಲ್ಲರೂ ಸ್ಮರಿಸುತ್ತಾರೆ. ಊರಿನ ಶ್ರೀ ಗಜಾನನ ಮಾಧ್ಯಮಿಕ ಶಾಲೆಯಲ್ಲಿ (ಇಂದು ಶಾಲೆಯ ಹೆಸರು ಬದಲಾಗಿದೆ) ನಡೆದ ಸಾಂಸ್ಕೃತಿಕ ವಿಭಾಗದ ಉದ್ಘಾಟನಾ ಸಮಾರಂಭಕ್ಕೆ ಎಂ. ಬಿ. ಪಾಟೀಲರು ಮುಖ್ಯ ಅತಿಥಿಗಳಾಗಿದ್ದರು. ಅಂದು ಆಡಿದ ಮಾತುಗಳು ಹೀಗಿದ್ದವು. ನಿಜವಾದ ಕಲಾವಿದ ಮಾತನಾಡಬಾರದು. ಆತನ ಕಲಾಕೃತಿಗಳು ಮಾತನಾಡಬೇಕು. ಕಲೆಯ ಆಂತರ್ಯ ತಿಳಿಯುವುದು ಮಾತಿನಿಂದಲ್ಲ, ಕೃತಿಯಿಂದ, ಜಗತ್ತಿನ ಸೌಂದರ್ಯ ಇರುವುದು ಅವರ ಗಂಭೀರವಾದ ಮೌನದಲ್ಲಿ ಕೃತಿ ಮೌನವಾಗಿದ್ದರೂ ಅದರ ಮಾತನ್ನು ಕೇಳುವ ಸೂಕ್ಷ್ಮ ಕಿವಿಗಳನ್ನು ನೋಡುವ ಕಣ್ಣುಗಳನ್ನು ನಾವು ಹೊಂದಿರಬೇಕು. ಸೂರ್ಯನ ಪ್ರಕಾಶ, ಚಂದ್ರನ ತಂಪಾದ ಚಲುವು, ಹರಿವ ನದಿಗಳ ಕಲರವ, ಹಾರುವ ಹಕ್ಕಿಗಳ ಚಂದ, ಗಂಭೀರವಾಗಿ ತಲೆಯತ್ತಿನಿಂತ ಪರ್ವತಗಳ ಮಾತು ಕಲಾವಿದನಿಗೆ ಮಾತ್ರ ಕೇಳಿಸುತ್ತದೆ. ನಿಸರ್ಗದ ಮಾತನ್ನು ಬಣ್ಣದ ಮೂಲಕ ಕಲಾವಿದ ನಮ್ಮ ಮುಂದೆ ಇಡುವ ಕೆಲಸ ಮಾಡುತ್ತಾನೆ ಎಂದು ಪಾಟೀಲರು ಹೇಳಿದರು. ನಂತರ ಪಾಟೀಲರಲ್ಲಿಯ ಕಲಾವಿದ ಜಾಗೃತನಾಗಿದ್ದ, ನೂರಾರು ಡ್ರಾಯಿಂಗ ಶೀಟಗಳನ್ನು ತರಿಸಲಾಗಿತ್ತು. ಪಾಟೀಲರು ಮಕ್ಕಳಿಗೆ, ತಮಗೆ ಗೊತ್ತಿರುವ ಕವಿಗಳ, ರಾಜಕಾರಣಿಗಳ, ಕಲಾವಿದರ, ರಾಷ್ಟ್ರನಾಯಕರ, ಹಸರುಗಳನ್ನು ಹೇಳಲು ತಿಳಿಸಿದರು. ಅಪಾರ ವಿದ್ಯಾರ್ಥಿ ಸಮೂಹವೇ ನೆರೆದಿತ್ತು. ಪಾಟೀಲರ ಕಲೆಯ ಸಿದ್ಧಿಯನ್ನು ಪ್ರತ್ಯಕ್ಷವಾಗಿ ಕಾಣಲು ಬಂದಿದ್ದ ಊರಿನ ಗಣ್ಯ ಜನರೆಲ್ಲ ಮೂಕವಿಸ್ಮಿತವಾಗಿ

ಕುಳಿತಿದ್ದರು. ವಿದ್ಯರ್ಥಿಗಳು ತಮಗೆ ತಿಳಿದ ನಾಯಕರ, ಕವಿಗಳ, ಧುರೀಣರ ಹೆಸರುಗಳನ್ನು ಹೇಳಿದ ತಕ್ಷಣವೇ ವ್ಯಂಗ್ಯ ಚಿತ್ರಗಳನ್ನು ಬಿಡಿಸಿಡುತ್ತಿದ್ದರು. ಹಿಂದೆ ಕುಳಿತ ವಿದ್ಯಾರ್ಥಿಗಳು, ಆನಂದಾಶ್ಚರ್ಯಗಳಿಂದ ತಮಗಾದ ಸಂತಸವನ್ನು ಚಪ್ಪಾಳೆಯ ಸುರಿಮಳೆಯಿಂದ ಪ್ರಕಟಿಸುತ್ತಿದ್ದರು. ಇದೊಂದು ರೋಮಾಂಚನಕಾರಿ ಸನ್ನಿವೇಶವಾಗಿತ್ತು. ಹೊಗಳಿಕೆ, ತೆಗಳಿಕೆಯಿಂದ ದೂರವಿರುವ ಪಾಟೀಲರು ಪ್ರತಿಭೆಯನ್ನು ಗೌರವಿಸುವ ಗುಣಗ್ರಾಹಿಗಳು ಇವರು ಕಲಾವಿದರ ಗುಂಪಿನಲ್ಲಿ ಎದ್ದು ಕಾಣುವ ವ್ಯಕ್ತಿತ್ವವುಳ್ಳವರು. ಕಲಾತಪಸ್ವಿಯಾಗಿ ಪ್ರಯೋಗಶೀಲತೆ, ಸೃಜನಶೀಲತೆಗಳನ್ನು ಮೈಗೂಡಿಸಿಕೊಂಡ ಅಪರೂಪದ ಕ್ರೀಯಾಶೀಲ ಕಲಾವಿದರು. ಈ ದಿಸೆಯಲ್ಲಿ ಅವರ ಒಬ್ಬನೇ ಸಹೋದರನಾದ ಉಗರಗೋಳ ದವರಾದ ಶ್ರೀ ರಾಮನಗೌಡ ಟೋಪನ್ನವರ ಅವರು ಅಕ್ಕನನ್ನು ಮತ್ತು ಅಕ್ಕನ ಮಕ್ಕಳನ್ನು ಅತ್ಯಂತ ವಾತ್ಸಲ್ಯದಿಂದ ನೋಡುತ್ತ ಕುಟುಂಬಕ್ಕೆ ಬೆಂಬಲವಾಗಿ ನಿಂತಿದ್ದರು. ಇಂತಹ ಸಹೋದರ ವಾತ್ಸಲ್ಯದನಂಟು ಅಪರೂಪದ್ದಾಗಿದೆ. ಕೌಟುಂಬಿಕ ಜೀವನದಲ್ಲಿ ಹೆಂಡತಿಯಾಗಿ, ತಾಯಿಯಾಗಿ, ಅಕ್ಕರೆಯ ಅಕ್ಕನಾಗಿ, ದಿ. ಕಸ್ತೂರಬಾಯಿಯವರು ಆದರ್ಶ ಬಾಳನ್ನು ಬಾಳಿದವರು. ಕನ್ನಡದ ಮೇರು ಚಿತ್ರನಟಿ ತಾರಾ, ಸುಧಾರಾಣಿ ಮುಂತಾದವರು. ದಿ. ಕಸ್ತೂರಬಾಯಿಯವರನ್ನು 'ಅವ್ವಾ' ಎಂದೇ ಕರೆಯುತ್ತಿದ್ದರು. ಪಾಟೀಲರ ಸಂಪೂರ್ಣ ವ್ಯಕ್ತಿತ್ವದಲ್ಲಿ ದಿ. ಕಸ್ತೂರಬಾಯಿಯವರ ಸ್ಥಾನ ಬಹುದೊಡ್ಡದು. ನೆರಳಿನಂತೆ ಪಾಟೀಲರ ಹೆಜ್ಜೆಯಲ್ಲಿ ಹೆಜ್ಜೆಯಿಟ್ಟು ನಡೆದವರು. ಪಾಟೀಲರ ಬದುಕಿನ ಕಲಾಯಾತ್ರೆಯಲ್ಲಿ ಇವರ ಪಾತ್ರವನ್ನು ಯಾರೂ ಮರೆಯುವಂತಿಲ್ಲ.

ಪಾಟೀಲರ ಮಕ್ಕಳಾದ ಶ್ರೀಮತಿ ಕಲಾವತಿ, ಶ್ರೀಮತಿ ಮೀನಾಕ್ಷಿ, ಶ್ರೀಮತಿ ವಾಣಿ, ಶ್ರೀ ಅನಿಲ, ಶ್ರೀ ಜಗದೀಶ ಇವರೆಲ್ಲ ತಮ್ಮ ತಂದೆಯವರನ್ನು ಸಾಕಷ್ಟು ಪ್ರೀತಿ ಅಭಿಮಾನಗಳಿಂದ ಕಂಡವರು. ತಂದೆಯ ಕಲಾ ತಪಸ್ಸಿಗೆ ಭಂಗ ಬಾರದಂತೆ ಸಹಕರಿಸಿದವರು. ಕನ್ನಡ ಚಿತ್ರರಂಗದ ಹಲವಾರು ಕಲಾವಿದರು. ಛಾಯಾಚಿತ್ರಗಾರರು, ಪಾಟೀಲರಿಂದ ಮಾರ್ಗದರ್ಶನ ಪಡೆದಿದ್ದಾರೆ. ಪಾಟೀಲರಿಗೆ ಹಿಂದುಸ್ಥಾನಿ ಶಾಸ್ತ್ರಿಯ ಸಂಗೀತವೆಂದರೆ ಪ್ರಾಣ. ದೇಶದ ಎಲ್ಲ ಹಿರಿ-ಕಿರಿಯ ಕಲಾವಿದರ ಗಾಯನವನ್ನು ಕೇಳಿ ಆನಂದಿಸುತ್ತಾರೆ. ಅನೇಕ ವೇಳೆ ಗಾಯನ ಕಾಲದಲ್ಲಿ ರಾಗಗಳ ಚಿತ್ರಗಳನ್ನು ಬಿಡಿಸಿ, ರಾಗಗಳ ಭಾವಗಳನ್ನು ತಮ್ಮ ಚಿತ್ರಗಳಲ್ಲಿ ಸೆರೆಹಿಡಿದಿದ್ದೂ ಇದೆ. ಪ್ರಯೋಗ ಶೀಲತೆ ಕಲಾವಿದನ ಜೀವಂತಿಕೆಯನ್ನು ತೋರಿಸುತ್ತದೆ ಹಳ್ಳಿಯಲ್ಲಿ ದನಕಾಯುತ್ತಿದ್ದ ಹುಡುಗ ಕೊನೆಗೂ ಕಲಾಸೂರ್ಯನಾಗಿ ಕರ್ನಾಟಕದ ಆಗಸದಲ್ಲಿ ಮೂಡಬಂದನೆಂಬುದು ಅವರ ಕಲಾ ಬದುಕನ್ನು ಅವಲೋಕಿಸಿದಾಗ ತಿಳಿದು ಬರುತ್ತದೆ.

* * * * *



ಎಂ.ಬಿ.ಪಾಟೀಲರ ಮದುವೆಯ ಛಾಯಾಚಿತ್ರ



ಕುಟುಂಬದೊಂದಿಗೆ ಕಲಾವಿದ ಎಂ.ಬಿ.ಪಾಟೀಲರು



ಕಲಾವಿದ ಎಂ.ಬಿ.ಪಾಟೀಲ ಮತ್ತು ಅವರ ಅತ್ತಿಗೆ ಹಾಗೂ
ಸಂಶೋಧಕ ಎಸ್.ಎಸ್.ಗದ್ದಿ



ದಂದರ್ಗಿ ಗ್ರಾಮದಲ್ಲಿರುವ ಸಹ ಕುಟುಂಬದೊಂದಿಗೆ ಎಂ.ಬಿ.ಪಾಟೀಲರು



ಎಂ.ಬಿ.ಪಾಟೀಲರ ಪ್ರಾಥಮಿಕ ಹಂತದಲ್ಲಿ ವ್ಯಾಸಂಗಮಾಡಿದ ಶಾಲೆ



ಎಂ.ಬಿ.ಪಾಟೀಲರ ಬಾಲ್ಯದಲ್ಲಿ ವಾಸಮಾಡಿದ ಮನೆ

ಕಲಾವಿದನೊಬ್ಬನ ಕಲಾಶೈಲಿ, ತಂತ್ರಗಾರಿಕೆ, ಪ್ರಭಾವ, ಪ್ರೇರಣೆ, ಕಲಾಹಿನ್ನೆಲೆ ಇವುಗಳನ್ನು ತಿಳಿದುಕೊಳ್ಳಬೇಕಾದರೆ, ಆ ಕಲಾವಿದನ ಕಲಾಕೃತಿಗಳನ್ನು ಅಧ್ಯಯನಕ್ಕೊಳ ಪಡಿಸಬೇಕಾಗುವುದು. ಅದರಲ್ಲೂ ವಿಶೇಷವಾಗಿ ಕಲಾಕೃತಿಗಳ ವಸ್ತುವಿಷಯಗಳನ್ನು ಕಾಲಘಟ್ಟಗಳಲ್ಲಿ ವಿಂಗಡಿಸಿ ವಿವೇಚಿಸಿದಾಗ ಮೇಲಿನ ಎಲ್ಲ ಬಗೆಯ ಸಂಗತಿಗಳು ತಿಳಿದು ಬರುತ್ತವೆ. ಅಲ್ಲದೆ ಕಲಾಕೃತಿಗಳ ರಚನೆಯಲ್ಲಿ ಬಳಸಿಕೊಂಡಿರುವ ವಸ್ತುವೈವಿಧ್ಯತೆಗಳಿಂದ ಆಯಾ ಕಲಾವಿದರ ಕಲಾ ಬದುಕು ಆರ್ಥಿಕ, ಸಾಮಾಜಿಕ ಸ್ಥಿತಿಗತಿಗಳು, ಕೌಟುಂಬಿಕ ಜೀವನ, ಸ್ನೇಹ ಪರತೆ, ಪ್ರೀತಿ, ಪ್ರೇಮ, ತ್ಯಾಗ, ಬೇಕು. ಬೇಡಗಳು, ಮಾನಸಿಕವಾಗಿರುವ ಚಿಂತನೆಗಳು ಸಹಿತ ತಿಳಿದುಬರುತ್ತವೆ.[೧] ಹಾಗಾಗಿ ಕಲಾವಿದರ ಕುರಿತಾಗಿರುವ ಅಧ್ಯಯನಗಳಲ್ಲಿ ಅವರ ಕೃತಿಗಳ ಅಧ್ಯಯನಕ್ಕೆ ಮಹತ್ವದ ಸ್ಥಾನವಿದೆ ಎಂದು ಹೇಳಬಹುದು.

ಕರ್ನಾಟಕದಲ್ಲಿ ಇದುವರೆಗೆ ನಡೆದಿರುವ ಕಲಾವಿದರ ಕುರಿತಾಗಿರುವ ಅಧ್ಯಯನಗಳಲ್ಲಿ ಇಂತಹ ಪ್ರಯತ್ನಗಳು ನಡೆದಿಲ್ಲ ಎನ್ನಬಹುದು. ಕಲಾಕೃತಿಗಳ ವಸ್ತು ವಿಷಯಗಳ ಬಗ್ಗೆ ಪ್ರತ್ಯೇಕ ಅಧ್ಯಾಯಗಳನ್ನು ಮಾಡಿಕೊಂಡು ವಿಶ್ಲೇಷಿಸಿರುವುದು ಇದುವರೆಗಿನ ಅಧ್ಯಯನಗಳಲ್ಲಿ

---

೧. ಡಾ. ಎಸ್. ಸಿ. ಪಾಟೀಲ : ಸಾಧನೆಯ ಸಮುಚ್ಛಯ ಶಿವಲಿಂಗಪ್ಪ : ಪುಟ-೪೫

ಕಂಡು ಬರುತ್ತದಾದರೂ ಅಲ್ಲಿ ಕಲಾಕೃತಿಗಳನ್ನು ಮಾಧ್ಯಮಕ್ಕೆ ಅನುಸಾರವಾಗಿ, ರಚನಾ ವಿಧಾನಕ್ಕನುಸಾರವಾಗಿ, ಇಲ್ಲವೆ ಚಿತ್ರಿತ ವಿಷಯಗಳಿಗೆ ಅನುಸಾರವಾಗಿ ವಿಂಗಡಿಸಿಕೊಂಡು ಅಧ್ಯಯನ ಮಾಡಿರುವುದು ಕಂಡು ಬರುತ್ತದೆ. ಈ ರೀತಿಯ ವಿಂಗಡಣೆಗಳಿಂದ ಕಲಾವಿದರ ಕೃತಿಗಳ ಬಗೆಗಿನ ಮಾಹಿತಿ ಮಾತ್ರ ಪ್ರಮುಖವಾಗಿ ತಿಳಿದುಬರುತ್ತದೆ. ಕಲಾಕೃತಿಯ ಮಾಧ್ಯಮ, ತಂತ್ರಗಾರಿಕೆ, ವಿಷಯ, ಸಂಯೋಜನೆ, ಆಕಾರಗಳು, ರೇಖಾವಿನ್ಯಾಸ, ವರ್ಣಗಾರಿಕೆ ಚಿತ್ರದ ಆಶಯಗಳು ಹೀಗೆ ಕಲಾ ವ್ಯಾಕರಣದಂತಹ ಸಂಗತಿಗಳು ಮಾತ್ರ ಅನಾವರಣಗೊಳ್ಳುತ್ತವೆ. ಆದರೆ ಕಲಾಕೃತಿಯೊಂದು ಕಲಾವಿದನ ಆಂತರಿಕ ಹಾಗೂ ಬಾಹ್ಯ ಬದುಕಿನ ಎಲ್ಲ ಸಂಗತಿಗಳನ್ನು ಪ್ರತಿನಿಧಿಸುವುದರಿಂದ ಇವೆರಡರ ವಿಶ್ಲೇಷಣೆಗಳನ್ನು ಅವುಕೊಡಬೇಕಾಗುತ್ತದೆ. ಹಾಗಾಗಿ ಕಲಾಕೃತಿಗಳನ್ನು ವಿಷಯುವಾರು, ಮಾಧ್ಯಮವಾರು, ರಚನಾವಿಧಾನಕ್ಕನುಸಾರವಾಗಿ ವಿಂಗಡಿಸಿಕೊಂಡಾಗ ಮೇಲೆ ಹೇಳಿದಂತೆ ಕಲಾವಿದನ ಆಂತರಿಕ ಹಾಗೂ ಬಾಹ್ಯ ಬದುಕಿನ ವಿವರಗಳು ತಿಳಿದು ಬರುವ ಸಂಭವ ತೀರಾಕಡಿಮೆ ಎನ್ನಬಹುದು.

ವ್ಯಕ್ತಿಯೊಬ್ಬನ ಮನಸ್ಥಿತಿ, ಜೀವನವಿಧಾನಗಳು ಕಾಲಕಾಲಕ್ಕೆ ಬದಲಾವಣೆ ಗೊಳಪಡುತ್ತಲೇ ಸಾಗುತ್ತವೆ. ಬಾಲ್ಯ, ತಾರುಣ್ಯ, ಯೌವ್ವನ, ಮುಪ್ಪಿನಾವಸ್ಥೆಗಳಲ್ಲಿ ವ್ಯಕ್ತಿಗಳ ಮಾನಸಿಕ ಸ್ಥಿತಿಗತಿಗಳಿಗೆ ಅನುಸಾರವಾಗಿಯೇ ಜೀವನ ವಿಧಾನ ಪರಿವರ್ತನೆಗೊಳ್ಳುತ್ತಾ ನಡೆಯುತ್ತದೆ. ಆತ ನಡೆಸುವ ಕ್ರಿಯಾ ಚುಟವಟಿಕೆಗಳು ಸಹಿತ ವಯೋಮಾನವನ್ನು ಆಧರಿಸಿಯೇ ನಿರ್ಧರಿಸಲ್ಪಟ್ಟಡುತ್ತವೆ. ಈ ಮಾತು ಕಲಾವಿದರಿಗೂ ಅನ್ವಯಿಸುತ್ತದೆ. ಬಾಲ್ಯ, ತಾರುಣ್ಯ, ಯೌವ್ವನ, ಮುಪ್ಪಿನಾವಸ್ಥೆಯಲ್ಲಿ ಉಂಟಾಗುವ ಭಾವನಾತ್ಮಕ ಸ್ಪಂಧನೆಗಳಿಗೆ ಅನುಸಾರವಾಗಿಯೇ ಕಲಾಕೃತಿಗಳು ರೂಪುಗೊಳ್ಳುತ್ತವೆ.[೨] ನಾಡಿನ ಅಥವಾ ಜಾಗತಿಕವಾಗಿ ಪ್ರಖ್ಯಾತರಾಗಿರುವ ಯಾವುದೇ ಕಲಾವಿದರ ಕೃತಿಗಳನ್ನು ನೋಡಿದಾಗ ಇಲ್ಲವೆ ಅವರ ಆತ್ಮಚರಿತ್ರೆಯನ್ನು ಓದಿದಾಗ ಈ ಸಂಗತಿ ತಿಳಿದುಬರುತ್ತದೆ.

ಪಾಬ್ಲೋ ಪಿಕಾಸೋ, ವಿನ್ಸೆಂಟ್ ವ್ಯಾನ್‌ಗಾಗ್, ಪಾಲ್‌ಗಾಗಿನ್, ಹೆನ್ರಿ ಮಾತಿಸ್ ಮುಂತಾದವರ ಕಲಾ ರಚನೆಗಳು ವಯೋಮಾನಕ್ಕನುಸಾರವಾಗಿ ಭಿನ್ನವಾದ ನಿಲುವುಗಳನ್ನು ಪಡೆದುಕೊಂಡಿರುವುದನ್ನು ಗಮನಿಸಬಹುದಾಗಿದೆ. ಖ್ಯಾತ ಕಲಾವಿದ ಪಾಬ್ಲೋಪಿಕಾಸೋ ಕಲಾ ಬದುಕಿನಲ್ಲಿ ನೀಲಿ ಅವಧಿ, ಕೆಂಪು ಅವಧಿ, ಮತ್ತು ಹಳದಿ ಅವಧಿ ಎಂಬ ಘಟ್ಟಗಳನ್ನು ವಿಮರ್ಶಕರು ಗುರುತಿಸಿದ್ದಾರೆ. ಈ ಬದಲಾವಣೆಗೆ ಕಲಾವಿದರ ವಯೋಮಾನ, ಆ ಸಂದರ್ಭದಲ್ಲಿ ಉಂಟಾದ ವಿಶೇಷ ಪ್ರಭಾವ ಪ್ರೇರಣೆಗಳು ಹಾಗೂ ಪರಿಸರ ಮತ್ತು ಸಮಾಜವನ್ನು ಪರಿಭಾವಿಸುವ

---

೨. ಡಾ. ಯಾದವ್ಪ. ಪರದೇಶಿ : ಉತ್ತರ ಕರ್ನಾಟಕದ ಭಿತ್ತಿಚಿತ್ರಕಲೆ : ಪುಟ-೧೨

ಕಲಾವಿದರ ಮಾನಸಿಕ ಸ್ಥಿತಿಗತಿಗಳು ಕಾರಣವಾಗುತ್ತವೆ[೩] ಎಂದು ಹೇಳಲಾಗುತ್ತದೆ. ಈ ಹಿನ್ನೆಲೆಯಲ್ಲಿಯೇ ಪ್ರಸ್ತುತ ಅಧ್ಯಯನದಲ್ಲಿ ಕಲಾವಿದನ ಆ ಸಂದರ್ಭದ ಆಂತರಿಕ ಹಾಗೂ ಬಾಹ್ಯ ಬದುಕಿನ ಪರಿಣಾಮಗಳನ್ನು ತಿಳಿದುಕೊಳ್ಳುವ ನಿಟ್ಟಿನಲ್ಲಿ ಕಲಾಕೃತಿಗಳ ವಸ್ತು ವಿಷಯವನ್ನು ಕಾಲಘಟ್ಟಗಳಲ್ಲಿ ದಶಕವಾರು ವಿಂಗಡಿಸಿಕೊಂಡು ಅಧ್ಯಯನ ಮಾಡುವ ಪ್ರಮುಖ ಯೋಜನೆಯನ್ನು ರೂಪಿಸಿಕೊಳ್ಳಲಾಗಿದೆ.

ಈ ವಿಂಗಡಣೆಯು ಈಗಾಗಲೇ ಹೇಳಿರುವಂತೆ ಕರ್ನಾಟಕದಲ್ಲಿ ನಡೆದ ಕಲಾವಿದರ ಕುರಿತಾಗಿರುವ ಅಧ್ಯಯನಗಳಲ್ಲಿಯೇ ಭಿನ್ನವಾಗಿದೆ. ಈ ರೀತಿಯ ವಿಂಗಡಣೆಯಿಂದ ಮೇಲೆ ಹೇಳಲಾದ ಪ್ರಮುಖ ಸಂಗತಿಗಳು ತಿಳಿದುಬರುತ್ತವೆ. ಜೊತೆಗೆ ಕಲಾಕೃತಿಯ ಅಧ್ಯಯನದ ಮೂಲಕ ಆಯಾ ಕಾಲಘಟ್ಟದಲ್ಲಿ ಕಲಾವಿದರು ಅನುಭವಿಸಿದ ಮಾನಸಿಕ ಸ್ಥಿತಿಗತಿಗಳು, ಅದರಿಂದುಂಟಾದ ಪರಿಣಾಮಗಳು, ಅವುಗಳನ್ನು ಅವರು ಎದುರಿಸಿದ ರೀತಿ, ಇವೆಲ್ಲವುಗಳನ್ನು ಅಭಿವ್ಯಕ್ತಿ ರೂಪದಲ್ಲಿ ಯಾವ ರೀತಿಯಲ್ಲಿ ಹೊರಹಾಕಿದರು ಎಂಬಂತಹ ವಿವರಗಳು ತಿಳಿದು ಬರುತ್ತವೆ.

ಈ ಅಧ್ಯಾಯದಲ್ಲಿ ಮೇಲೆ ಹೇಳಿದ ಆಶಯ ಮತ್ತು ಉದ್ದೇಶಗಳಿಗೆ ಅನುಸಾರವಾಗಿ ಎಂ.ಬಿ.ಪಾಟೀಲರು ರಚಿಸಿದ ಕಲಾಕೃತಿಗಳನ್ನು ದಶಕವಾರು ವಿಂಗಡಿಸಿಕೊಂಡು ಅಧ್ಯಯನ ಮಾಡಲಾಗಿದೆ. ಒಂದೊಂದು ದಶಕದಲ್ಲಿ ಅವರು ಯಾವ ಬಗೆಯ ಚಿತ್ರಗಳನ್ನು ರಚಿಸಿದ್ದಾರೆ. ಅದಕ್ಕೆ ಕಾರಣಗಳೇನು ? ಎಂಬುದನ್ನು ಹುಡುಕುವ ಪ್ರಯತ್ನ ಇಲ್ಲಿದೆ. ದಶಕವಾರು ವಿಂಗಡಣೆಯಿಂದ ಅಧ್ಯಯನದಲ್ಲಿ ಕಂಡು ಬರುವ ಇನ್ನಿತರ ಪ್ರಯೋಜನೆಗಳೆಂದರೆ, ಪ್ರತಿಯೊಂದು ದಶಕದಲ್ಲಿ ಅವರು ಯಾವ ಬಗೆಯ ಕಲಾಕೃತಿಗಳನ್ನು ರಚಿಸಿದ್ದಾರೆ. ಎನ್ನುವ ವಿವರ ದೊರಕುತ್ತದೆ. ಅಲ್ಲದೆ ಆಯಾ ದಶಕದಲ್ಲಿ ರಚಿಸಿದ ಕಲಾಕೃತಿಗಳಲ್ಲಿ ಒಂದೇ ವಿಷಯಕ್ಕೆ ಸಂಬಂಧಿಸಿದ ಕೃತಿಗಳನ್ನು ಹೆಚ್ಚಾಗಿ ರಚಿಸಿರಬಹುದು. ಕೆಲವು ವಿಷಯದ ಚಿತ್ರಗಳನ್ನು ಕಡಿಮೆ ರಚಿಸಿರಬಹುದು. ಇದಕ್ಕೆ ಕಾರಣಗಳನ್ನು ಇಲ್ಲಿ ಕಂಡುಕೊಳ್ಳಬಹುದಾಗಿದೆ.

ವ್ಯಕ್ತಿಯೊಬ್ಬನ ಮನಸ್ಸನ್ನು ನಿರಂತರವಾಗಿ ಕಾಡುವ ಯೋಚನೆಗಳ ಸುತ್ತಲೇ ಆತನ ವಿಚಾರಗಳು ಪರಿಭ್ರಮಿಸುತ್ತವೆ. ಇದಕ್ಕೆ ಕಲಾವಿದರು ಹೊರತಲ್ಲ. ಯಾವ ಸಂಗತಿಗಳು ಅವರನ್ನು ನಿರಂತರವಾಗಿ ಕಾಡುತ್ತವೆಯೋ ಅವುಗಳ ಕುರಿತೇ ಕಲಾಕೃತಿಯಲ್ಲಿ ಆಕಾರ ಮತ್ತು ಸಂಕೇತಗಳ ಮೂಲಕ ಅಭಿವ್ಯಕ್ತಿಸಿರುತ್ತಾರೆ.[೪] ಎಂ.ಬಿ.ಪಾಟೀಲರ ಇಂತಹ

೩. ಡಾ. ಎಸ್. ಸಿ. ಪಾಟೀಲ : ಸಾಧನೆಯ ಸಮುಚ್ಚಯ ಶಿವಲಿಂಗಪ್ಪ : ಪುಟ-೨೮
೪. ಡಾ. ಲಕ್ಷ್ಮೀದೇವಿ ಗವಾಯಿ : ಕಲಾವಿದ ಎಂ. ಎ. ಚಟ್ಟಿ ಕಲೆ ಮತ್ತು ಬದುಕು : ಪುಟ-೬೫

ನಿಲುವುಗಳನ್ನು ತಿಳಿದುಕೊಳ್ಳುವ ನಿಟ್ಟಿನಲ್ಲಿ ಅವರ ಕಲಾಕೃತಿಗಳನ್ನು ದಶಕವಾರು ವಿಂಗಡಿಲಾಗಿದೆ. ಎಂ.ಬಿ.ಪಾಟೀಲರು ಬಾಲ್ಯದಲ್ಲಿ, ಹೈಸ್ಕೂಲ್ ಹಂತದಲ್ಲಿ ಸಾಕಷ್ಟು ಕಲಾಕೃತಿಗಳನ್ನು ರಚಿಸಿರುಬಹುದು. ಆದರೆ ಅಂತಹ ಕೃತಿಗಳು ಇಂದು ಲಭ್ಯವಿಲ್ಲ. ಪ್ರಸ್ತುತ ಅವರು ಚಿತ್ರಕಲಾ ಅಧ್ಯಯನದ ಕೊನೆಯ ಹಂತದಲ್ಲಿ ಅಂದರೆ ಕಲಾ ಡಿಪ್ಲೋಮಾ ಅಂತಿಮವರ್ಷದಲ್ಲಿ ರಚಿಸಿದ (೧೯೬೩) ಕಲಾಕೃತಿಗಳು ಲಬ್ಯವಿದ್ದು ಅಲ್ಲಿಂದಲೇ ಅವರ ಕಲಾಕೃತಿಗಳ ವಿಶ್ಲೇಷಣೆ ಆರಂಭಿಸಲಾಗಿದೆ.

ಪಾಟೀಲರು ಕ್ರಿ.ಶ.೧೯೬೩ ರಿಂದ ೨೦೦೮ ವರೆಗಿನ ಕಾಲವಧಿಯಲ್ಲಿ ರಚಿಸಿದ ಒಟ್ಟು ಕಲಾಕೃತಿಗಳನ್ನು ಸಂಗ್ರಹಿಸಿ ಅವುಗಳನ್ನು ದಶಕವಾರು ವಿಂಗಡಿಸಲಾಗಿದೆ. ಪಾಟೀಲರು ೧೯೬೩ ರಿಂದ ೨೦೦೮ ರ ವರೆಗಿನ ಸುಮಾರು ನಲವತ್ತೈದು ವರ್ಷದ ತಮ್ಮ ಕಲಾ ಬದುಕಿನಲ್ಲಿ ಸಾವಿರಾರು ಕಲಾಕೃತಿಗಳನ್ನು ವಿವಿಧ ಮಾಧ್ಯಮ ಹಾಗೂ ವಿಷಯಗಳಲ್ಲಿ ರಚಿಸಿದ್ದಾರೆ. ಕೆಲವು ಕಲಾಕೃತಿಗಳು ರಾಜ್ಯದ ವಿವಿಧ ಭಾಗಗಳಲ್ಲಿ, ದೇಶದ ಹಲವು ನಗರಗಳಲ್ಲಿ ಮತ್ತು ವಿದೇಶಗಳಲ್ಲಿಯೂ ಸಂಗ್ರಹಗೊಂಡಿವೆ. ಅವೆಲ್ಲವುಗಳನ್ನು ಸಂಗ್ರಹಿಸುವುದು ಅಸಾಧ್ಯವಾಗಿದ್ದು ಲಭ್ಯವಾದ ಕೆಲವು ಪ್ರಮುಖ ಕೃತಿಗಳನ್ನೇ ಅಧ್ಯಯನದಲ್ಲಿ ಬಳಸಿಕೊಳ್ಳಲಾಗಿದೆ. ಪ್ರಸ್ತುತ ಲಭ್ಯವಾದ ಅವರ ಕಲಾ ಬದುಕಿನ ಒಟ್ಟು ಕೃತಿಗಳನ್ನು ಕೆಳಗಿನಂತೆ ವಿಂಗಡಿಸಿಕೊಳ್ಳಲಾಗಿದೆ.

**೦೧. ಅರವತ್ತರಿಂದ ಎಪ್ಪತ್ತರ ದಶಕದ ಕಲಾಕೃತಿಗಳು**

**೦೨. ಎಪ್ಪತ್ತರಿಂದ ಎಂಭತ್ತರ ದಶಕದ ಕಲಾಕೃತಿಗಳು**

**೦೩. ಎಂಭತ್ತರಿಂದ ತೊಂಭತ್ತರ ದಶಕದ ಕಲಾಕೃತಿಗಳು**

**೦೪. ತೊಂಭತ್ತರಿಂದ ಎರಡು ಸಾವಿರ ಇಸ್ವಿವರೆಗಿನ ಕಲಾಕೃತಿಗಳು**

**೦೫. ಎರಡು ಸಾವಿರದಿಂದ ಎರಡು ಸಾವಿರದ ಹತ್ತರ ದಶಕದ ಕಲಾಕೃತಿಗಳು**

**೦೧. ಅರವತ್ತರಿಂದ ಎಪ್ಪತರ ದಶಕದ ಕಲಾಕೃತಿಗಳು :**

ಈ ದಶಕದಲ್ಲಿ ಪಾಟೀಲರು ರಚಿಸಿದ ವಿದ್ಯಾರ್ಥಿ ಹಂತದ ಕಲಾಕೃತಿಗಳು ಹೆಚ್ಚಾಗಿವೆ. ಇಲ್ಲಿ ಕ್ರಿ.ಶ. ೧೯೬೩ ರಿಂದ ೧೯೭೦ ರ ವರೆಗೆ ರಚಿಸಿದ ಕಲಾಕೃತಿಗಳನ್ನು ಅಧ್ಯಯನಕ್ಕೆ ಪರಿಗಣಿಸಲಾಗಿದೆ. ಈ ದಶಕದಲ್ಲಿ ಪಾಟೀಲರು ಹಲವಾರು ವಿಷಯಗಳಿಗೆ ಸಂಬಂಧಿಸಿದ ಕಲಾಕೃತಿಗಳನ್ನು ರಚಿಸಿದ್ದಾರೆ. ಅವುಗಳಲ್ಲಿ ಸ್ತ್ರೀ-ಪುರುಷರ ಭಾವಚಿತ್ರಗಳು, ಬಸವೇಶ್ವರರ ಚಿತ್ರ, ರವೀಂದ್ರನಾಥ ಟ್ಯಾಗೋರರ ಚಿತ್ರ, ಕೋಳಿಕಾಳಗ, ಲಂಬಾಣಿ ಮಹಿಳೆಯರ

ಚಿತ್ರ, ಕುದುರೆಗಳು, ಉಯ್ಯಾಲೆ, ರಾಧಾಕೃಷ್ಣನ್ ಚಿತ್ರ, ಹಳ್ಳಿಯ ಪರಿಸರ, ಕೆಲಸಗಾರನ ಭಾವಚಿತ್ರ, ಶಿರ್ಷಿಕೆ ರಹಿತ ಸಂಯೋಜನೆ, ಶಿವಲಿಂಗ, ಹೆಣ್ಣುಮಗಳು, ಸಂಗಾತಿಗಳು, ನಗ್ನಸ್ತ್ರೀಯರು, ಸ್ತ್ರೀ ಮತ್ತು ಗೂಳಿ, ದಂಪತಿಗಳು, ವಿಶ್ರಾಂತಿ, ನಿಸರ್ಗಚಿತ್ರ, ಗಂಗಾಧರಸ್ವಾಮಿ ಚಿತ್ರ, ಪ್ರತಿಬಿಂಬ, ಪ್ರತಿಫಲನ, ಮಂಡಲ, ಸಮುದ್ರತೀರ, ಹೀಗೆ ಒಟ್ಟು ಮೂವತ್ತುನಾಲ್ಕು ವಿವಿಧ ವಿಷಯದ ಕಲಾಕೃತಿಗಳನ್ನು ಅಧ್ಯಯನಕ್ಕೆ ಪರಿಗಣಿಸಲಾಗಿದೆ. ಈ ಮೂವತ್ತನಾಲ್ಕು ಕಲಾಕೃತಿಗಳ ಬಗ್ಗೆ ಕೆಳಗಿನಂತೆ ಸ್ಥೂಲ ವಿಶ್ಲೇಷಣೆ ಮಾಡಲಾಗಿದೆ.

ಈ ವಿಶ್ಲೇಷಣೆಯಲ್ಲಿ ಚಿತ್ರದ ಆಶಯ ರಚನಾವಿಧಾನ, ಮಾಧ್ಯಮ, ಹಿನ್ನೆಲೆ, ತಂತ್ರಗಾರಿಕೆ, ಬಣ್ಣಗಳ ಬಳಕೆ, ರೇಖಾವಿನ್ಯಾಸ, ಸಂಯೋಜನಾ ರೀತಿ, ಇವುಗಳನ್ನು ಮಾತ್ರ ಸಂಕ್ಷಿಪ್ತವಾಗಿ ಹೇಳಲಾಗಿದೆ. ಮುಂದೆ ಪ್ರತಿ ದಶಕದ ಕೊನೆಯಲ್ಲಿ ಒಟ್ಟು ಚಿತ್ರಗಳ ಕುರಿತು ತೌಲನಿಕವಾಗಿ ಚರ್ಚಿಸಲಾಗಿದೆ. ಹಾಗಾಗಿ ಚಿತ್ರಗಳ ಧ್ಯೇಯಧೋರಣೆಗಳು, ಸಾಮಾಜಿಕ ಪರಿಣಾಮಗಳು, ಕಲಾವಿದರ ಆಂತರಿಕ ಮನೋಭಾವಗಳು ಮುಂತಾದ ಮಹತ್ವದ ಸಂಗತಿಗಳ ವಿವರಗಳು ಪ್ರತಿ ದಶಕದ ಕೊನೆಯಲ್ಲಿ ಮಾಡಲಾಗಿರುವ ವಿವೇಚನೆಯಲ್ಲಿ ಕಂಡು ಬರುತ್ತವೆ. ಇಲ್ಲಿ ಪ್ರತಿಯೊಂದು ಚಿತ್ರದ ಬಗ್ಗೆ ಸ್ಥೂಲ ಮಾಹಿತಿಯನ್ನು ಮಾತ್ರ ಶಿರ್ಷಿಕೆಯ ಅಡಿಯಲ್ಲಿ ಹೇಳಲಾಗಿದೆ.

**ಭಾವ ಚಿತ್ರ : ೧೯೬೩**

ಈ ಭಾವಚಿತ್ರವು ಪಾಟೀಲರ ಕಲಾ ಬದುಕಿನ ಪ್ರಾರಂಭಿಕ ಹಂತದಲ್ಲಿ ರಚನೆಗೊಂಡಿದ್ದು ಆಕಾಡೆಮಿಕ್ ನೆಲೆಯಲ್ಲಿರುವುದು. ಮುಖದ ಚರ್ಮದ ನೈಜತೆಯನ್ನು ವರ್ಣದಲ್ಲಿ ಒಡಮೂಡಿಸಿರುವುದಲ್ಲದೆ ಭಾವನಾತ್ಮಕವಾಗಿ ರಚಿಸಿದ್ದಾರೆ. ಕುಂಚದ ಎಳೆತಗಳು ಮುಖದಲ್ಲೆಲ್ಲ ಹರಡಿಕೊಂಡಿದ್ದರೂ ನುಣುಪು ಹಾಗೂ ಸೂಕ್ಷ್ಮತೆಯಿಂದ ಕೂಡಿದೆ. ರೂಪದರ್ಶಿಯ ಮುಖದ ನೈಜತೆಯನ್ನು ತರುವಲ್ಲಿ ಯಶಸ್ವಿಯಾಗಿದ್ದಾರೆ. ಈ ಭಾವಚಿತ್ರದಲ್ಲಿ ರೂಪದರ್ಶಿಯು ಧರಿಸಿರುವ ಅಂಗಿಯ ವರ್ಣ ಬಿಳಿಯಾಗಿದ್ದರೂ ಅದರಲ್ಲಿ ನೀಲಿ ಮತ್ತು ಕಪ್ಪು ವರ್ಣದ ಛಾಯೆಗಳಿಂದ ಪೂರ್ಣಗೊಳಿಸಲಾಗಿದೆ.

**ಬಸವೇಶ್ವರರ ಭಾವಚಿತ್ರ : ೧೯೬೩**

ಪಾಟೀಲರು ರಚಿಸಿದ ಪ್ರಾರಂಭಿಕ ಕಲಾಕೃತಿಗಳಲ್ಲಿ ಜಗಜ್ಯೋತಿ ಬಸವೇಶ್ವರರ ಭಾವಚಿತ್ರವೂ ಗಮನಾರ್ಹವಾಗಿದೆ. ಬಸವೇಶ್ವರರ ವೇಷಭೂಷಣಗಳು, ರಾಜಗಾಂಭೀರ್ಯ, ಆಧ್ಯಾತ್ಮಿಕ ಹಿನ್ನೆಲೆಯ ಮುಖಭಾವ, ಬಳಸಿರುವ ವರ್ಣ, ಮಂದ ಬೆಳಕನ್ನು ರಚಿಸಿದ ತಂತ್ರಗಾರಿಕೆ

ಉತ್ತಮವಾಗಿದೆ. ಪ್ರಫುಲ್ಲವಾದ ಮುಖದ ಲಕ್ಷಣವನ್ನು ಆಧಾರವಾಗಿಟ್ಟುಕೊಂಡು ಉಳಿದ ದೇಹಾಲಂಕಾರ ಸಂಯೋಜನೆಗೊಳಿಸಿದ ತಂತ್ರಗಾರಿಕೆ ಅತ್ಯಂತ ಮನೋಜ್ಞವಾಗಿದೆ. ವರ್ಣಗಳನ್ನು ಭಾವನೆಗಳಿಗೆ ತಕ್ಕಂತೆ ಸಂಯೋಜಿಸಲಾಗಿದೆ. ಹಿನ್ನೆಲೆಯ ಮಸುಕು ವರ್ಣದಲ್ಲೂ ವೈವಿಧ್ಯತೆ ಇದೆ.

**ರವೀಂದ್ರನಾಥ ಟ್ಯಾಗೋರರ ಭಾವಚಿತ್ರ : ೧೯೬೩***

ರವೀಂದ್ರನಾಥ ಟ್ಯಾಗೋರರು ಉತ್ತಮ ಬರಹಗಾರರು, ಕವಿಗಳು ಹಾಗೂ ಕಲಾವಿದರೂ ಹೌದು. ಇವರ ಕುಟುಂಬವೇ ಕಲಾಹಿನ್ನೆಲೆಯನ್ನು ಹೊಂದಿದೆ ಅಂತಹ ಟ್ಯಾಗೋರರ ಭಾವಚಿತ್ರವನ್ನು ಪಾಟೀಲರು ತಮ್ಮ ಪ್ರಾರಂಭಿಕ ದಿನಗಳಲ್ಲಿ ರಚಿಸಿದ್ದಾರೆ. ಇಲ್ಲಿ ಗಮನಾರ್ಹ ಸಂಗತಿ ಎಂದರೆ, ಟ್ಯಾಗೋರರು ಸ್ವತಹ ಚಿತ್ರಕಲಾವಿದರಾಗಿದ್ದು ತಮ್ಮ ಅರವತ್ತನೇ ವಯಸ್ಸಿನಲ್ಲಿ ಕಲಾಕ್ಷೇತ್ರಕ್ಕೆ ಪಾದಾರ್ಪಣೆ ಮಾಡಿದರು.

ಇಂತಹ ಮಹಾನ್ ವ್ಯಕ್ತಿಯ ಭಾವಚಿತ್ರವನ್ನು ಕಪ್ಪು ಹಳದಿ ಹಾಗೂ ಕೆಂಪು ವರ್ಣಗಳನ್ನು ಬಳಸಿ ಕುಂಚದ ಹೊಡೆತದಿಂದಲೇ ಪೂರ್ಣಗೊಳಿಸಿದ್ದಾರೆ. ಅತ್ಯಂತ ಕ್ಷಿಪ್ರಗತಿಯಲ್ಲಿ ಕಲಾಕೃತಿಯನ್ನು ಪೂರ್ಣಗೊಳಿಸಿದಂತೆ ಕಂಡು ಬರುತ್ತದೆ. ದಟ್ಟ ವರ್ಣವನ್ನು ಹಿನ್ನೆಲೆಯಾಗಿ ಬಳಸಿರುವುದು ತುಂಬಾ ಆಕರ್ಷಕವಾಗಿದೆ.

**ಕೋಳಿ ಕಾಳಗ : ೧೯೬೩**

ಇದು ಅಮೂರ್ತ ಶೈಲಿಯ ಕಲಾಕೃತಿಯಾದರೂ ಮೂರ್ತರೂಪದ ಕೆಲವು ಆಕಾರಗಳನ್ನು ಸೃಷ್ಟಿಸುವ ಮೂಲಕ ಸ್ಪಷ್ಟತೆಯನ್ನು ತಂದುಕೊಟ್ಟಿದ್ದಾರೆ. ಇಲ್ಲಿ ಬಿಳಿ ಮತ್ತು ಕಪ್ಪು ವರ್ಣದ ಕೋಳಿಗಳು ಪರಸ್ಪರ ಕಾದಾಡುವ ಅಮೂರ್ತ ಕಲ್ಪನೆ ಇದೆ. ಕಾಳಗದಲ್ಲಿ ಬಿಳಿ ಹುಂಜವು ಕರಿಯ ಹುಂಜದ ಮೇಲೆ ಎರಗುವಂತೆ ಅನಾವರಣಗೊಳಿಸಲಾಗಿದೆ. ಯುದ್ಧಕ್ಕೆ ಪೂರಕವಾಗಿವೆ ಎನ್ನುವ ಹಾಗೆ ಕೆಂಪು ಮತ್ತು ಹಳದಿ ವರ್ಣಗಳನ್ನು ಬಳಸಿರುವುದು ಚಿತ್ರಕ್ಕೆ ಮೆರಗನ್ನು ತಂದಿವೆ. ಕೇವಲ ಸೀಮಿತ ವರ್ಣಗಳ ಬಳಕೆ ಇಲ್ಲಿದ್ದರೂ ಅದಕ್ಕೆ ತಕ್ಕಂತೆ ಸಂಯೋಜನೆ ಮಾಡಲಾಗಿದೆ. ಕುಂಚದ ದಪ್ಪನಾದ ಎಳೆತಗಳು ಎಲ್ಲಾ ದಿಕ್ಕುಗಳಲ್ಲಿ ಚಲಿಸಿವೆ. ಕ್ಷಿಪ್ರಗತಿಯ ರಚನಾ ತಂತ್ರದ ಈ ಕೃತಿಯಲ್ಲಿ ಒರಟಾದ ಹಾಗೂ ನುಣುಪಾದ ವರ್ಣ ಲೇಪನಗಳೆರಡೂ ಕಂಡು ಬರುತ್ತವೆ. ಕಾದಾಡುತ್ತಿರುವ ಹುಂಜಗಳ ಚುಂಚುಗಳು ರಂಗೇರಿ ಕೆಂಪಾದಂತೆ ಚಿತ್ರಿಸಲಾಗಿದೆ.

---

* ಚಿತ್ರದ ಹೆಸರಿನ ಮುಂದೆ ನಮೂದಿಸಲಾದ ಅಂಕಿಗಳು ಕಲಾಕೃತಿ ರಚನೆಯಾದ ವರ್ಷವನ್ನು ಸೂಚಿಸುತ್ತವೆ.

**ಲಂಬಾಣಿ ಮಹಿಳೆಯ ಭಾವಚಿತ್ರ : ೧೯೬೪**

ಈ ಚಿತ್ರವು ತೈಲವರ್ಣ ಮಾಧ್ಯಮದಿಂದ ರಚನೆಯಾಗಿದ್ದು ಲಂಬಾಣಿ ಮಹಿಳೆಯ ಗುಣಲಕ್ಷಣಗಳನ್ನು ನೈಜವಾಗಿ ಪ್ರತಿಬಿಂಬಿಸುತ್ತದೆ. ಲಂಬಾಣಿ ಜನಾಂಗದ ವೇಷ ಭೂಷಣಗಳು, ಅಲಂಕಾರ ವೈವಿಧ್ಯತೆಗಳೆಲ್ಲವನ್ನೂ ಕುಂಚದ ಎಳೆತಗಳಲ್ಲಿ ಪೂರ್ಣಗೊಳಿಸಲಾಗಿದೆ. ರೂಪದರ್ಶಿಯ ಮೈಮೇಲಿನ ಆಭರಣಗಳು ಮತ್ತು ದೇಹದ ಬಣ್ಣ ಹೊಳಪಿನಿಂದ ಕೂಡಿದೆ. ಕೇವಲ ಸೀಮಿತ ವರ್ಣಗಳ ಸಂಯೋಜನೆಯಿಂದ ಕೂಡಿದ್ದರೂ ವೈವಿಧ್ಯತೆ ಕಂಡು ಬರುತ್ತದೆ. ಆಭರಣಗಳೇ ಇಲ್ಲಿ ಪ್ರಧಾನವಾಗಿವೆ. ರೂಪದರ್ಶಿಯ ಮುಖದಲ್ಲಿ ಮಂದಹಾಸ ತುಂಬಿದೆ. ಧರಿಸಿರುವ ಉಡುಪುಗಳು ಪ್ರಖರ ವರ್ಣಗಳ ಬಳಕೆಯಿಂದ ರಚಿಸಿವೆ. ಲಂಬಾಣಿ ಸ್ತ್ರೀಯರು ಆಭರಣ ಪ್ರೀಯರು, ಮೈತುಂಬಾ ಆಭರಣ ಧರಿಸುವುದು ಇವರ ಸಂಪ್ರದಾಯ. ಹಳೆಯ ನಾಣ್ಯಗಳೆ ಇವರ ಆಭರಣಗಳು ಇವು ಬೆಳ್ಳಿ, ಅಲ್ಯೂಮಿನಿಯಂ ಹಾಗೂಕಂಚಿನ ಆಭರಣಗಳಾಗಿದ್ದು, ವರ್ಣಲೇಪನದಲ್ಲಿ ನೈಜವಾಗಿ ಮೂಡಿಬಂದಿವೆ. ಇಡೀ ಮುಖ ಹಾಗೂ ಮೈಮೇಲೆಲ್ಲ ಹರಡಿರುವ ಆಭರಣಗಳು ರೂಪದರ್ಶಿಗೆ ಇನ್ನಷ್ಟು ಮೆರಗು ತಂದಿವೆ. ಕೆಂಪು ಮತ್ತು ಬಿಳಿ ವರ್ಣವು ಮುಖದ ಚರ್ಮಕ್ಕೆ ಹೊಳಪನ್ನು ತಂದಿದೆ.

**ಹಾರುತ್ತಿರುವ ಕುದುರೆ : ೧೯೬೫**

ಪಾಟೀಲರ ಪ್ರಾರಂಭಿಕ ಹಂತದ ರೇಖಾಚಿತ್ರಗಳಲ್ಲಿ ಸರಳತೆಗಿಂತ ಸೂಕ್ಷ್ಮತೆ ಸಂಕೀರ್ಣತೆ ಹೆಚ್ಚಾಗಿ ಕಂಡು ಬರುತ್ತದೆ. ಅಂತಹ ಹಿನ್ನೆಲೆಯಲ್ಲಿ ರಚಿಸಿದ ಚಿತ್ರ ಇದಾಗಿದೆ. ಈ ಚಿತ್ರದಲ್ಲಿ ಕುದುರೆಯೊಂದು ಸ್ವತಂತ್ರ್ಯವಾಗಿ ಆಕಾಶದಲ್ಲಿ ಹಾರಾಡುತ್ತಲಿದೆ. ಕಲಾವಿದನ ಅಭಿವ್ಯಕ್ತಿ ಸ್ವಾತಂತ್ರ್ಯಕ್ಕೆ ಹಿಡಿದ ಕನ್ನಡಿಯಂತೆ ಚಿತ್ರವಿದೆ. ಕಲಾವಿದನ ಮನದ ಆಸೆಗಳು ಆಕಾಂಕ್ಷೆಗಳು, ನಿರ್ಬಂಧವಿಲ್ಲದ ರೇಖೆಗಳು ಸರಳವಾಗಿ ಅಷ್ಟೇ ವೇಗವಾಗಿ ಚಲಿಸುತ್ತಿರುವ ಕುದುರೆ ಎಲ್ಲವೂ ಮನಬಿಚ್ಚಿ ಚಲಿಸಿದಂತಿವೆ. ವೇಗವಾಗಿ ರಚಿಸಿರುವ ಈ ಕೃತಿ ಬಿಚ್ಚು ಮನಸ್ಸಿನ ಆನಂದದಲ್ಲಿ ತೇಲಾಡುವಂತಿದೆ. ಪೆನ್ಸಿಲ್ ಮಾಧ್ಯಮದಿಂದ ರಚಿಸಿದ ಚಿತ್ರದ ರೇಖೆಗಳು ಅಷ್ಟೇ ಸ್ಪಷ್ಟತೆಯನ್ನು ತೋರಿಸುವಂತಿವೆ.

**ಉಯ್ಯಾಲೆ : ೧೯೬೫**

ಪ್ರಾರಂಭಿಕ ಹಂತದ ಪಾಟೀಲರ ರೇಖಾಚಿತ್ರಗಳಲ್ಲಿ ಬಹುತೇಕ ಚಿತ್ರಗಳು ಶಿರ್ಷಿಕೆ ರಹಿತವಾಗಿವೆ. ವ್ಯಕ್ತಿಯ ಅಂತರಾಳದ ತುಡಿತವನ್ನು ಉಯ್ಯಾಲೆಗೆ ಹೋಲಿಸಿ ಅದರಿಂದ ಆಗುವ ಆನಂದವನ್ನು ಪ್ರತಿಬಿಂಬಿಸಿದಂತೆ, ಸಾಂಕೇತಿಕವಾಗಿ ಪ್ರಸ್ತುತ ಚಿತ್ರವನ್ನು ರಚಿಸಲಾಗಿದೆ.

ರೇಖೆಗಳಲ್ಲಿ ಸ್ಪಷ್ಟತೆ ಇಲ್ಲದಿದ್ದರೂ ಕೂಡ ಜೀವಂತಿಕೆಯನ್ನು ಪಡೆದುಕೊಂಡಿವೆ. ವ್ಯಕ್ತಿಯೊಬ್ಬನನ್ನು ಅಮೂರ್ತವಾಗಿ ರಚಿಸಲಾಗಿದ್ದು, ಆತನ ಎಡ ಮತ್ತು ಬಲಗೈಗಳು ಚಲನ ಶೀಲತೆಯನ್ನು ಹೊಂದಿರುವಂತೆ ಚಿತ್ರಿಸಿದೆ. ವ್ಯಕ್ತಿಯ ಮಧ್ಯದಲ್ಲಿ ನೇರವಾಗಿ ಎರಡು ರೇಖೆಗಳನ್ನು ಉಯ್ಯಾಲೆಯ ಹಗ್ಗದಂತೆ ಎಳೆಯಲಾಗಿದೆ.

**ರಾಧಾಕೃಷ್ಣನ್ ಅವರ ಭಾವಚಿತ್ರ : ೧೯೬೫**

ರಾಷ್ಟ್ರದ ಮಹಾನ್ ವ್ಯಕ್ತಿ, ಆದರ್ಶ ಶಿಕ್ಷಕರಾಗಿದ್ದ ಸರ್ವಪಲ್ಲಿ ರಾಧಾಕೃಷ್ಣನ್ ಅವರ ಭಾವಚಿತ್ರವನ್ನು ಪಾಟೀಲರು ನೈಜ ಶೈಲಿಯಲ್ಲಿ ಚಿತ್ರಿಸಿದ್ದಾರೆ. ಪ್ರಾರಂಭಿಕ ದಶಕದ ಈ ಕಲಾಕೃತಿಯು ಅಕಾಡಮಿಕ್ ಶೈಲಿಯಿಂದ ಪ್ರಭಾವಿತಗೊಂಡಿದೆ. ಬಣ್ಣಗಳ ಬಳಕೆಯಲ್ಲಿ ವೈವಿಧ್ಯತೆಯ ಜೊತೆಗೆ ಉತ್ತಮ ಸಂಯೋಜನೆ ಇದೆ. ಪ್ರಖರ ವರ್ಣಗಳು, ಸೌಮ್ಯವರ್ಣಗಳು, ಯೋಜಿತ ರೀತಿಯಲ್ಲಿ ಬಳಕೆಗೊಂಡು ಕಲಾವಿದರ ವರ್ಣ ನೈಪುಣ್ಯತೆ ತೋರಿವೆ. ಈ ಕಲಾಕೃತಿಯನ್ನು ನೋಡಿದರೆ ರವಿವರ್ಮನ ಪ್ರಭಾವವು ಅಲ್ಲಲ್ಲಿ ಉಂಟಾದಂತೆ ಭಾಸವಾಗುತ್ತದೆ. ನೆರಳು ಬೆಳಕುಗಳು ಸ್ಪಷ್ಟವಾಗಿದ್ದು, ಮೈಮೇಲಿನ ವಸ್ತ್ರವಿನ್ಯಾಸದ ಮೈವಳಿಕೆ ನೈಜತೆಯಿಂದ ಕೂಡಿದೆ. ಮುಖದಲ್ಲಿ ಸ್ಪಷ್ಟತೆ, ಸೂಕ್ಷ್ಮತೆ ಹಾಗೂ ಚರ್ಮದ ವರ್ಣಛಾಯೆ ಅಷ್ಟೇ ಸುಂದರವಾಗಿದೆ. ಹಾಗೆಯೇ ಭಾವಕ್ಕೆ ತಕ್ಕಂತೆ ಬಣ್ಣದ ಬಳಕೆ, ಕುಂಚದ ಎಳೆತಗಳು ಕಂಡು ಬರುತ್ತವೆ. ಪಾಟೀಲರ ಭಾವಚಿತ್ರ ರಚನಾ ಕೌಶಲ್ಯ ಈ ಚಿತ್ರದಲ್ಲಿ ಅನಾವರಣ ಗೊಂಡಿದೆ.

**ಮಹಿಳೆ : ೧೯೬೫**

ಮಹಿಳೆಯನ್ನು ಸೌಂದರ್ಯದ ಸಂಕೇತವಾಗಿ ನಿರೂಪಿಸುವ ತೈಲವರ್ಣ ಕಲಾಕೃತಿ ಇದಾಗಿದೆ. ಮಸುಕು ಹಳದಿ ಬಣ್ಣದ ಹಿಂಬದಿಯ ವರ್ಣದಲ್ಲಿ ಕಪ್ಪು ವರ್ಣದ ಸ್ತ್ರೀಯನ್ನು ಅಮೂರ್ತ ಕಲ್ಪನೆಯಲ್ಲಿ ಚಿತ್ರಿಸಿರುವುದು ಕಂಡು ಬರುತ್ತದೆ. ಸ್ತ್ರೀಯ ಸೌಂದರ್ಯವನ್ನು ಹೆಚ್ಚಿಸಲು ಕಣ್ಣನ್ನು ಬಿಳಿವರ್ಣದಿಂದ ಎದ್ದು ಕಾಣುವಂತೆ ಸಾಂಪ್ರದಾಯಕ ಶೈಲಿಯಲ್ಲಿ ರಚಿಸಲಾಗಿದೆ. ಕೇವಲ ಕಪ್ಪು ವಕ್ರರೇಖೆಗಳ ಮುಖಾಂತರ ಮಹಿಳೆಯನ್ನು ಚಿತ್ರಿಸಿ, ಅವಳ ಮೂಗುತಿಯನ್ನು ಚಿಕ್ಕ ಬಿಳಿಯ ಚುಕ್ಕಿಯಂತೆ ಲೇಪಿಸಲಾಗಿದೆ. ಹೂವಿನ ರಚನೆಯಲ್ಲಿ ಕೂಡ ಸಾಂಕೇತಿಕವಾಗಿ ಗುಲಾಬಿ ದಳಗಳಂತೆ ಕೆಂಪು ವರ್ಣವನ್ನು ಲೇಪಿಸಲಾಗಿದೆ. ಆಕೆಯ ಹಲ್ಲಿನ ಶೃಂಗಾರಕ್ಕೆ ಬೇಕಾಗುವ ಪರಿಕರಗಳನ್ನು ಅಳವಡಿಸಲಾಗಿದೆ. ಸ್ತ್ರೀಯ ಕೇಶಾಲಂಕಾರವನ್ನು ವಿಶಿಷ್ಟವಾಗಿ ಚಿತ್ರಿಸಲಾಗಿದೆ.

**ಹಳ್ಳಿಯ ದೃಶ್ಯ : ೧೯೬೬**

ಮೂರ್ತಚಿತ್ರಗಳಿಗಿಂತ ಅಮೂರ್ತ ಚಿತ್ರಗಳು ಹೆಚ್ಚಿನ ವಿಷಯ ವ್ಯಾಪ್ತಿಯನ್ನು ಒಳಗೊಂಡಿರುತ್ತವೆ. ಪಾಟೀಲರು ಗ್ರಾಮೀಣ ಬದುಕಿನ ಚಟುವಟಿಕೆಗಳು ಮತ್ತು ಪರಿಸರವನ್ನು ಅಮೂರ್ತ ಶೈಲಿಯಲ್ಲಿ ಪರಿಣಾಮಕಾರಿಯಾಗಿ ಚಿತ್ರಿಸಿದ್ದಾರೆ. ಹಳ್ಳಿಯ ಜೀವನದ ತಮ್ಮ ಬಾಲ್ಯದ ಸ್ಮರಣೆಗಳನ್ನು ಈ ಕೃತಿಯಲ್ಲಿ ಚಿತ್ರಿಸಿದ್ದಾರೆ. ಹಳ್ಳಿಯಲ್ಲಿರುವ ಮನೆ, ಗುಡಿಸಲುಗಳು, ಗಿಡ ಮರಗಳಿಗೆ ಪ್ರಖರ ವರ್ಣಗಳನ್ನು ಬಳಸಲಾಗಿದೆ. ಗ್ರಾಮೀಣ ಪರಿಸರದಲ್ಲಿ ಹುಟ್ಟಿದ ಕಲಾವಿದರು ತಮ್ಮ ಸ್ಮೃತಿಪಟಲದಿಂದ ಗ್ರಾಮೀಣ ಬದುಕನ್ನು ಅಮೂರ್ತವಾಗಿ ಕಟ್ಟಿರುವುದು ಪರಿಣಾಮಕಾರಿಯಾಗಿದೆ. ಗ್ರಾಮೀಣ ಸೊಗಡಿನ ವಿಶೇಷತೆಯನ್ನು ಸಾಂಕೇತಿಕವಾಗಿ ವಿವರಿಸಲು ಪ್ರಯತ್ನಿಸಲಾಗಿದೆ. ಚಿತ್ರದಲ್ಲಿರುವ ಯಾವುದೇ ಆಕೃತಿಗಳು ಸ್ಪಷ್ಟತೆಯನ್ನು ಪ್ರತಿಬಿಂಬಿಸದೇ ಕೇವಲ ಕಲಾವಿದರ ಮನದ ತುಡಿತಗಳನ್ನು ಅಮೂರ್ತವಾಗಿ ಪ್ರತಿಬಿಂಬಿಸಲ್ಪಟ್ಟಿವೆ. ಪ್ರಖರವರ್ಣಗಳು ಮಿಶ್ರವರ್ಣಗಳಿಗೆ ಪೂರಕವಾಗಿ ಉಪಯೋಗಿಸಲ್ಪಟ್ಟಿವೆ. ಬಣ್ಣದೊಂದಿಗಿರುವ ಭಾವಸ್ಪಂದನೆಯನ್ನು ಕಲಾವಿದ ಈ ಚಿತ್ರದಲ್ಲಿ ಪರಿಣಾಮಕಾರಿಯಾಗಿ ಬಿಂಬಿಸಿದ್ದಾನೆ.

**ಹಳ್ಳಿ ಪರಿಸರ : ೧೯೬೬**

ಪಾಟೀಲರ ಮತ್ತೊಂದು ಅಮೂರ್ತ ರಚನೆಯ ಕಲಾಕೃತಿ ಇದಾಗಿದೆ. ಮೂರ್ತ ಚಿತ್ರಗಳಿಗಿಂತ ಅಮೂರ್ತ ಚಿತ್ರಗಳೇ ಕಲಾವಿದನ ಮನಸ್ಸಿನ ತೊಳಲಾಟವನ್ನು ತುಡಿತವನ್ನು ಸಮರ್ಥವಾಗಿ ಪ್ರಕಟಿಸುತ್ತವೆ ಎಂಬುದಕ್ಕೆ ಈ ಚಿತ್ರ ಉತ್ತಮ ಉದಾಹರಣೆಯಾಗಿದೆ. ಇಲ್ಲಿ ಪ್ರಕೃತಿಯ ವಸ್ತುವೊಂದನ್ನು ತೆಗೆದುಕೊಳ್ಳುವ ಕಲಾವಿದ ತನ್ನದೇ ತುಡಿತದ ಮೂಲಕ ಅದಕ್ಕೆ ಅಮೂರ್ತ ವಿನ್ಯಾಸವನ್ನು ನೀಡಿದ್ದಾನೆ. ಹಳ್ಳಿಯ ಪರಿಸರ ಎಂಬ ಶೀರ್ಷಿಕೆ ನೀಡಿದ್ದರೂ ಇಲ್ಲಿ ಯಾವುದೂ ಸ್ಪಷ್ಟ ಚಿತ್ರಣವಿಲ್ಲ. ಆದರೂ ಅಲ್ಲಲ್ಲಿ ಚಿಕ್ಕ ಚಿಕ್ಕ ಕಿಡಿಕಿಯಂತೆ ಹಳದಿ, ಕಪ್ಪು, ಬಿಳುಪಿನ ದೊಡ್ಡ ದೊಡ್ಡ ಕುಂಚದ ಬೀಸುಗಳು ಕಂಡು ಬರುತ್ತವೆ. ಹಳ್ಳಿಯ ಮನೆಯ ಗೋಡೆಗಳ ನೆನಪು ಮಾಡಿಕೊಡುವಂತೆ ಬಣ್ಣದ ಅಡ್ಡ ಪಟ್ಟಿಕೆಗಳನ್ನು ಎಳೆಯಲಾಗಿದೆ. ಕಲಾವಿದರ ವ್ಯಕ್ತಿ ಸ್ವಾತಂತ್ರ್ಯ ಅಭಿವ್ಯಕ್ತಿಗಳಿಗೆ ಇದೊಂದು ಉತ್ತಮ ನಿದರ್ಶನವಾಗಿದೆ.

**ಕೆಲಸಗಾರನ ಭಾವಚಿತ್ರ : ೧೯೬೭**

ಈ ಭಾವಚಿತ್ರ ಒಬ್ಬ ಕುಶಲಕಾರ್ಮಿಕನದು. ಕ್ಷಿಪ್ರ ಅವಧಿಯಲ್ಲಿ ರಚಿಸಿದ ಈ ಚಿತ್ರದಲ್ಲಿ ರೂಪದರ್ಶಿಯ ಕಪ್ಪು ವರ್ಣ ಪರಿಣಾಮಕಾರಿಯಾಗಿ ಮೂಡಿಬಂದಿದೆ. ಕುಂಚದ ಬೀಸುಗಳು ಮುಖದ ಉಬ್ಬು-ತಗ್ಗು ಪ್ರದೇಶಗಳನ್ನು ತೋರಿಸುವುದರ ಜೊತೆಗೆ ವ್ಯಕ್ತಿಯ

ಭಾವನೆಗಳನ್ನು ನೈಜವಾಗಿ ಪ್ರತಿಬಿಂಬಿಸಿವೆ. ತಲೆಯ ಮೇಲೆ ಸುತ್ತಿರುವ ರುಮಾಲು ಅದರ ನಿರಿಗೆಗಳು ಸ್ಪಷ್ಟವಾದ ಹಿನ್ನೆಲೆಯನ್ನು ತೋರ್ಪಡಿಸುತ್ತವೆ. ಹಿನ್ನೆಲೆಯಲ್ಲಿ ರೂಪದರ್ಶಿಗೆ ಹೊಂದಿಕೊಳ್ಳುವಂತೆ ತೆಳು ನೀಲಿಯನ್ನು ಬಳಸಲಾಗಿದೆ. ಉಡುಪುಗಳು ತೆಳುವಾದ ಗುಣವನ್ನು ಹೊಂದಿರುವಂತೆ ವರ್ಣದ ಎಳೆತಗಳಲ್ಲಿಯೆ ವಿಸ್ಮಯವೆನಿಸುವ ಹಾಗೆ ರಚಿಸಿದ್ದಾರೆ.

**ಶಿರ್ಷಿಕೆ ರಹಿತ ಕಲಾಕೃತಿ : ೧೯೬೭**

ಪಾಟೀಲರ ಅಮೂರ್ತ ಶೈಲಿಯ ಕಲಾಕೃತಿಗಳಲ್ಲಿ ಇದು ಒಂದು. ಈ ಕಲಾಕೃತಿ ಪೋಸ್ಟರ ವರ್ಣದಿಂದ ರಚಿಸಿದ್ದು, ನೇರವಾದ ವರ್ಣಗಳ ಬಳಕೆ ಇಲ್ಲಿಲ್ಲ. ವರ್ಣಗಳು ಒಂದಕ್ಕೊಂದು ಪೂರಕವಾಗಿರುವಂತೆ ಕಂಡು ಬರುತ್ತದೆ. ಕಲಾವಿದನ ತುಡಿತ ಮಿಡಿತಗಳು ವರ್ಣವಿನ್ಯಾಸದ ಮುಖಾಂತರ ಹೊರಹೊಮ್ಮಿದಂತಿವೆ. ನೋಡುಗನನ್ನು ಭ್ರಮಾಲೋಕಕ್ಕೆ ಕರೆದೊಯ್ಯುವಂತೆ ಚಿತ್ರಿಸಲಾಗಿದೆ. ಈ ಅಮೂರ್ತ ಕಲಾಕೃತಿಯು ವಿನೂತನ ಪ್ರಯೋಗದ ಸಂದೇಶವನ್ನು ಸಾರುವಂತಿದೆ. ವಿಕಸಿತ ಮನಸ್ಸಿನ ಅಂತರಾಳದ ಸವಿನೆನಪುಗಳನ್ನು ಇಲ್ಲಿ ಕಾಣಬಹುದಾಗಿದೆ. ದಟ್ಟವಾದ ನೀಲಿವರ್ಣದ ಎಳೆತಗಳು ಕಲಾವಿದನ ಅಂತರಾಳವನ್ನು ತೆರೆದಿಟ್ಟಿವೆ. ಕೆಂಪು ಮತ್ತು ಹಳದಿ ವರ್ಣಗಳು ಭಾವಲಹರಿಗೆ ಕರೆದೊಯ್ಯುತ್ತವೆ.

**ಶಿವಲಿಂಗ : ೧೯೬೭**

ಮೂರ್ತ ಮತ್ತು ಅಮೂರ್ತಗಳ ಸಂಯೋಗದಿಂದ ಈ ಕೃತಿಯನ್ನು ರಚಿಸಲಾಗಿದೆ. ಆಧ್ಯಾತ್ಮ ಭಾವನೆಗಳ ಅಭಿವ್ಯಕ್ತಿಗೆ ನೈಜ ಶೈಲಿಗಿಂತ ಅಮೂರ್ತ ರಚನಾತಂತ್ರವನ್ನು ಸಮರ್ಥವಾಗಿ ಕಲಾವಿದರು ಇಲ್ಲಿ ಬಳಸಿಕೊಂಡಿದ್ದಾರೆ. ಶಿವಲಿಂಗ ಎಂಬ ಶೀರ್ಷಿಕೆಯ ಈ ಕಲಾಕೃತಿಯನ್ನು ಕೇವಲ ಸಂಕೇತ ಮತ್ತು ಪ್ರಖರ ವರ್ಣಗಳಿಂದ ರಚಿಸಲಾಗಿದೆ. ಕಲಾವಿದರ ವರ್ಣ ಸಂಯೋಜನೆಯ ಜ್ಞಾನ, ಅತ್ಯಂತ ಕ್ಷಿಪ್ರ ರೀತಿಯ ರಚನಾ ತಂತ್ರಗಳು ಇಲ್ಲಿ ಗಮನಾರ್ಹವಾಗಿವೆ. ಹಾಗೂ ಕುಂಚದ ಬೀಸುಗಳು ಚಲನ ಶೀಲತೆ ಪಡೆದಿವೆ. ಶಿವನ ಪ್ರತೀಕವಾದ ಈ ಲಿಂಗವನ್ನು ಭಾವನೆಗಳಿಗೆ ಪೂರಕವಾಗುವ ದಿಶೆಯಲ್ಲಿ ಜ್ಯಾಮಿತಿಕ ಸ್ವರೂಪದಲ್ಲಿ ಚಿತ್ರಿಸಲಾಗಿದೆ.

**ಹೆಣ್ಣು ಮಗಳು : ೧೯೬೮**

ಈ ಚಿತ್ರವು ಕಾಗದದ ಮೇಲೆ ಪೆನ್ನಿನ ಮಾಧ್ಯಮದಿಂದ ರೇಖಾ ವಿನ್ಯಾಸದಲ್ಲಿ ಚಿತ್ರಿಸಲ್ಪಟ್ಟಿದೆ. ಎಂ. ಬಿ. ಪಾಟೀಲರ ರೇಖಾಚಿತ್ರಗಳು ಕೆ. ಕೆ. ಹೆಬ್ಬಾರರ ರೇಖಾಚಿತ್ರಗಳನ್ನು ನೆನಪಿಗೆ ತರುವಷ್ಟು ಶಕ್ತಿಶಾಲಿ, ಚೈತನ್ಯಯುಕ್ತ ಮತ್ತು ಜೀವಂತಿಕೆಯಿಂದ ಕೂಡಿವೆ. ಇಲ್ಲಿ ಮಹಿಳೆಯೊಬ್ಬಳು ಉಡುಗೆ ತೊಡುಗೆಯೊಂದಿಗೆ ಆಲೋಚನಾ ಮಗ್ನಳಾಗಿ ನಿಂತಿದ್ದಾಳೆ. ಗಂಭೀರ

ನೆಲೆಯಲ್ಲಿ ನಿಂತು ನೋಡಬಹುದಾದ ಈ ಕೃತಿ ವಿವಿಧ ಸ್ಥರಗಳಲ್ಲಿ ಹಾಗೂ ವಿಷಯಾಧಾರಿತ ಅಭಿವ್ಯಕ್ತಿಯನ್ನು ಪಡೆದುಕೊಂಡಿದೆ. ಹಿನ್ನೆಲೆಯಾಗಿ ಕೇವಲ ರೇಖೆಗಳ ಮುಖಾಂತರ ಬೆಟ್ಟ ಗುಡ್ಡಗಳನ್ನು ಹಾಗೂ ಒಂದು ಮರವನ್ನು ಸಾಂಕೇತಿಕವಾಗಿ ಚಿತ್ರಿಸಲಾಗಿದೆ. ಭ್ರಮಾಲೋಕದಲ್ಲಿರುವ ಮಹಿಳೆ ಮರಕ್ಕೆ ಆಸರೆಯಾಗಿ ನಿಂತಿರುವುದು ಚಿತ್ರದಲ್ಲಿ ಕಂಡುಬರುತ್ತದೆ. ಕಂದು ಬಣ್ಣದ ಹಾಳೆಯ ಮೇಲೆ ಪೆನ್ನಿನಿಂದ ರೇಖೆಗಳನ್ನು ಕಲಾತ್ಮಕವಾಗಿ ಎಳೆಯಲಾಗಿದೆ.

**ಸಂಗಾತಿಗಳು : ೧೯೬೮**

ಮಹಿಳೆ ಮತ್ತು ಪುರುಷ ಜೊತೆಯಾಗಿರುವ ಚಿತ್ರ ಇದಾಗಿದ್ದು ಸಂಗಾತಿ ಎಂದು ಶಿರ್ಷಿಕೆ ನೀಡಲಾಗಿದೆ. ಕೇವಲ ರೇಖೆಗಳ ಮೂಲಕ ಸ್ತ್ರೀ ಪುರುಷರು ಹಾಗೂ ಹಿಂದಿನ ಪ್ರಕೃತಿಯನ್ನು ರಚಿಸಲಾಗಿದೆ. ಮನುಷ್ಯನ ಸಾಂಘಿಕ ಜೀವನದ ಆರಂಭವೇ ಸಂಗಾತಿಯ ಆಯ್ಕೆ, ಈ ಸಂಗತಿಯನ್ನು ಸಾಂಕೇತಿಕವಾಗಿ ಚಿತ್ರಿಸಲು ಇಲ್ಲಿ ಪ್ರಯತ್ನಿಸಲಾಗಿದೆ. ರೇಖಾ ವಿನ್ಯಾಸದಲ್ಲಿ ಹೆಣ್ಣು ಮತ್ತು ಗಂಡು ಇಬ್ಬರೂ ತಮ್ಮನ್ನು ತಾವು ಮರೆತು ಯಾವುದೋ ಭ್ರಮಾ ಲೋಕದಲ್ಲಿದ್ದಾರೆ. ನಗ್ನ ಆಕಾರದ ಕೃತಿಗಳು ನೆಲದ ಮೇಲೆ ಕುಳಿತು ಚರ್ಚಿಸುತ್ತಿದ್ದಾರೆ. ಪರಸ್ಪರ ಪಿಸುಮಾತಿನಲ್ಲಿ ತಲ್ಲೀನರಾಗಿರುವ ಸಂಗಾತಿಗಳು ಸಲ್ಲಾಪದಲ್ಲಿ ನಿರತರಾಗಿದ್ದಾರೆ. ರೇಖೆಗಳ ಜೀವಂತಿಕೆ ಆಕೃತಿಗೆ ಪೂರಕವಾಗಿದೆ. ಬಣ್ಣದ ಹಾಳೆಯ ಮೇಲೆ ನೀಲಿ ವರ್ಣದ ಸ್ಕೆಚ್ ಪೆನ್ನಿನಿಂದ ಈ ಚಿತ್ರ ರಚಿಸಲಾಗಿದೆ.

**ನಗ್ನ ಮಹಿಳೆ : ೧೯೬೮**

ಈ ಚಿತ್ರವು ಇಂಕ್ ಮಾಧ್ಯಮದಿಂದ ರೇಖಾ ವಿನ್ಯಾಸದಲ್ಲಿ ಚಿತ್ರಿಸಲ್ಪಟ್ಟಿದೆ. ನಗ್ನಾಕಾರದ ಸ್ತ್ರೀ ವಿರಹಿಯಾಗಿ ಹಳ್ಳದ ದಂಡೆಯಲ್ಲಿ ಕುಳಿತಿದ್ದಾಳೆ. ಸ್ತ್ರೀಯ ದೇಹವು ದಷ್ಟಪುಷ್ಟವಾಗಿದ್ದು, ಬಯಕೆಯ ಆಗಸದಲ್ಲಿ ತೇಲುತ್ತಿದ್ದಾಳೆ. ಸ್ತ್ರೀಯ ದೇಹವು ಅಂಗರಚನಾ ಶಾಸ್ತ್ರಕ್ಕೆ ತಕ್ಕಂತೆ ನೇರವಾದ ಹಾಗೂ ನೈಜವಾದ ರೇಖೆಗಳಿಂದ ಕೂಡಿದೆ. ಭಾವಪೂರ್ಣವಾಗಿ ಅಂತರ್ ಮುಖಿಯಾಗಿ ತನ್ನ ತಲೆಯ ಮೇಲೆ ಕೈಯಿಟ್ಟು ಕುಳಿತಂತಿದೆ. ಕಾಲಡಿಯಲ್ಲಿ ನಿರು ಹರಿಯುತ್ತಿದೆ. ವಿಚಾರಶೀಲಳಾಗಿರುವ ಸ್ತ್ರೀಯು ಮೈಮರೆತಿದ್ದಾಳೆ. ದೇಹದ ಅವಯವಗಳು ಕೃತಿಯ ತುಡಿತವನ್ನು ಸ್ಪಷ್ಟವಾಗಿ ನಿರೂಪಿಸುತ್ತವೆ.

**ಸ್ತ್ರೀ ಮತ್ತು ಗೂಳಿ : ೧೯೬೮**

ಈ ರೇಖಾ ಚಿತ್ರವು ಕೂಡ ಒಂದು ರೀತಿಯ ವಿರಹದ ಸಂವೇದನೆಯಂತೆ ಕಂಡು ಬರುವುದು. ಮಹಿಳೆಯೊಬ್ಬಳು ನಗ್ನಾಕಾರದಲ್ಲಿ ಓರೆಯಾಗಿ ಕುಳಿತಿದ್ದು ಕೆಳಗಡೆ

ಒಂದು ಗೂಳಿಯನ್ನು ಸಾಂಕೇತಿಕವಾಗಿ ರೇಖಾವಿನ್ಯಾಸದಿಂದ ಚಿತ್ರಿಸಲಾಗಿದೆ. ಪ್ರೇಮಕ್ಕೆ ಸಂಕೇತವಾಗಿ ಗಂಡು-ಹೆಣ್ಣಿನ ರೇಖಾಚಿತ್ರ ರಚಿಸಲಾಗಿದೆ. ಪ್ರಕೃತಿ ಪುರುಷರ ಸಮಾಗಮದ ಸಂಕೇತ ಇಲ್ಲಿ ಕಂಡು ಬರುವುದು. ಸ್ತ್ರೀಯನ್ನು ಪ್ರಕೃತಿಯಾಗಿ ಗೂಳಿಯನ್ನು ಪುರುಷ ಸಂಕೇತವಾಗಿ ಚಿತ್ರಿಸಲಾಗಿದೆ.

**ಸ್ತ್ರೀ-ಪುರುಷ : ೧೯೬೮**

ಮಹಿಳೆ ಮತ್ತು ಪುರುಷರ ಜೋಡಿ ಚಿತ್ರದಾಗಿದೆ. ಕಲಾವಿದನು ರೇಖಾ ವಿನ್ಯಾಸದಲ್ಲಿ ಭಾವನೆಗಳನ್ನು ಅತ್ಯಂತ ಕ್ಷಿಪ್ರಗತಿಯಲ್ಲಿ ಚಿತ್ರಿಸಿದ್ದಾನೆ. ನಗ್ನಾಕಾರದ ಸ್ತ್ರಿ-ಪುರುಷರ ದೇಹಗಳು ಪರಸ್ಪರ ಸಂಧಿಸುವಂತಿವೆ. ಪ್ರೇಮ ಸಲ್ಲಾಪದಲ್ಲಿ ತಲ್ಲೀನರಾಗಿರುವ ದಂಪತಿಗಳು ಭಾವನಾಲಹರಿಯಲ್ಲಿ ವಿಹರಿಸುತ್ತಿದ್ದಾರೆ. ಸರಸಮಯ ಬದುಕಿನ ತುಡಿತಗಳನ್ನು ತುಂಬ ಪರಿಣಾಮಕಾರಿಯಾಗಿ ಅನಾವರಣ ಗೊಳಿಸುವ ಕೃತಿ ಇದಾಗಿದೆ. ರೇಖೆಗಳ ವೇಗ, ಚಲನಶೀಲತೆ, ಅರ್ಥವಂತಿಕೆ,ಭಾವನಾತ್ಮಕತೆಗಳು ಚಿತ್ರದಲ್ಲಿ ಕಂಡು ಬರುತ್ತವೆ.

**ದಂಪತಿಗಳು : ೧೯೬೮**

ಇದು ಕೂಡಾ ಹೆಣ್ಣು-ಗಂಡು ಸಂಗಮದ ರೇಖಾಚಿತ್ರ. ಸ್ತ್ರೀ-ಪುರುಷರಿಬ್ಬರು ಪರಸ್ಪರ ಭಾವೋದ್ವೇಗದಲ್ಲಿ ಮುಳುಗಿ ಕ್ರೀಡಿಸುತ್ತಿದ್ದಾರೆ. ಪಾಟೀಲರ ರೇಖಾ ಚಿತ್ರಗಳಲ್ಲಿ ಈ ರೀತಿಯ ಪ್ರೇಮ ಸಂಗಮದ ಚಿತ್ರಗಳ ಸರಣಿಯು ವಿಶಿಷ್ಟವಾಗಿದೆ. ಇಬ್ಬರು ಪ್ರೇಮಿಗಳನ್ನು ಸಾಂಕೇತಿಕವಾಗಿ ರೇಖೆಯಿಂದ ಚಿತ್ರಿಸಲಾಗಿದೆ. ಕಾಗದದ ಮೇಲೆ ಇಂಕ್ ಮಾಧ್ಯಮದಿಂದ ಈ ಕೃತಿಯನ್ನು ರಚನೆ ಮಾಡಲಾಗಿದೆ. ಸ್ತ್ರೀ-ಪುರುಷರ ರೇಖಾ ಚಿತ್ರಗಳಲ್ಲಿ ಇದು ಭಿನ್ನವಾಗಿದ್ದು ಸ್ತ್ರೀ-ಪುರುಷರು ಕುಳಿತಿರುವ ಭಂಗಿಯೇ ಬೇರೆಯಾಗಿದೆ. ಒಂದೇ ಸರಣಿ ಚಿತ್ರಗಳಾಗಿದ್ದರೂ ಇದರಲ್ಲಿ ಇನ್ನಿತರ ರೇಖಾಚಿತ್ರಗಳಿಗಿಂತ ಶೈಲಿಯಲ್ಲಿ, ರಚನೆಯಲ್ಲಿ ಬದಲಾವಣೆ ಇದೆ.

**ಸ್ತ್ರೀ-ಪುರುಷರು : ೧೯೬೮**

ಅರ್ಧನಾರೀಶ್ವರ ಶಿವನ ರೂಪದಲ್ಲಿ ಒಂದೇ ಆಕಾರದಲ್ಲಿ ಸ್ತ್ರೀ-ಪುರುಷರ ಲಕ್ಷಣಗಳನ್ನು ರಚಿಸುವಂತೆ ಈ ಚಿತ್ರದಲ್ಲಿ ಸ್ತ್ರೀ ಮತ್ತು ಪುರುಷನನ್ನು ಒಂದೇ ದೇಹದಲ್ಲಿ ರಚಿಸಲಾಗಿದೆ. ಸೂಕ್ಷ್ಮವಾಗಿ ನೋಡಿದಾಗ ಎರಡು ದೇಹಗಳು ಕಾಣುವವು. ಇಲ್ಲಿ ನಗ್ನಾಕಾರದ ವ್ಯಕ್ತಿಗಳು ಪರಸ್ಪರ ಸುರತ ಕ್ರೀಡೆಯಲ್ಲಿ ತೊಡಗಿರುವ ಹಾಗೆ ಕಂಡು ಬರುತ್ತದೆ. ಸ್ತ್ರೀ ದೇಹವು ಪೂರ್ಣವಾಗಿ ಕಂಡರೂ ಪುರುಷ ದೇಹವು ಅಲ್ಪವಾಗಿ ಕಂಡು ಬರುತ್ತದೆ. ಮಂಚದ ಮೇಲೆ ಆಕಾರಗಳು ಮಲಗಿದ ಹಾಗೆ ರೇಖೆಗಳನ್ನು ಎಳೆದಿರುವುದು ಕಲಾವಿದನ ಸೃಜನಶೀಲತೆಯನ್ನು

ಪ್ರತಿಬಿಂಬಿಸುತ್ತದೆ. ಇಬ್ಬರೂ ತಮ್ಮಲ್ಲಿರುವ ಕಾಮ ಬಯಕೆಗಳನ್ನು ಈಡೇರಿಸಿಕೊಳ್ಳುವ ನಿಟ್ಟಿನಲ್ಲಿ ಮೈಮರೆತಿದ್ದಾರೆ. ಸುತ್ತಲೂ ಮಂಚವೆಂದೇ ಭಾಸವಾಗುವ ಆಯತ ನಿರ್ಮಿಸಿದ್ದಾರೆ. ಅದರಂತೆ ಕೆಳಗಡೆ ಹಾಸಿಗೆಯನ್ನು ರೇಖೆಗಳ ಮುಖಾಂತರ ತೋರಿಸಲಾಗಿದೆ.

**ವಿಶ್ರಾಂತಿ : ೧೯೬೮**

ಈ ಕಲಾಕೃತಿ ಪೋಸ್ಟರ ಮಾಧ್ಯಮದಿಂದ ರಚಿಸಲಾಗಿದೆ. ಈ ಕಲಾಕೃತಿಗೆ ಪಾಟೀಲರು ವಿಶ್ರಾಂತಿ ಎನ್ನುವ ಶೀರ್ಷಿಕೆಯನ್ನು ನೀಡಿದ್ದು ರಮ್ಯತೆಯನ್ನು ಸಾರುವಂತಿದೆ. ಈ ಕಲಾಕೃತಿಯಲ್ಲಿ ಸ್ತ್ರೀಯೊಬ್ಬಳು ವೈಯಾರದ ಭಂಗಿಯಲ್ಲಿ ಕುಳಿತು ಕೈಯಲ್ಲಿ ತಂಬೂರಿಯನ್ನು ಹಿಡಿದು ಭಾವ ಲಹರಿಯಲ್ಲಿ ನುಡಿಸುತ್ತಿದ್ದಾಳೆ. ಸ್ತ್ರೀಯು ಕುಳಿತ ಪರಿಸರ ಸುಂದರವಾಗಿದೆ. ಮಹಿಳೆಯ ಕೇಶವು ಇಂದಿನ ಫ್ಯಾಶನ್ ಯುಗಕ್ಕೆ ಹೊಂದುವಂತೆ ವಿನ್ಯಾಸಗೊಳಿಸಲಾಗಿದೆ. ಇದೊಂದು ಗ್ರಾಮೀಣ ಸೊಗಡಿನ ವಾದ್ಯವಾಗಿದ್ದು, ದಾಸರು ನುಡಿಸುವ ತಂಬೂರಿ ವಾದನವಾಗಿದೆ. ಮಹಿಳೆಯು ಮೈಮರೆತು ತನ್ಮಯಳಾಗಿ ನುಡಿಸುತ್ತಿದ್ದಾಳೆ.

ಆಕೆಯ ದೇಹಕ್ಕೆ ಕಪ್ಪು ಮತ್ತು ಕಂದು ವರ್ಣಗಳ ಲೇಪನವಿದ್ದು ಮುಖದಲ್ಲಿ ನೆರಳು ಬೆಳಕಿನ ಪರಿಣಾಮವನ್ನು ಬಿಂಬಿಸಿದ್ದಾರೆ. ದೇಹಕ್ಕೆ ಹೊಂದಿಕೊಳ್ಳುವಂತಹ ರವಿಕೆ ಹಾಗೂ ಸೀರೆಯ ನೀರಿಗೆಗಳು ದೇಹಕ್ಕೆ ಅಂಟಿಕೊಂಡಂತಿವೆ. ಕಲಾಕೃತಿಗೆ ಹೊಂದಾಣಿಕೆಯಾಗುವಂತೆ ಹಿನ್ನೆಲೆಯಲ್ಲಿ ತಿಳಿ ಹಳದಿ, ಹಸಿರು, ಬಿಳಿಯ ವರ್ಣಗಳ ಸಂಯೋಜನೆಯಿದೆ.

**ನಿಸರ್ಗ ಚಿತ್ರ : ೧೯೬೮**

ನಿಸರ್ಗ ಚಿತ್ರವನ್ನು ಪಾಟೀಲರು ತುಂಬಾ ಕ್ಷಿಪ್ರಗತಿಯಲ್ಲಿ ರಚಿಸುತ್ತಾರೆ. ಈ ಕೃತಿಯಲ್ಲಿ ಮೂರ್ತ ಮತ್ತು ಅಮೂರ್ತ ಆಕಾರದಲ್ಲಿ ನಿಸರ್ಗ ಚಿತ್ರ ರಚಿಸಲಾಗಿದೆ. ಆಕಾಶ ಹಾಗೂ ನೀರಿನ ವರ್ಣವನ್ನು ತೆಳು ನೀಲಿಯಿಂದ ಕುಂಚದ ಬೀಸುಗಳ ವಿನ್ಯಾಸದಿಂದ ಪೂರ್ಣಗೊಳಿಸಲಾಗಿದೆ. ಭೂಮಿಯ ವರ್ಣವನ್ನು ಕಂದು ಕೆಂಪು ಛಾಯೆಯಿಂದ ದೊಡ್ಡ ಪಟ್ಟಿಕೆಗಳಿಂದ ಚಿತ್ರಿಸಲಾಗಿದೆ. ನೀರಿನ ಸುತ್ತಲೂ ಭೂಮಿಯ ಹರಡುವಿಕೆ ಹಾಗೂ ಗಿಡ ಮರಗಳು ಅದರ ಪ್ರತಿಬಿಂಬ ಎಲ್ಲವೂ ಸಾಂಕೇತಿಕವಾಗಿ ವರ್ಣಗಳಲ್ಲಿ ಅರಳಿ ನಿಂತಂತಿವೆ. ವೇಗದಿಂದ ರಚಿಸಿದ ಈ ನಿಸರ್ಗ ಚಿತ್ರ ಜೀವಂತಿಕೆಯನ್ನು ಪಡೆದುಕೊಂಡಿದೆ.

**ಹಳ್ಳಿಯ ನಿಸರ್ಗ : ೧೯೬೯**

ಇದು ಕಲಾವಿದನ ಅನುಭವದ ಹಿನ್ನೆಲೆಯಲ್ಲಿ ರಚಿತವಾದ ನೆರಳು ಬೆಳಕಿನ ಒಡನಾಟದ ಪರಿಣಾಮಕಾರಿ ಕೃತಿಯಾಗಿದೆ. ಕಲಾವಿದರು ತಮ್ಮ ಸ್ಮೃತಿಪಟಲದಿಂದ ಹೊರಬಂದ ಭಾವನೆಗಳಿಗೆ ಆಕಾರಗಳನ್ನು ಕೊಟ್ಟಿದ್ದಾರೆ. ವರ್ಣ ಸಂಯೋಜನೆ ಹಾಗೂ ಆಕಾಶದತ್ತ ಚಾಚಿರುವ ಹಸಿರಾದ ಗಿಡ ಮರಗಳು ಅದರಡಿಯಲ್ಲಿ ಇರುವ ಹಳ್ಳಿ, ಚಿಕ್ಕ ಚಿಕ್ಕ ಗುಡಿಸಲುಗಳು ಎಲ್ಲವೂ ಕಲಾವಿದನ ಸೃಜನಶೀಲತೆಯ ಪ್ರತಿಬಿಂಬದಂತಿವೆ.

ಸುತ್ತಲೂ ಇರುವ ಇಡೀ ಸಸ್ಯಗಳ ನೆರಳು ನೆಲದ ಮೇಲೆ ಚಾಚಿಕೊಂಡಂತೆ ಬೆಳಕಿನ ಪ್ರತಿಫಲನದೊಂದಿಗೆ ಬೆರೆತುಕೊಂಡಿದೆ. ಹಸಿರು ವರ್ಣದ ಗಿಡಗಳಿಗೆ ಪೂರಕವಾದ ಕಂದು ನೀಲಿ ವರ್ಣವು ಸೌಂದರ್ಯವನ್ನು ಇನ್ನಷ್ಟು ಹೆಚ್ಚಿಸಿದೆ. ಕುಂಚದ ಬೀಸುಗಳು ಚಲನೆಯನ್ನು ತಂದುಕೊಟ್ಟಿವೆ.

**ಗಂಗಾಧರ ಸ್ವಾಮಿಗಳ ಭಾವಚಿತ್ರ : ೧೯೬೯**

ಗಂಗಾಧರ ಸ್ವಾಮಿಗಳ ಈ ಭಾವಚಿತ್ರವನ್ನು ಪೇಸ್ಟಲ್ ವರ್ಣದಿಂದ ರಚಿಸಲಾಗಿದೆ. ಸ್ವಾಮಿಗಳನ್ನು ರೂಪದರ್ಶಿಯಾಗಿ ಬಳಸಿಕೊಂಡಿರುವುದು ಅತ್ಯಂತ ಗಮನಾರ್ಹ ವಿಚಾರ. ಹಲವಾರು ಮಾಧ್ಯಮಗಳಲ್ಲಿ ಕೌಶಲ್ಯವನ್ನು ಕರಗತ ಮಾಡಿಕೊಂಡಿರುವ ಪಾಟೀಲರು ಗಂಗಾಧರ ಸ್ವಾಮೀಜಿಯವರ ಭಾವಚಿತ್ರವನ್ನು ಪೇಸ್ಟಲ್ ಮಾಧ್ಯಮದಿಂದ ರಚಿಸಿರುವುದು ಇವರು ಆ ಮಾಧ್ಯಮದಲ್ಲಿ ಹೊಂದಿದ ಕ್ಷಮತೆಯನ್ನು ಪ್ರತಿಬಿಂಬಿಸುತ್ತದೆ. ರೂಪದರ್ಶಿಯ ಮುಖವರ್ಣ ಅತ್ಯಂತ ತೆಳುವಾದ ಕುಂಚದ ಹೊಡೆತಗಳಿಂದ ಲೇಪಿಸಲಾಗಿದೆ. ವರ್ಣವಿನ್ಯಾಸದಲ್ಲಿ ಸ್ಪಷ್ಟತೆ ಮತ್ತು ಕಾಂತಿ ತುಂಬಿಕೊಂಡಿದೆ. ಬಳಸಿರುವ ಪೇಸ್ಟಲ್ ವರ್ಣಗಳ ಎಳೆತಗಳಲ್ಲಿ ಚಲನಶೀಲತೆಯನ್ನು ಕಾಣಬಹುದು.

**ತಮಟೆ ಬಾರಿಸುತ್ತಿರುವ ವ್ಯಕ್ತಿ : ೧೯೬೯**

ಚಪ್ಪಟೆಯಾಕಾರದ ರೇಖೆಗಳಿಂದ ವೇಗವಾಗಿ ಈ ಚಿತ್ರವನ್ನು ರಚಿಸಲಾಗಿದೆ. ತಮಟೆ ಬಾರಿಸುತ್ತಿರುವ ಗ್ರಾಮೀಣ ವ್ಯಕ್ತಿಯ ಚಿತ್ರ ಇದಾಗಿದೆ. ಗ್ರಾಮೀಣ ಸಂಸ್ಕೃತಿಯನ್ನು ಪ್ರತಿನಿಧಿಸುವ ಸಂಪ್ರದಾಯಕ ವಾದ್ಯಗಳಲ್ಲಿ ಒಂದಾದ ತಮಟೆ ಸಾಮಾನ್ಯ ಹಬ್ಬ ಹರಿದಿನಗಳಲ್ಲಿ, ಮದುವೆ ಸಮಾರಂಭಗಳಲ್ಲಿ ಬಾರಿಸಲ್ಪತ್ತದೆ. ಪ್ರಸ್ತುತ ವ್ಯಕ್ತಿ ಚಿತ್ರಣದಲ್ಲಿ ತಲೆಯ ಮೇಲೆ ರುಮಾಲು ಹಾಗೂ ಬಲಗೈಯಲ್ಲಿ ಹಿಡಿದಿರುವ ಕಟ್ಟಿಗೆಯನ್ನು ಮನಸೆಳೆಯುವಂತೆ ಚಿತ್ರಿಸಲಾಗಿದೆ. ಗ್ರಾಮದ ಸಂಸ್ಕೃತಿಯನ್ನು ಪ್ರತಿನಿಧಿಸುವ ಕಲಾತ್ಮಕ ರೇಖಾಚಿತ್ರ ಇದಾಗಿದೆ. ಪಾಟೀಲರು

ಯಾವುದೇಕೃತಿ ರಚಿಸಿದರೂ ಪ್ರಜ್ಞಾಪೂರ್ವಕವಾಗಿ ಅನಾವರಣ ಗೊಳಿಸುತ್ತಾರೆ. ಮತ್ತು ಶೀರ್ಷಿಕೆಗೆ ತಕ್ಕಂತೆ ರೂಪಗಳು, ಭಾವನೆಗಳು ಸ್ಪಷ್ಟವಾಗಿ ವ್ಯಕ್ತವಾಗುವಂತೆ ಚಿತ್ರಿಸುತ್ತಾರೆ ಎಂಬುದಕ್ಕೆ ಈ ಕೃತಿ ಉತ್ತಮ ನಿದರ್ಶನವಾಗಿದೆ.

**ಪ್ರತಿಬಿಂಬ : ೧೯೬೯**

ಪಾಟೀಲರು ಅಮೂರ್ತ ರೂಪದ ಕಲಾಕೃತಿಯಲ್ಲಿ ಯಾವಾಗಲೂ ಹೊಸತನಕ್ಕಾಗಿ ಹುಡುಕಾಟದಲ್ಲಿ ತೊಡಗಿಸಿರುವಂತೆ ಚಿತ್ರಿಸುತ್ತಾರೆ. ಅಂತಹ ಹಿನ್ನೆಲೆಯಲ್ಲಿ ರಚನೆಗೊಂಡ ಕಲಾಕೃತಿ ಇದಾಗಿದೆ. ಪ್ರಸ್ತುತ ಚಿತ್ರದಲ್ಲಿ ಬೆಳಕಿನ ಪ್ರತಿಫಲನವು ಗೋಡೆಯ ಮೇಲೆ ಪಾರದರ್ಶಕದಂತೆ ಪ್ರತಿನಿಧಿಸುತ್ತಲಿದೆ. ಬೆಳಕಿನ ವಕ್ರೀಭವನವು ಛಾಯೆಯಾಗಿ ವಸ್ತುವಿನ ಮೇಲೆ ಬಿದ್ದಾಗ ವರ್ಣಮಯವಾಗಿ ಪ್ರತಿಫಲಿಸಿದಂತೆ ಕಲಾವಿದನು ಕಲಾಕೃತಿಗೆ ರೂಪಕೊಟ್ಟಿದ್ದಾನೆ.

ಹಸಿರು, ಕಪ್ಪು ಮಿಶ್ರಿತ ವರ್ಣಗಳನ್ನು ಯಥಾದರ್ಶನ ನಿಯಮದಂತೆ ಕುಂಚದ ಬೀಸುಗಳಿಂದ ಚಿತ್ರಿಸಲಾಗಿದೆ. ಇಡೀ ಕಲಾಕೃತಿಯನ್ನು ಕುಂಚದ ಎಳೆತಗಳಿಂದ ಪೂರ್ಣ ಗೊಳಿಸಲಾಗಿದೆ. ಪಾಟೀಲರು ತಾವು ರಚಿಸಿದ ಅಮೂರ್ತ ಕಲಾಕೃತಿಗಳಲ್ಲಿ ಆಧುನಿಕ ಮನೋಭಾವಗಳನ್ನು ಮೈಗೂಡಿಸಿಕೊಂಡಿರುವುದು ಮಾತ್ರವಲ್ಲದೇ ಭಾವತೀವ್ರತೆ ಅರ್ಥವಂತಿಕೆಗಳನ್ನು ತರಲು ಪ್ರಯತ್ನಿಸಿದ್ದಾರೆ. ಅಂತಹ ಪರಿಣಾಮಕಾರಿಯಾದ ಈ ಅಮೂರ್ತ ಕಲಾಕೃತಿಗೆ ಪ್ರತಿಬಿಂಬ ಎಂದು ಶೀರ್ಷಿಕೆ ಕೊಟ್ಟಿದ್ದು, ಪೋಸ್ಟರ ವರ್ಣದಿಂದ ರಚಿಸಲ್ಪಟ್ಟಿದೆ.

**ಪ್ರತಿಫಲನ : ೧೯೬೯**

ಪ್ರತಿಫಲನ ಎಂಬ ಶೀರ್ಷಿಕೆಯಡಿಯಲ್ಲಿ ರಚಿಸಲಾದ ಈ ಕಲಾಕೃತಿ ಪ್ರಖರ ವರ್ಣಗಳಿಂದ ಚಿತ್ರಿಸಲ್ಪಟ್ಟಿದೆ. ಬೆಳಕಿನ ಪ್ರತಿಫಲನದ ವಿವಿಧ ಆಯಾಮಗಳನ್ನು ಅಮೂರ್ತ ಶೈಲಿಯಲ್ಲಿ ಪ್ರತಿಬಿಂಬಿಸಲಾಗಿದೆ. ಯಾವುದೇ ಸ್ಪಷ್ಟ ಆಕಾರಗಳಿರದಿದ್ದರೂ ಬಣ್ಣದ ಮೈವಳಿಕೆ, ಕುಂಚದ ಎಳೆತಗಳು ಕಲಾಕೃತಿಗೆ ಜೀವತುಂಬಿವೆ.

ಸುಪ್ತಮನಸ್ಸಿನ ಭಾವನೆಗಳಿಗೆ ರೂಪಕೊಡುವಲ್ಲಿ ಹೊಸತನವನ್ನು ಕಂಡುಕೊಂಡಿದ್ದಾರೆ. ಹಳದಿ, ಕಪ್ಪು, ಹಸಿರು ವರ್ಣ ಲೇಪನವು ಸೃಜನಶೀಲ ಪ್ರವೃತ್ತಿಯ ಪ್ರತೀಕವಾಗಿದೆ. ಬೆಳಕಿನ ಚಲ್ಲಾಟ ಮನಸ್ಸಿನ ತುಮುಲಗಳನ್ನು ಸಾಂಕೇತಿಕವಾಗಿ ನಿರೂಪಿಸಲಾಗಿದೆ. ಪಾರದರ್ಶಕ ವರ್ಣತಂತ್ರಗಳು ಪರಿಣಾಮಕಾರಿಯಾಗಿ ಮೂಡಿಬಂದಿವೆ.

**ಕುದುರೆ : ೧೯೬೯**

ಜಲವರ್ಣದಲ್ಲಿ ಕಪ್ಪು ಬಿಳುಪಿನ ವರ್ಣತಂತ್ರ ಬಳಸಿ ಈ ಕಲಾಕೃತಿ ರಚಿಸಲಾಗಿದೆ. ನೈಜ ಶೈಲಿಯಲ್ಲಿ ರಚನೆಯಾದ ಚಿತ್ರವು ಜೀವಂತಿಕೆಯಿಂದ ಕೂಡಿದೆ. ಕುದುರೆಯನ್ನು ವ್ಯಕ್ತಿಯ ಮನಸ್ಸಿನ ಸಂಕೇತವಾಗಿ, ಬಯಕೆ ಮತ್ತು ಕಾಮದ ಸಂಕೇತವಾಗಿ ಕಲಾವಿದರು ಚಿತ್ರಿಸುತ್ತ ಬಂದಿದ್ದಾರೆ. ಇಲ್ಲಿ ಪಾಟೀಲರು ಹುಚ್ಚು ಮನಸ್ಸಿನ ಹತ್ತು ಮುಖಗಳಿಗೆ ಪ್ರತಿಫಲನವೆಂಬಂತೆ ಕುದುರೆಯನ್ನು ಚಿತ್ರಿಸಿದ್ದಾರೆ. ಕುದುರೆಯು ವೇಗವಾಗಿ ಓಡುತ್ತಿದೆ. ಕುಂಚದ ಎಳೆತಗಳಿಂದ ಅದರ ವೇಗವನ್ನು ಹೆಚ್ಚಿಸಲಾಗಿದೆ. ಕಪ್ಪು ಬಿಳುಪಿನ ಛಾಯೆಗಳಿಂದಲೇ ಕುದುರೆಯ ಮೈಬಣ್ಣ, ಹಿನ್ನೆಲೆ ಮುನ್ನೆಲೆಗಳನ್ನು ರಚಿಸಲಾಗಿದೆ. ಕಲಾವಿದರ ಕಲ್ಪನಾಶಕ್ತಿ ಮತ್ತು ಚಿತ್ರರಚನಾ ಕೌಶಲ್ಯಕ್ಕೆ ಉತ್ತಮ ನಿದರ್ಶನ ಇದಾಗಿದೆ.

**ಇಬ್ಬರು ಸ್ತ್ರೀಯರು : ೧೯೬೯**

ಆಧುನಿಕ ಶೈಲಿಯಲ್ಲಿ ರಚನೆಯಾದ ಕೃತಿ ಇದಾಗಿದೆ. ಇಲ್ಲಿ ಇಬ್ಬರು ಸ್ತ್ರೀಯರು ಪರಸ್ಪರ ಮಾತನಾಡುತ್ತಲಿದ್ದಾರೆ. ಏಕಾಂತದಲ್ಲಿ ಗಹನ ವಿಚಾರ ಚರ್ಚಿಸುತ್ತಿರುವಂತೆ ಕಂಡು ಬರುತ್ತದೆ. ಇಬ್ಬರೂ ಸ್ತ್ರೀಯರ ಮುಖದಲ್ಲಿ ಮಂದಹಾಸ ತುಂಬಿಕೊಂಡಿದೆ. ಮುಖದ ವರ್ಣ ಲೇಪನವು ಉತ್ಕೃಷ್ಟ ಸಂಯೋಜನೆಯಿಂದ ಕೂಡಿದೆ. ಸ್ತ್ರೀಯರು ಮಾತಿನಲ್ಲಿ ತೊಡಗಿದ್ದರೂ ಕಲ್ಪನಾ ಲೋಕದಲ್ಲಿ ವಿಹರಿಸುವಂತಿದೆ. ಇಬ್ಬರ ದೇಹದ ವರ್ಣವೂ ಒಂದೇ ತೆರನಾಗಿದೆ. ಹಿಂಬದಿಯ ಎರಡು ಚಿತ್ರಗಳು ಈ ಆಕೃತಿಗಳಿಗೆ ಮೆರಗನ್ನು ತಂದಿವೆ. ಹಾಗೆಯೇ ಪಟ್ಟಿಕೆಯಲ್ಲಿ ಮೂರು ಗಿಡಗಳನ್ನು ರಚಿಸಲಾಗಿದೆ. ಹಿನ್ನಲೆಯಲ್ಲಿ ದಟ್ಟ ವರ್ಣ ಸಂಯೋಜನೆ ಮನಸ್ಸಿಗೆ ಮುದನೀಡುತ್ತದೆ.

**ಮಂಡಲ : ೧೯೭೦**

ಕಲಾವಿದರು ಕಲೆಯಲ್ಲಿ ವರ್ಣವಿನ್ಯಾಸವನ್ನು ವಿಶಿಷ್ಟವಾಗಿ ತಾಂತ್ರಿಕ ವಿಧಿ ವಿಧಾನಗಳಿಗೆ ಅನುಸಾರವಾಗಿ ಉಪಯೋಗಿಸಿಕೊಂಡು ರಚನೆ ಮಾಡಿದ ಕಲಾಕೃತಿ ಇದಾಗಿದೆ. ಧಾರ್ಮಿಕ ಆಚರಣೆಯಲ್ಲಿ ಬಳಸುವ ವಿಶಿಷ್ಟ ಮಂಡಲ ಚಿತ್ರವನ್ನು ಆಧುನಿಕ ಕಲ್ಪನೆಯೊಂದಿಗೆ ಇಲ್ಲಿ ಚಿತ್ರಿಸಲಾಗಿದ್ದು, ಕೇವಲ ಜಾಮಿತಿಕ ಆಕಾರಗಳನ್ನು ಇಲ್ಲಿ ಬಳಸಿಕೊಂಡಿದ್ದಾರೆ. ಜ್ಯಾಮಿತಿಕ ವಿನ್ಯಾಸಗಳನ್ನು ಸಾಂಕೇತಿಕವಾಗಿ ಚಿತ್ರಿಸಿರುವ ಈ ಕಲಾಕೃತಿಯು ಔಚಿತ್ಯ ಪೂರ್ಣ ತೈಲವರ್ಣದಿಂದ ಪೂರ್ಣಗೊಂಡಿದೆ. ಆಯತ, ಚೌಕ, ತ್ರಿಕೋನಕಾರ ಹಾಗೂ ರೇಖೆ, ವೃತ್ತಗಳು ಪರಸ್ಪರ ವರ್ಣಗಳ ಲೇಪನದಿಂದ ವಿಶಿಷ್ಟವಾಗಿ ಸಂಯೋಜಿಸಲ್ಪಟ್ಟಿವೆ. ವರ್ಣ ವಿಭಜನೆ, ಸಂಯೋಜನೆ,

ವೈರುಧ್ಯಗಳು ಪರಿಣಾಮಕಾರಿಯಾಗಿ ಮೂಡಿಬಂದಿವೆ. ನೀಲಿ, ಕಂದು, ಬಿಳಿವರ್ಣಗಳ ಸಂಯೋಜನೆ ಇದರಲ್ಲಿದೆ. ಕಲಾವಿದನ ಸ್ಮೃತಿಪಟಲದಲ್ಲಿ ವಿಕೇಂದ್ರಿಕರಣಗೊಂಡ ಮನೋವೃತ್ತಿಗಳೇ ಇಲ್ಲಿ ಕಲಾಕೃತಿಯಾಗಿ ರೂಪುಗೊಂಡಿವೆ.

**ವಿಚಾರಮಗ್ನ ವ್ಯಕ್ತಿ : ೧೯೭೦**

ಮಾನವನು ಸದಾ ಒಂದಲ್ಲ ಒಂದು ರೀತಿಯ ವಿಚಾರವಂತಿಕೆಯನ್ನು ಹೊಂದಿದವನಾಗಿದ್ದಾನೆ ಎಂಬ ಹಿನ್ನೆಲೆಯಲ್ಲಿ ಈ ಕಲಾಕೃತಿ ರಚಿಸಲ್ಪಟ್ಟಿದೆ. ಮಾನವನ ಗುಣಾವಗುಣಗಳು, ಮನೋಭಾವಗಳ ಆಧಾರದಲ್ಲಿ ಆತನ ಕಲಾಕೃತಿಯ ವರ್ಣವಿನ್ಯಾಸವು ನಿರ್ಧರಿಸಲ್ಪಡುತ್ತದೆ ಎಂಬುದಕ್ಕೆ ಈ ಕೃತಿ ಉತ್ತಮ ನಿದರ್ಶನವಾಗಿದ್ದು ಉತ್ತಮ ವರ್ಣವಿನ್ಯಾಸ ಹೊಂದಿದೆ. ವ್ಯಕ್ತಿಯಲ್ಲಿರುವ ತಾಮಸ ಮತ್ತು ರಾಜಸ ಗುಣಗಳ ಸಂಕೇತವಾಗಿ ಈ ಚಿತ್ರದಲ್ಲಿ ಒಬ್ಬ ವ್ಯಕ್ತಿಯನ್ನು ಕಪ್ಪು ಮತ್ತು ಬಿಳಿಯ ವರ್ಣದಿಂದ ಚಿತ್ರಿಸಲಾಗಿದೆ. ವ್ಯಕ್ತಿಯ ಹಿನ್ನೆಲೆಯಲ್ಲಿ ಬೆಳಕು ಚೆಲ್ಲಿದ್ದರೂ ಕೂಡ ಅವನಲ್ಲಿರುವ ಅಂಧಕಾರ ಹಾಗೆಯೇ ಉಳಿದಿದೆ ಎಂಬುದಕ್ಕೆ ಈ ಕಲಾಕೃತಿ ನಿದರ್ಶನವಾಗಿದೆ. ಮೇಲಿನ ಪಟ್ಟಿಕೆಯಲ್ಲಿ ಅಂಧಕಾರದ ಸಂಕೇತವಾಗಿ ಕಪ್ಪು ಬಣ್ಣವನ್ನು ದಟ್ಟವಾಗಿ ಲೇಪಿಸಲಾಗಿದೆ. ಕಲಾಕೃತಿಯಲ್ಲಿ ಸರಳತೆ ಇದ್ದರೂ ಸಂಕೀರ್ಣತೆ ತುಂಬಿಕೊಂಡಿದೆ.

**ನಿಸರ್ಗ ಚಿತ್ರ : ೧೯೭೦**

ಕತ್ತಲೆಯನ್ನು ಹೊಡೆದೋಡಿಸಲು ಸೂರ್ಯಕಿರಣಗಳ ಪ್ರಭಾವಳಿಯು ನಿಧಾನವಾಗಿ ಪ್ರಕೃತಿಯಲ್ಲಿ ವ್ಯಾಪಿಸಿಕೊಂಡಂತೆ ಇಲ್ಲಿ ಚಿತ್ರಿಸಲಾಗಿದೆ. ಸೂರ್ಯನ ಉದಯದ ನಂತರ ನಿಸರ್ಗದ ಇಡೀ ಚಿತ್ರಣವೇ ಬದಲಾದಂತೆ ಕಂಡು ಬರುತ್ತಿದೆ. ವಿನೂತನ ಪ್ರಯೋಗದ ಮುಖಾಂತರ ನವ್ಯ ಮತ್ತು ನೈಜ ಶೈಲಿಯ ಸಮ್ಮಿಶ್ರಣದಲ್ಲಿ ನೆರಳು ಬೆಳಕಿನ ವೈವಿಧ್ಯತೆಯಿಂದ ಕೃತಿ ಪೂರ್ಣಗೊಳಿಸಲಾಗಿದೆ. ಹಳ್ಳಿಗಾಡಿನ ಮನೆಯೊಂದರ ಮೇಲೆ ಸೂರ್ಯರಶ್ಮಿ ಬಿದ್ದಾಗ ಅದರ ಛಾಯೆ ಯಾವರೀತಿ ವರ್ತಿಸುತ್ತದೆ ಎಂಬುದನ್ನು ಮನೋಜ್ಞವಾಗಿ ಚಿತ್ರಿಸಲಾಗಿದೆ. ಹಿನ್ನೆಲೆ-ಮುನ್ನೆಲೆಯಲ್ಲಿ ವರ್ಣಗಳ ಬಳಕೆ ಜೀವಂತಿಕೆಯನ್ನು ಪಡೆದುಕೊಂಡಿದೆ. ತಿಳಿವರ್ಣ ಬೆಳಕನ್ನು ತೋರಿಸಿದರೆ ದಟ್ಟ ವರ್ಣವು ವಸ್ತುವಿನ ಆಳವನ್ನು ತೋರಿಸುತ್ತದೆ ಎಂಬುದನ್ನು ಈ ಕೃತಿಯಲ್ಲಿ ಪ್ರತಿಬಿಂಬಿಸಲಾಗಿದೆ.

**ಸಮುದ್ರ ತೀರ : ೧೯೭೦**

ಪಾಟೀಲರು ಪ್ರಕೃತಿ ಚಿತ್ರಗಳಲ್ಲಿ ವಿಭಿನ್ನತೆ ವೈವಿಧ್ಯತೆ ಕಂಡುಕೊಳ್ಳುವ ಹಿನ್ನೆಲೆಯಲ್ಲಿ ಪ್ರಯೋಗಗಳನ್ನು ನಡೆಸಿದ ಪ್ರತಿಫಲ ಈ ಕೃತಿಯಾಗಿದೆ. ಈ ಕಲಾಕೃತಿಯಲ್ಲಿ ಮೋಹಕವಾದ ಸಮುದ್ರ ತೀರವನ್ನು ಚಿತ್ರಿಸಲಾಗಿದೆ. ಅಲೆಗಳು ವೇಗವಾಗಿ ಚಲಿಸಿದಾಗ ಕುಂಚದ ರಭಸಕ್ಕೆ ಮೂಡಿಬಂದ ನಿಸರ್ಗಚಿತ್ರ ಇದಾಗಿದೆ. ಕಲಾಕೃತಿಯಲ್ಲಿ ಸಮುದ್ರದ ಅಲೆಗಳ ರಭಸವನ್ನು ಪರಿಣಾಮಕಾರಿಯಾಗಿ ಕುಂಚದ ಎಳೆತಗಳಿಂದ ನಿರೂಪಿಸಲಾಗಿದೆ. ಯಥಾದರ್ಶನದ ನಿಯಮಾನುಸಾರವಾಗಿ ಹಿನ್ನೆಲೆ ಮುನ್ನೆಲೆಗಳನ್ನು ದಟ್ಟ ಹಾಗೂ ತೆಳುವಾದ ವರ್ಣಗಳಿಂದ ಲೇಪನ ಮಾಡಲಾಗಿದೆ.

ನೀಲಿಯಾದ ಆಕಾಶ ಸಮುದ್ರ ಅಲೆಗಳು ಬೇರೆ ಬೇರೆ ಬಣ್ಣಗಳಿಂದ ಚಿತ್ರಿಸಲ್ಪಟ್ಟಿವೆ. ಸಮುದ್ರ ತೀರ, ಅವಕಾಶದಲ್ಲಿನ ವಾಯು ಮಂಡಲ ಇವುಗಳು ಮಸುಕಾಗಿ ಕಾಣುತ್ತವೆ. ಹತ್ತಿರದ ದಂಡೆಯ ಮೇಲಿರುವ ವಸ್ತುಗಳು ಸ್ಪಷ್ಟವಾಗಿ ಗೋಚರವಾಗುತ್ತಿವೆ. ಯಥಾದರ್ಶನ ಸಿದ್ಧಾಂತದ ಅರಿವನ್ನು ಇದು ನೀಡುತ್ತದೆ. ವಸ್ತುಗಳ ನೆರಳು, ಬೆಳಕಿನ ವಿನ್ಯಾಸಗಳನ್ನು ಸಹ ನೀರಿನಲ್ಲಿ ಬಿಂಬಿಸಲಾಗಿದೆ.

**ಅರವತ್ತರಿಂದ ಎಪ್ಪತ್ತರ ದಶಕದ ವರೆಗಿನ ಕಲಾಕೃತಿಗಳ ವಿಶ್ಲೇಷಣೆ :**

ಈ ದಶಕದಲ್ಲಿ ರಚನೆಗೊಂಡಿರುವ ಕಲಾಕೃತಿಗಳನ್ನು ಅಧ್ಯಯನಕ್ಕೊಳಪಡಿಸಿದಾಗ ಕೆಳಗಿನ ಅಂಶಗಳು ಕಂಡು ಬರುತ್ತವೆ. ಈ ದಶಕದಲ್ಲಿ ಕ್ರಿ.ಶ ೧೯೬೩ ರಿಂದ ೧೯೭೦ ರ ವರೆಗಿನ ಅವಧಿಯಲ್ಲಿ ರಚನೆಯಾದ ಒಟ್ಟು ಮೂವತ್ತನಾಲ್ಕು ಕಲಾಕೃತಿಗಳನ್ನು ಅಧ್ಯಯನಕ್ಕೆ ಪರಿಗಣಿಸಲಾಗಿದೆ. ಇವುಗಳಲ್ಲಿ ಕೆಲವು ವಿದ್ಯಾರ್ಥಿಹಂತದ ಕಲಾಶೈಲಿಯನ್ನು ಪ್ರತಿನಿಧಿಸಿದರೆ ಮತ್ತೆ ಕೆಲವು ಕಲಿಕೆಯ ನಂತರದಲ್ಲಿ ಹೊಸ ಉತ್ಸಾಹದಿಂದ ರಚಿಸಿದ ವಿಭಿನ್ನಕೃತಿಗಳಾಗಿವೆ. ಈ ದಶಕದಲ್ಲಿ ೧೯೬೩ ರಿಂದ ೧೯೬೫ರ ವರೆಗೆ ರಚಿತಗೊಂಡ ಕಲಾಕೃತಿಗಳು ವಿದ್ಯಾರ್ಥಿ ಹಂತದ ಮನೋಭಾವಗಳನ್ನು ತೋರಿಸುತ್ತವೆ.

ಕಲಾ ಅಧ್ಯಯನದ ಸಂದರ್ಭದಲ್ಲಿ ಅನುಸರಿಸಿರುವ ಮಾರ್ಗಸೂಚಿಗಳು, ರೀತಿ ನೀತಿಗಳು, ಕಲಾ ವ್ಯಾಕರಣಗಳು, ಅನುಕರಿಸುವ ವಿಧಾನಗಳು ಮುಂತಾದ ಲಕ್ಷಣಗಳು ಈ ಸಂದರ್ಭದ ಕೃತಿಗಳಲ್ಲಿ ಗೋಚರಿಸುತ್ತವೆ. ಇದು ಕಲಾ ಶಿಕ್ಷಣವನ್ನು ಪಡೆದುಕೊಂಡ ವಿದ್ಯಾರ್ಥಿಗಳೆಲ್ಲರಲ್ಲಿಯೂ ಕಂಡು ಬರುವ ಸಾಮಾನ್ಯ ಲಕ್ಷಣಗಳಾಗಿವೆ. ಕಲಾಶಿಕ್ಷಣ ಪಡೆಯುವಾಗ ತಮ್ಮ ಮೇಲೆ ಪ್ರಭಾವ ಬೀರಿದ ಕಲಾ ಅಧ್ಯಾಪಕರ ಪರಿಧಿಯಿಂದ ಪ್ರೇರಿತರಾಗಿರುತ್ತಾರೆ.

ನಂತರದ ಕೆಲವು ಕಾಲಾವಧಿಯವರೆಗೂ ಈ ಪ್ರಭಾವದ ಪರಿಧಿ ಅವರನ್ನು ಆವರಿಸಿಕೊಂಡಿರುತ್ತದೆ. ಮುಂದೆ ಕಲಾಶಿಕ್ಷಣ ಪೂರೈಸಿ ಸಮಾಜಕ್ಕೆ ತೆರೆದು ಕೊಂಡಾಗ ಸ್ವತಂತ್ರ್ಯ ವ್ಯಕ್ತಿತ್ವ, ಶೈಲಿಗಳನ್ನು ರೂಪಿಸಿಕೊಳ್ಳಲು ಮನಸ್ಸು ಬಯಸುತ್ತದೆ. ಇದು ಪ್ರಕೃತಿ ನಿಯಮವಾಗಿದ್ದು, ಪ್ರತಿಯೊಬ್ಬ ಕಲಾವಿದನ ಕೃತಿಗಳು ಸಹಿತ ಇದೇ ಹಿನ್ನೆಲೆಯಲ್ಲಿಯೇ ರಚನೆಗೊಂಡಿರುತ್ತವೆ.

ವಿದ್ಯಾರ್ಥಿ ದೆಸೆಯಲ್ಲಿ ಯಾವುದಾದರೂ ಪ್ರಸಿದ್ಧ ವ್ಯಕ್ತಿ, ಪೌರಾಣಿಕ ಅಥವಾ ಐತಿಹಾಸಿಕ ವ್ಯಕ್ತಿಗಳು, ರಾಜಕೀಯ, ಸಾಮಾಜಿಕ, ಚಲನಚಿತ್ರ ಹೀಗೆ ಯಾವುದೇ ಕ್ಷೇತ್ರದಲ್ಲಿ ಪ್ರಖ್ಯಾತರಾಗಿರುವ ವ್ಯಕ್ತಿಗಳ ಛಾಯಾಚಿತ್ರಗಳನ್ನು ಯಥಾವತ್ ಪ್ರತಿಕೃತಿ ಮಾಡುವ ಹುಮ್ಮಸು, ಹೆಚ್ಚಾಗಿರುತ್ತದೆ. ಇಲ್ಲವೇ ಪ್ರಸಿದ್ಧ ಚಿತ್ರಕಾರರ ಕೃತಿಗಳನ್ನು ಅನುಕರಿಸುವ ಬಯಕೆಯೂ ಕೆಲವರಲ್ಲಿ ಕಂಡು ಬರುತ್ತದೆ. ಇದಕ್ಕೆ ಹಿಂದಿನ ಕಲಾಶಿಕ್ಷಣ ಪದ್ಧತಿಯೂ ಕಾರಣವಾಗಿರಬಹುದು.

ಅರವತ್ತರಿಂದ ಎಪ್ಪತ್ತರ ಈ ದಶಕದಲ್ಲಿ ಪಾಟೀಲರು ಸಹಿತ ಈ ಬಗೆಯ ಕಲಾಕೃತಿಗಳನ್ನು ರಚನೆಮಾಡಿದ್ದಾರೆ. ಬಸವೇಶ್ವರರ ಚಿತ್ರ, ರವೀಂದ್ರನಾಥ ಟ್ಯಾಗೋರ ಚಿತ್ರ, ರಾಧಾಕೃಷ್ಣನ್ ಅವರ ಚಿತ್ರ, ಗಂಗಾಧರ ಸ್ವಾಮಿಯ ಚಿತ್ರ, ಇವೆಲ್ಲವುಗಳನ್ನು ಗಮನಿಸಿದಾಗ ಛಾಯಾಚಿತ್ರದ ಆಧಾರದಲ್ಲಿ ಇಲ್ಲವೆ ಖ್ಯಾತ ಚಿತ್ರಕಾರರ ಕೃತಿಗಳ ಪ್ರತಿಕೃತಿಯ ಹಿನ್ನೆಲೆಯಲ್ಲಿ ಇವುಗಳನ್ನು ರಚಿಸಿರುವುದು ಕಂಡುಬರುತ್ತದೆ. ಕೆಲವು ಭಾವಚಿತ್ರಗಳು ಸಹಿತ ಈ ಹಿನ್ನೆಲೆಯಲ್ಲಿ ರಚಿಸಲ್ಪಟ್ಟಿವೆ.

ಕಲಾ ಅಧ್ಯಯನದ ನಂತರ ಪ್ರತಿಯೊಬ್ಬರೂ ಸ್ವತಂತ್ರವಾದ ಕಲಾಬದುಕನ್ನು ರೂಪಿಸಿಕೊಳ್ಳಲು ಬಯಸುತ್ತಾರೆ. ಕೆಲವರು ಈ ಸಂದರ್ಭದಲ್ಲಿ ಯಾವುದೇ ಸೃಜನಶೀಲತೆ ಇಲ್ಲದೇ ವಿದ್ಯಾರ್ಥಿ ಹಂತದಲ್ಲಿ ರಚಿಸಿದ ಚಿತ್ರಗಳ ಕಲಾಶೈಲಿಯನ್ನೇ ಮುಂದುವರೆಸಿಕೊಂಡು ಹೋಗುತ್ತಾರೆ. ಆದರೆ ಮತ್ತೆ ಕೆಲವರು ಚಿತ್ರರಚನಾ ಶೈಲಿ ಮತ್ತು ಚಿತ್ರದ ವಸ್ತು ವಿಷಯಗಳ ಆಯ್ಕೆಯಲ್ಲಿ ಸಹಿತ ಹೊಸತನವನ್ನು ಪಡೆದುಕೊಳ್ಳಲು ಬಯಸುತ್ತಾರೆ. ಎಂ.ಬಿ. ಪಾಟೀಲರು ಸಹಿತ ಕಲಾ ಅಧ್ಯಯನ ನಂತರ ಸ್ವತಂತ್ರ ಚಿತ್ರಶೈಲಿಯನ್ನು ಅಳವಡಿಸಿಕೊಳ್ಳಲು ಪ್ರಯತ್ನಿಸಿದಂತೆ ಈ ದಶಕದ ಚಿತ್ರಗಳಲ್ಲಿ ಕಂಡುಬರುತ್ತದೆ. ಪಾಟೀಲರು ಗ್ರಾಮೀಣ ಪ್ರದೇಶದಲ್ಲಿ ಜನ್ಮತಾಳಿ ಅಲ್ಲಿನ ಪರಿಸರದಲ್ಲಿ ಬೆಳೆದವರಾದ ಕಾರಣ ಅವರ ಚಿತ್ರಗಳಲ್ಲಿ ನಿರಂತರವಾಗಿ ಗ್ರಾಮೀಣ ಪರಿಸರ, ಸಂಸ್ಕೃತಿ, ಜೀವನ ವಿಧಾನಗಳು ಅನಾವರಣಗೊಂಡಿರುವುದನ್ನು ಕಾಣಬಹುದು. ಈ ದಶಕದ ಚಿತ್ರಗಳಲ್ಲಿ ಸಹಿತ ಕೆಲವು ಗ್ರಾಮೀಣ ಪರಿಸರ ಹಾಗೂ ಸಂಸ್ಕೃತಿಗೆ ಸಂಬಂಧಪಟ್ಟ ಚಿತ್ರಗಳಿವೆ. ಮಹಿಳೆ, ಹಳ್ಳಿಯ ದೃಶ್ಯ, ಹಳ್ಳಿಯ ಪರಿಸರ, ಕೆಲಸಗಾರ, ವಿಶ್ರಾಂತಿ, ನಿಸರ್ಗ, ಹಳ್ಳಿ

ನಿಸರ್ಗ, ಈ ಕಲಾಕೃತಿಗಳು ಅರವತ್ತರಿಂದ ಎಪ್ಪತ್ತರ ದಶಕದಲ್ಲಿ ರಚನೆ ಮಾಡಿದ ಕಲಾಕೃತಿಗಳಾಗಿವೆ. ಇವುಗಳನ್ನು ಗಮನಿಸಿದಾಗ ಚಿತ್ರದ ವಸ್ತು ವಿಷಯಗಳ ಆಯ್ಕೆಯಲ್ಲಿ ಹೊಸತನ ಕಂಡು ಬಂದರೂ ಚಿತ್ರರಚನಾವಿಧಾನದಲ್ಲಿ ಇನ್ನೂ ಕಲಿಕಾ ಹಂತದ ದಟ್ಟಪ್ರಭಾವ ಉಳಿದಿರುವುದು ಕಂಡುಬರುತ್ತದೆ. ಕಲಾಬದುಕಿನ ಆರಂಭದಲ್ಲಿ ಹೊಸತನಕ್ಕಾಗಿ ಹುಡುಕಾಟ ನಡೆಸುತ್ತಿರುವ ಸಂದರ್ಭದಲ್ಲಿ ಆ ಕಾಲಮಾನದ ಪ್ರಸಿದ್ಧ ಕಲಾವಿದರನ್ನು ಅನುಕರಿಸುವುದು ಇಲ್ಲವೆ ಅವರನ್ನು ಮಾದರಿಯಾಗಿ ಇಟ್ಟುಕೊಳ್ಳುವುದು ಪ್ರತಿಯೊಬ್ಬರ ಮನಸ್ಸಿನಲ್ಲಿ ನಡೆಯುವ ಆಂತರಿಕ ಅಭಿಪ್ರೇರಣೆಯಾಗಿದೆ. ಪಾಟೀಲರೂ ಇದರಿಂದ ಹೊರತಾಗಿಲ್ಲ.

ಈ ದಶಕದ ಕೆಲವು ಚಿತ್ರಗಳು ಅಂತಹ ಸಂಗತಿಗಳಿಗೆ ಪುಷ್ಟಿಯನ್ನು ಒದಗಿಸುತ್ತವೆ. ಕೋಳಿಕಾಳಗ ಹೆಬ್ಬಾರರ ಪ್ರೇರಣೆಯನ್ನು ನೆನಪಿಸಿದರೆ, ಹಾರುತ್ತಿರುವ ಕುದುರೆಚಿತ್ರ ಹುಸೇನರ ನೆನಪನ್ನು ಕೊಡುತ್ತದೆ. ಈ ದಶಕದ ಕೆಲವು ಚಿತ್ರಗಳು ಪಾಟೀಲರ ಅಂದಿನ ಮಾನಸಿಕ ವಿಚಾರಗಳು ವಯೋಮಾನ ಸಹಜವಾಗಿರುವ ಚಿಂತನೆಗಳನ್ನು ಪ್ರತಿಬಿಂಬಿಸುತ್ತವೆ. ಮಹಿಳೆ, ಶಿರ್ಷಿಕೆರಹಿತ ಕೃತಿ, ಸಂಗಾತಿಗಳು, ನಗ್ನ ಮಹಿಳೆ, ಸ್ತ್ರೀ ಮತ್ತು ಗೂಳಿ, ಸ್ತ್ರೀ ಪುರುಷರು, ದಂಪತಿಗಳು, ಇಬ್ಬರು ಸ್ತ್ರೀಯರು, ಇಂತಹ ಚಿತ್ರಗಳು ಅವರ ತಾರುಣ್ಯದ ವಿಚಾರಗಳನ್ನು ಸ್ಪಷ್ಟ ಪಡಿಸುತ್ತವೆ.

ಕುತೂಹಲದ ಸಂಗತಿ ಎಂದರೆ ಇವುಗಳಲ್ಲಿ ಹೆಚ್ಚಿನ ಚಿತ್ರಗಳಲ್ಲಿ ಮಹಿಳೆ ನಗ್ನ ಅಥವಾ ಅರೆನಗ್ನವಾಗಿರುವುದು ಮಹತ್ವದ್ದಾಗಿದೆ. ತಾರುಣ್ಯದಲ್ಲಿ ಪ್ರತಿಯೊಬ್ಬ ಪುರುಷನ ಮನಸ್ಸು ಸಹಜವಾಗಿಯೇ ಸ್ತ್ರೀಮನಸ್ಸು, ದೇಹ ಸೌಂದರ್ಯ, ಪ್ರೀತಿ, ಪ್ರೇಮ, ಕಾಮ, ನಗ್ನತೆ, ರತಿಕ್ರೀಡೆಯ ಕುರಿತು ಚಿಂತಿಸುತ್ತಿರುತ್ತದೆ. ಅದೇ ಭಾವನೆಗಳು ಈ ಕೃತಿಗಳಲ್ಲಿ ಪಾಟೀಲರಿಂದ ಅಭಿವ್ಯಕ್ತಗೊಂಡಿವೆ. ಪಾಟೀಲರು ಈ ದಶಕದಲ್ಲಿ ಹಳ್ಳಿಯ ಪರಿಸರ ಹಾಗೂ ನಿಸರ್ಗಗಳನ್ನು ಅಭಿವ್ಯಕ್ತಿ ಪಡಿಸಿದಂತೆ ಗ್ರಾಮೀಣ ಜನಜೀವನ, ಹಾಗೂ ಸಂಸ್ಕೃತಿಗಳನ್ನು ತಮ್ಮ ಕಲಾಕೃತಿಗಳ ಮೂಲಕ ಪ್ರತಿಬಿಂಬಿಸಿದ್ದಾರೆ. ಲಂಬಾಣಿ ಮಹಿಳೆಯರು, ಉಯ್ಯಾಲೆ, ಶಿವಲಿಂಗ, ವಿಶ್ರಾಂತಿ, ಪ್ರತಿಬಿಂಬ, ಮಂಡಲ, ಮುಂತಾದ ಕೃತಿಗಳು ಹಳ್ಳಿ ಸಂಸ್ಕೃತಿಯನ್ನು ಹಿಡಿದಿಡುವ ನಿಟ್ಟಿನಲ್ಲಿ ವಿಶಿಷ್ಟವಾಗಿವೆ.

ಈ ದಶಕದ ಕಲಾಕೃತಿಗಳನ್ನು ಗಮನಿಸಿದಾಗ ವಸ್ತು ವಿಷಯಗಳಲ್ಲಿ ಹೊಸತನ ಕಂಡುಬಂದರೂ, ರಚನಾಶೈಲಿಯಲ್ಲಿ ಇನ್ನೂ ವೈಯಕ್ತಿಕ ಶೈಲಿ ರೂಪುಗೊಂಡಿರುವುದು ಗೋಚರಿಸುವುದಿಲ್ಲ. ವಿದ್ಯಾರ್ಥಿ ಹಂತದಲ್ಲಿ ಅನುಸರಿಸುವ ರಚನಾ ವಿಧಾನ ಮತ್ತು ಶೈಲಿಗಳಲ್ಲಿಯೇ ಇವು ಮುಂದುವರಿಯುವಂತೆ ಕಂಡು ಬರುತ್ತವೆ. ಆದರೂ ಕ್ರಿ.ಶ ೧೯೭೦ ರಲ್ಲಿ ರಚಿಸಿದ ಕೆಲವು ಚಿತ್ರಗಳಲ್ಲಿ ಹೊಸತನಕ್ಕಾಗಿ ಇವರ ಮನಸ್ಸು ತುಡಿಯುತ್ತಿರುವ ಸಂಗತಿ ಗೋಚರಿಸುತ್ತದೆ.



ಭಾವಚಿತ್ರ, 1963, 18X24



ಬಸವೇಶ್ವರರ ಭಾವಚಿತ್ರ, 1963, 18X24



ರವೀಂದ್ರನಾಥ ಟ್ಯಾಗೋರ್ ಭಾವಚಿತ್ರ, 1963, 18X18



ಕೋಳಿ ಕಾಳಗ, 1963, 24X24





ಲಂಭಾಣಿ ಮಹಿಳೆಯ ಭಾವಚಿತ್ರ, 1964, 24X30



ಹಾರುತ್ತಿರುವ ಕುದುರೆ, 1965, 12X18





ಉಯ್ಯಾಲೆ, 1965, 24X12



ರಾಧಾಕೃಷ್ಣ ಅವರ ಭಾವಚಿತ್ರ, 1965, 24X30





ಮಹಿಳೆ, 1965, 24X30



ಹಳ್ಳಿದೃಶ್ಯ, 1966, 18X24





ಹಳ್ಳಿ ಪರಿಸರ, 1966, 24X30



ಕೆಲಸಗಾರನ ಭಾವಚಿತ್ರ, 1967, 24X24





ಶೀರ್ಷಿಕೆ ರಹಿತ ಕಲಾಕೃತಿ, 1967, 24X30



ಶಿವಲಿಂಗ, 1967, 24X30





ಹೆಣ್ಣುಮಗಳು, 1968, 24X18



ಸಂಗಾತಿಗಳು, 1968, 24X24





ನಗ್ನ ಮಹಿಳೆ, 1968, 24X18



ಸ್ತ್ರೀ ಮತ್ತು ಗೂಳಿ, 1968, 24X24





ಸ್ತ್ರೀ ಪುರುಷ, 1968, 12x12



ದಂಪತಿ, 1968, 18x18





ಕುದುರೆ, 1969, 18X18



ಇಬ್ಬರು ಸ್ತ್ರೀಯರು, 1969, 24x30





ಮಂಡಲ, 1970, 24X30



ವಿಚಾರ ಮಗ್ನವ್ಯಕ್ತಿ, 1970, 24X30





ನಿಸರ್ಗಚಿತ್ರ, 1970, 24x30



ಸಮುದ್ರ ತೀರ, 1970, 24x30



## ೦೨. ಎಪ್ಪತ್ತರಿಂದ ಎಂಭತ್ತರ ದಶಕದ ಕಲಾಕೃತಿಗಳು

ಈ ದಶಕದಲ್ಲಿ ೧೯೭೦ ರಿಂದ ೧೯೮೦ರ ವರೆಗೆ ಪಾಟೀಲರು ರಚಿಸಿದ ಕಲಾಕೃತಿಗಳನ್ನು ಅಧ್ಯಯನಕ್ಕೆ ಪರಿಗಣಿಸಲಾಗಿದೆ. ಮುಸ್ಸಂಜೆ, ಪಕ್ಷಿ ಮತ್ತು ಮಹಿಳೆ, ಮಹಿಳೆಯ ಕನಸು, ಜವಾಹರಲಾಲ ನೆಹರು, ನಿಸರ್ಗ ಚಿತ್ರ, ಸ್ವಭಾವ ಚಿತ್ರ, ಪ್ರೇಮ, ಮಹಿಳೆ, ದೋಣಿ, ಗೂಳಿಯೊಂದಿಗೆ ಮಹಿಳೆ, ವಸ್ತು ಚಿತ್ರಣ, ಗೆಳೆತನ, ರೈತಾಪಿ ಕುಟುಂಬ, ರಾತ್ರಿ, ಜೋಗಮ್ಮ ಹೀಗೆ ಒಟ್ಟು ನಲವತ್ತೇಳು ಚಿತ್ರಗಳನ್ನು ಇಲ್ಲಿ ವಿಶ್ಲೇಷಣೆ ಮಾಡಲಾಗಿದೆ. ಅವುಗಳ ಸಂಕ್ಷಿಪ್ತ ಮಾಹಿತಿ ಕೆಳಗಿನಂತಿದೆ.

**ಮುಸ್ಸಂಜೆ : ೧೯೭೧**

ಅಮೂರ್ತ ಶೈಲಿಯಲ್ಲಿ ಆಧುನಿಕ ಕಲ್ಪನೆಗಳಿಂದ ಪ್ರಸ್ತುತ ನಿಸರ್ಗ ಚಿತ್ರವನ್ನು ರಚಿಸಲಾಗಿದೆ. ಸೂರ್ಯ ಮುಳುಗುವಾಗ ಉಂಟಾಗುವ ವರ್ಣಮಯ ಪರಿಸರ, ವೈವಿಧ್ಯತೆಗಳನ್ನು ಅಮೂರ್ತ ಸಂಯೋಜನೆಗಳಿಂದ ಬಿಂಬಿಸಲಾಗಿದೆ. ಸೂರ್ಯಾಸ್ತಕ್ಕೆ ಕಾಲ್ಪನಿಕ ರೂಪ ಕೊಡುವ ವಿಶಿಷ್ಟ ಪ್ರಯತ್ನ ಇಲ್ಲಿದೆ. ಮುಳುಗುತ್ತಿರುವ ಸೂರ್ಯ, ಕೆಂಪು, ಹಳದಿ, ಹಸಿರು, ನೀಲಿ, ಕೇಸರಿ ವರ್ಣಗಳ ಲೇಪನದಿಂದ ಕೂಡಿದ ಗಿಡ ಮರಗಳು, ವಸ್ತುಗಳು, ಆಕಾಶದಲ್ಲಿರುವ ಮೋಡಗಳು, ಪ್ರತಿಯೊಂದು ಕುಂಚದ ಎಳೆತಗಳಿಂದ ನಿರೂಪಿಸಲ್ಪಟ್ಟಿವೆ. ಜಲವರ್ಣದಿಂದ ಪಾರದರ್ಶಕ ತಂತ್ರಗಾರಿಕೆಯಲ್ಲಿ ಕಾಗದದ ಮೇಲೆ ಚಿತ್ರಿಸಲಾಗಿದೆ.

**ಪಕ್ಷಿ ಮತ್ತು ಮಹಿಳೆ : ೧೯೭೧**

ಪಕ್ಷಿಯೊಂದಿಗಿರುವ ಮಹಿಳೆಯ ಈ ಕಲಾಕೃತಿ ಸೃಜನಾತ್ಮಕ ಸಂಯೋಜನೆಯಿಂದ ಕೂಡಿದೆ. ಆಯತಾಕಾರದ ಅಂಕಣವನ್ನು ರಚಿಸಿ ಅದರಲ್ಲಿ ಚಿತ್ರ ರಚಿಸಲಾಗಿದೆ. ಸ್ತ್ರೀಯ ಮುಖದಲ್ಲಿ ಗಾಢವಾದ ಹಳದಿ ಮತ್ತು ಕೆಂಪು ವರ್ಣಗಳು ಹಾಗೂ ಅದಕ್ಕೆ ಪೂರಕವಾಗಿ ಕಪ್ಪು ವರ್ಣದ ಕೇಶವನ್ನು ಬಿಂಬಿಸಲಾಗಿದೆ. ಈ ಕೃತಿ ಶಾಂತಿ ಸಂದೇಶ ಮತ್ತು ಪ್ರೇಮ ಸಂದೇಶ ಸಾರುವ ಸಾಂಕೇತಿಕ ಕಲಾಕೃತಿಯಾಗಿದೆ. ಮಹಿಳೆಯ ಎದೆಯ ಮೇಲೆ ಕುಳಿತ ಪಕ್ಷಿಯು ಸಂದೇಶವನ್ನು ಬೀರುತ್ತಿರುವ ಹಾಗೆ ಕಂಡು ಬರುತ್ತದೆ. ಕುತ್ತಿಗೆಯ ಕೆಳಭಾಗದಲ್ಲಿ ನೆರಳಿನ ಛಾಯೆ ಆವರಿಸಿದಂತೆ ಕಂಡು ಬರುತ್ತಲಿದೆ. ಅದರ ಸುತ್ತಲೂ ಬಿಳಿಯ ವರ್ಣದ ಪಟ್ಟಿಕೆ ರಚಿಸಲಾಗಿದ್ದು ಹೆಚ್ಚಿನ ಮೆರಗು ತಂದಿದೆ. ಮೇಲ್ಭಾಗದ ಪಟ್ಟಿಕೆಯಲ್ಲಿ ಕೆಂಪು ಮತ್ತು ಕಪ್ಪು ವರ್ಣಗಳನ್ನು ಬಳಸಲಾಗಿದೆ. ಚಿತ್ರದ ಹಿನ್ನೆಲೆಯಲ್ಲಿ ಕಂದು ಮತ್ತು ಹಳದಿ ವರ್ಣಗಳನ್ನು ಬಳಸಿರುವುದು ಅತ್ಯಂತ ಸೃಜನಾತ್ಮಕ ವಿವೇಚನೆಯಿಂದ ಕೂಡಿದೆ.

**ಮಹಿಳೆಯರು : ೧೯೭೧**

ಇಬ್ಬರು ಗ್ರಾಮೀಣ ಮಹಿಳೆಯರನ್ನು ಜೊತೆಯಾಗಿ ಈ ಕೃತಿಯಲ್ಲಿ ಚಿತ್ರಿಸಲಾಗಿದೆ. ಹಳ್ಳಿ ಪರಿಸರವನ್ನು ನೆನಪಿಸುವ ಮನೆಗಳು, ರಸ್ತೆ, ವೇಷ ಭೂಷಣಗಳು ಪ್ರಮುಖವಾಗಿವೆ. ಪ್ರಖರ ವರ್ಣಗಳ ಲೇಪನವು ಜನಪದ ಶೈಲಿಯನ್ನು ಪ್ರತಿನಿಧಿಸುತ್ತದೆ. ಇಬ್ಬರೂ ಮಹಿಳೆಯರಿಗೆ ಮುಖವರ್ಣಿಕೆಯನ್ನು ಭಿನ್ನವಾಗಿ ಲೇಪಿಸಲಾಗಿದೆ. ಒಬ್ಬಳಿಗೆ ಕೆಂಪು ವರ್ಣದ ಮುಖವರ್ಣ ಇನ್ನೊಬ್ಬಳಿಗೆ ಹಳದಿ ವರ್ಣ ಲೇಪಿಸಲಾಗಿದೆ.

ಇದು ಕಲಾಕೃತಿ ಸೌಂದರ್ಯಕ್ಕೆ ಪೂರಕವಾಗಿದೆ. ಸ್ತ್ರೀಯರ ಆಕೃತಿಗಳು ಚಿತ್ರದ ಉದ್ದೇಶಕ್ಕೆ ತಕ್ಕಂತೆ ರೂಪುಗೊಂಡಿವೆ. ಅದರಲ್ಲೂ ಬಲಭಾಗದ ಸ್ತ್ರೀಯ ಆಕಾರವು ಏಕಾಂತದ ಕಲ್ಪನೆ ಕೊಡುತ್ತಲಿದೆ. ಗ್ರಾಮೀಣ ವೇಷ ಭೂಷಣ ಮತ್ತು ಪರಂಪರೆಯ ಬಿಂಬನೆಗೆ ಈ ಕೃತಿ ಉದಾಹರಣೆಯಾಗಿದೆ. ಆಕೃತಿಯ ಹಿಂಬದಿಯಲ್ಲಿ ತಿಳಿ ನೀಲಿ ಹಾಗೂ ಕೆಂಪು ವರ್ಣಗಳ ವಿನ್ಯಾಸವು ಅತ್ಯಂತ ರಮಣೀಯವಾಗಿದೆ. ಇದೊಂದು ಸಂಪ್ರದಾಯಕ ನೆಲೆಯಲ್ಲಿ ರಚನೆಗೊಂಡ ಕಲಾಕೃತಿಯಾಗಿದೆ.

**ಮಹಿಳೆಯ ಕನಸು : ೧೯೭೧**

ಆಂತರಿಕ ಬಯಕೆ ಮತ್ತು ಅತೀತ ಸಂಗತಿಗಳನ್ನು ತಾತ್ಕಾಲಿಕವಾಗಿ ಪೂರೈಸಿಕೊಂಡು ಸುಖಿಸುವಲ್ಲಿ ಕನಸು ಅತ್ಯಂತ ಪ್ರಮುಖ ಪಾತ್ರವಹಿಸುತ್ತದೆ. ವಾಸ್ತವಕ್ಕೆ ಹತ್ತಿರವಿರದ ಮತ್ತು ಊಹೆಗೆ ನಿಲುಕದ ವಿಚಾರಗಳು ಕನಸಿನಲ್ಲಿ ಅನಾವರಣಗೊಳ್ಳುತ್ತವೆ. ಕನಸುಗಳಿಗೆ ಮೂರ್ತರೂಪಕೊಡುವುದು. ಕಲಾವಿದನ ಒಂದು ಅದ್ಭುತ ಕಲ್ಪನೆ. ಈ ಹಿನ್ನೆಲೆಯಲ್ಲಿ ಪಾಟೀಲರು ಮಹಿಳೆಯ ಕನಸು ಎಂಬ ಕಲಾಕೃತಿಯನ್ನು ರಚಿಸಿದ್ದಾರೆ. ಈ ಚಿತ್ರದಲ್ಲಿ ಮಹಿಳೆಯ ಕನಸಿನಲ್ಲಿ ಹಲವಾರು ಸಂಗತಿಗಳು ಅನಾವರಣಗೊಂಡಿವೆ.

ಮನೆ, ಮಹಲು, ಬೆಟ್ಟ, ಗುಡ್ಡ, ಪರಿಸರದ ವಿವಿಧ ವಸ್ತುಗಳು, ಸಮುದ್ರಗಳನ್ನು ಕನಸಿನಲ್ಲಿ ಕಂಡಂತೆ ಚಿತ್ರಿಸಲಾಗಿದೆ. ಇದಲ್ಲದೆ ಬೆಳದಿಂಗಳ ಬೆಳಕು, ಹುಣ್ಣಿಮೆಯ ಚಂದ್ರ, ಪರಿಣಾಮಕಾರಿಯಾಗಿ ಮೂಡಿಬಂದಿವೆ. ಇದರಲ್ಲಿ ಸ್ತ್ರೀಯನ್ನು ತಿಳಿ ಹಳದಿ ಹಾಗೂ ಹಿಂಬದಿಯ ಚಂದ್ರನನ್ನು ಬಿಳಿಯ ಬಣ್ಣದಿಂದ ರಚಿಸಲಾಗಿದೆ. ಆಕಾಶವನ್ನು ದಟ್ಟ ನೀಲಿ ವರ್ಣದಿಂದ, ಮಹಲು, ಮನೆಗಳು ನಸುಗೆಂಪು ಹಾಗೂ ಬೆಟ್ಟಗುಡ್ಡಗಳು ದಟ್ಟ ಹಸಿರಿನಿಂದ ಚಿತ್ರಿಸಲ್ಪಟ್ಟಿವೆ.

**ಜವಾಹರಲಾಲ ನೆಹರು : ೧೯೭೨**

ಜವಾಹರಲಾಲ ನೆಹರು ಅವರು ಭಾರತದ ಪ್ರಧಾನಮಂತ್ರಿಗಳಾಗಿದ್ದವರು. ಇವರ ಎದೆ ಮೊಗದ ಭಾವಚಿತ್ರ ಇದಾಗಿದೆ. ಪಶ್ಚಿಮದ ವರ್ಣಗಳ ರಚನಾ ತಂತ್ರವನ್ನು ನೆನಪಿಸುವ ಈ ಚಿತ್ರ ಪಾಟೀಲರ ಭಾವಚಿತ್ರ ಕೌಶಲ್ಯಕ್ಕೆ ಉತ್ತಮ ಉದಾಹರಣೆಯಾಗಿದೆ. ರೂಪದರ್ಶಿಯ ಮುಖದ ವರ್ಣಕ್ಕೆ ಪೂರಕವಾಗಿ ಹಿನ್ನೆಲೆ ವರ್ಣ ಲೇಪಿಸಲಾಗಿದ್ದು ಚಿತ್ರಕ್ಕೆ ಮೃದುವಾದ ಭಾವವನ್ನು ತುಂಬಿದೆ. ಈ ರೀತಿಯ ರಚನಾ ತಂತ್ರಗಳು ಪಾಟೀಲರ ಭಾವಚಿತ್ರಗಳ ಮೂಲ ತಿರುಳಾಗಿದೆ. ಜವಹರಲಾಲ್ ನೆಹರು ಅವರ ಮುಖದಲ್ಲಿ ನೆರಳು ಬೆಳಕಿನ ಪರಿಣಾಮವನ್ನು ನೈಜವಾಗಿ ಚಿತ್ರಿಸಿದ್ದಾರೆ. ಮುಖದ ಭಾವವು ಚಲನ ಶೀಲತೆಯಿಂದ ಕೂಡಿದಂತಿದೆ. ಬೆಳಕಿನ ಬಿಂಬವು ಮುಖದ ಅರ್ಧಭಾಗವನ್ನು ವ್ಯಾಪಿಸಿದ್ದರೆ ಉಳಿದ ಅರ್ಧಭಾಗ ಅದರ ನೆರಳಿನಂತೆ ಭಾಸವಾಗುತ್ತದೆ. ನೆಹರು ಅವರನ್ನು ಕುಂಚದ ಬೀಸುಗಳಿಂದ ತುಂಬಾ ಸ್ಪಷ್ಟವಾಗಿ ಚಿತ್ರಿಸಲಾಗಿದೆ. ಅಂಗಿಯ ವರ್ಣವು ಕಪ್ಪು ಮತ್ತು ನೀಲಿಯ ದಟ್ಟವಾದ ಛಾಯೆಯಿಂದ ಕೂಡಿದ್ದು ಹಿನ್ನೆಲೆಯಲ್ಲಿ ತೆಳು ನೀಲಿ ಹಾಗೂ ತೆಳು ಕಪ್ಪು ಬಳಸಿರುವುದು ಮಹತ್ವದ್ದಾಗಿದೆ.

**ನಿಸರ್ಗ ಚಿತ್ರ : ೧೯೭೨**

ಪ್ರಕೃತಿಯ ಸೌಂದರ್ಯವನ್ನು ವಿಶಿಷ್ಟವಾಗಿ ಚಿತ್ರದಲ್ಲಿ ಸೆರೆ ಹಿಡಿಯುವಲ್ಲಿ ಪಾಟೀಲರು ಪಾಶ್ಚಾತ್ಯ ತಂತ್ರಗಾರಿಕೆಯನ್ನು ಅನುಸರಿಸುತ್ತಾರೆ. ಅಂತಹ ವಿಧಾನದಲ್ಲಿ ಚಿತ್ರಿಸಿದ ಜಲವರ್ಣ ಮಾಧ್ಯಮದ ಕಲಾಕೃತಿ ಇದಾಗಿದೆ. ಚಿತ್ರದಲ್ಲಿ ಅಲ್ಲಲ್ಲಿ ಬೆಳೆದಿರುವ ಹುಲ್ಲುಗಾವಲು, ಗಿಡಮರಗಳು, ನೀರಿನ ಮೂಲಗಳು, ಮನೆಗಳು ಕಂಡು ಬರುತ್ತವೆ. ಇವೆಲ್ಲ ಕುಂಚದ ಚಿಕ್ಕ ಚಿಕ್ಕ ಎಳೆತಗಳಿಂದ ರಚಿಸಿವೆ. ಅಲ್ಲಲ್ಲಿ ಮಾನವಾಕೃತಿಗಳು ಕೆಲಸದಲ್ಲಿ ತೊಡಗಿರುವಂತೆ ಚಿತ್ರಿಸಲಾಗಿದೆ. ಒಟ್ಟಾರೆ ಪರಿಸರ ಹಳ್ಳಿ ದೃಶ್ಯವನ್ನು ಬಿಂಬಿಸುತ್ತದೆ. ಮುಂಭಾಗದಲ್ಲಿ ದೊಡ್ಡದಾದ ಮರವನ್ನು ಚಿತ್ರಿಸಿದ್ದರಿಂದ ಒಟ್ಟು ದೃಶ್ಯ ದೂರದರ್ಶಿತ್ವದ ದಟ್ಟ ಪರಿಣಾಮದಿಂದ ಕೂಡಿದೆ. ಶುಭ್ರವಾದ ನೀಲಾಕಾಶ, ಅಲ್ಲಲ್ಲಿ ಚದುರಿದಂತಿರುವ ಬಿಳಿ ಮೋಡಗಳು ಕಲಾಕೃತಿಗೆ ಮೆರಗು ತಂದಿವೆ.

**ಸ್ವಭಾವ ಚಿತ್ರ : ೧೯೭೨**

ಕಲಾವಿದರು ತಮ್ಮ ಪ್ರತಿಬಿಂಬವನ್ನು ಕನ್ನಡಿಯಲ್ಲಿ ನೋಡಿಕೊಂಡು ತಾವೇ ಅದನ್ನು ಚಿತ್ರಿಸುವುದಕ್ಕೆ ಸ್ವಭಾವ ಚಿತ್ರರಚನೆ ಎಂದು ಕರೆಯಲಾಗುತ್ತದೆ. ಈ ವಿಧಾನದಲ್ಲಿ ಪಾಟೀಲರು ಪ್ರಸ್ತುತ ಚಿತ್ರ ರಚಿಸಿದ್ದಾರೆ. ನೀಲಿ ವರ್ಣದ ಹಾಳೆಯ ಮೇಲೆ ಕಪ್ಪು ಇಂಡಿಯನ್ ಇಂಕ್‌ನಿಂದ ರೇಖಾವಿನ್ಯಾಸದಲ್ಲಿ ರಚಿಸಿರುವ ಮನೋಜ್ಞವಾಗಿರುವ ಸ್ವಭಾವ ಚಿತ್ರಇದಾಗಿದೆ.

ಈ ಕೃತಿಯಲ್ಲಿ ಪಾಟೀಲರು ವಿಚಾರಶೀಲವಾಗಿರುವಂತೆ ಗೋಚರವಾಗುತ್ತದೆ. ಪಾಟೀಲರ ವ್ಯಕ್ತಿತ್ವಕ್ಕೆ ತಕ್ಕಂತೆ ಭಾವ ವಿನ್ಯಾಸವು ಪ್ರತಿಫಲಗೊಂಡಿದ್ದು ಜೀವಂತಿಕೆಯಿಂದ ಕೂಡಿದೆ. ಕಲಾವಿದರ ಮುಖದಲ್ಲಿರುವ ಅಂಗಾಂಗಗಳ ರಚನೆಗೆ ಪೂರಕವಾಗಿ ರೇಖೆಗಳು ಚಲಿಸಿರುವುದು ಕಂಡು ಬರುತ್ತದೆ. ಈ ಭಾವಚಿತ್ರದಲ್ಲಿ ಸಂವೇದನೆಗಳಿಗೆ ಹೆಚ್ಚಿನ ಮಹತ್ವವನ್ನು ಕೊಟ್ಟಿರುವುದು ಮಹತ್ವದ್ದಾಗಿದೆ.

**ಪ್ರೇಮ : ೧೯೭೨**

ಪ್ರೇಮ ಎಂಬ ವಿಷಯದ ಮೇಲೆ ಪಾಟೀಲರು ಹಲವಾರು ಕೃತಿಗಳನ್ನು ರಚನೆಮಾಡಿದ್ದಾರೆ. ಕೆಲವು ಕೃತಿಗಳನ್ನು ನೈಜಶೈಲಿಯಲ್ಲಿ ಮತ್ತೆ ಕೆಲವು ಆಕಾಡಮಿಕ್ ಶೈಲಿಯಲ್ಲಿ ರಚನೆಗೊಂಡಿದ್ದರೆ, ಇನ್ನೂ ಹಲವು ಆಧುನಿಕ ಮನೋಭಾವನೆಯಿಂದ ಪ್ರೇರಣೆಗೊಂಡಿವೆ. ಪ್ರಸ್ತುತ ಚಿತ್ರವು ಆಧುನಿಕ ಸಂವೇದನೆಯಲ್ಲಿ ರಚನೆಗೊಂಡಿದ್ದು, ಪಾಟೀಲರ ಅನೇಕ ಮಹತ್ವದ ಕೃತಿಗಳಲ್ಲಿ ಇದೂ ಒಂದಾಗಿದೆ. ಪಾಟೀಲರಿಗೆ ಸ್ತ್ರೀರೂಪ ಹಲವು ನಿಟ್ಟಿನಲ್ಲಿ ಪ್ರಯೋಗದ ವಸ್ತುವಾಗಿದೆ. ಹಾಗೆಯೇ ಪ್ರೀತಿ, ಪ್ರೇಮ, ಪ್ರಣಯಗಳು ಇಂದಿಗೂ ಅವರ ಕಲಾಕೃತಿಗಳಲ್ಲಿ ಒಡಮೂಡುತ್ತಲೇ ಇವೆ. ಪ್ರಸ್ತುತ ಚಿತ್ರದಲ್ಲಿ ಮಹಿಳೆಯೊಬ್ಬಳು ತನ್ನ ಪ್ರಿಯಕರನೊಂದಿಗೆ ಸಲ್ಲಾಪದಲ್ಲಿ ತೊಡಗಿದ್ದಾಳೆ. ಈ ಚಿತ್ರದಲ್ಲಿ ಮುಖ್ಯವಾಗಿ ಹಳದಿ, ಕೆಂಪು, ಕೇಸರಿ, ಕಪ್ಪು ವರ್ಣಗಳು ಬಳಕೆಗೊಂಡಿವೆ. ಪ್ರೇಯಸಿ ಮತ್ತು ಪ್ರಿಯಕರರ ವರ್ಣವಿನ್ಯಾಸದಲ್ಲಿ ಮಹಿಳೆಯ ಆಕೃತಿಯನ್ನು ಕೆಂಪು ವರ್ಣದಿಂದ ಚಿತ್ರಿಸಿದ್ದು ಪ್ರೇಮದ ಸಂಕೇತ ತೋರಿಸಲಾಗಿದೆ ಹಾಗೂ ಗಂಡಿನ ಆಕೃತಿಗೆ ಪ್ರಜ್ವಲವಾದ ಹಳದಿ ವರ್ಣವನ್ನು ಲೇಪಿಸಲಾಗಿದೆ.

**ಮಹಿಳೆ : ೧೯೭೨**

ಗ್ರಾಮೀಣ ಸೊಗಡಿನ ಹಲವಾರು ಕೃತಿಗಳನ್ನು ಪಾಟೀಲರು ಪರಿಣಾಮಕಾರಿಯಾಗಿ ಚಿತ್ರಿಸಿದ್ದಾರೆ. ಅಂತಹ ಹಳ್ಳಿಯ ಸೊಗಡನ್ನು ಬಿಂಬಿಸುವ ಕಲಾಕೃತಿ ಇದಾಗಿದೆ. ಈ ಚಿತ್ರದಲ್ಲಿ ಮಹಿಳೆಯೊಬ್ಬಳು. ಹಳ್ಳಿಯ ವೇಷ ಭೂಷಣದಲ್ಲಿ ಅಲಂಕಾರಿಕ ವಿನ್ಯಾಸದಲ್ಲಿ ಚಿತ್ರಿಸಲ್ಪಟ್ಟಿದ್ದಾಳೆ. ಆಧುನಿಕ ಮತ್ತು ಸಾಂಪ್ರದಾಯಿಕ ಶೈಲಿಗಳ ಸಮ್ಮಿಶ್ರಣದಿಂದ ಕೂಡಿದ ಕಲಾಕೃತಿ ಇದಾಗಿದೆ. ಮಹಿಳೆಯೊಬ್ಬಳು ಬಾಗಿಲ ಹತ್ತಿರ ನಿಂತು ಯಾರನ್ನೋ ಕಾಯುತ್ತಿರುವಂತೆ ಕಂಡು ಬರುತ್ತದೆ. ಮನೆಯ ಕಟ್ಟಡ, ಬಾಗಿಲು, ಕಿಟಿಕಿಗಳು, ಗಿಡ ಮರಗಳು, ಸುತ್ತಲಿನ ಪರಿಸರ ಎಲ್ಲವೂ ಗ್ರಾಮೀಣ ನೋಟವನ್ನು ನೆನಪಿಸುವಂತೆ ಚಿತ್ರಿಸಿವೆ. ಮಹಿಳೆಗೆ ದಟ್ಟವಾದ ಕೆಂಪು ವರ್ಣದ ಉಡುಪುಗಳನ್ನು ಚಿತ್ರಿಸಿದ್ದು ಮುಖಕ್ಕೆ ಕಂದು ಮಿಶ್ರಿತ ಹಳದಿ

ಬಣ್ಣವನ್ನು ಲೇಪಿಸಲಾಗಿದೆ. ಭಾರತೀಯ ಸಂಸ್ಕೃತಿಯನ್ನು ಪ್ರತಿನಿಧಿಸುವಂತೆ ತಲೆಯ ಮೇಲೆ ಸೆರಗು ಹಾಕಿಕೊಂಡಿರುವುದು, ಕೊರಳು ಹಾಗೂ ಕೈಯಲ್ಲಿ ಆಭರಣವನ್ನು ಧರಿಸಿರುವುದು ಕಂಡು ಬರುತ್ತದೆ. ಗೋಡೆಗೆ ತಿಳಿ ನೀಲಿಯ ವರ್ಣ, ಹೂ, ಗಿಡದ ವಿನ್ಯಾಸ ಹಾಗೂ ಮನೆಯ ಬಾಗಿಲಿಗೆ ದಟ್ಟ ನೀಲವರ್ಣ ಲೇಪಿಸಿ ಕಲಾಕೃತಿಯ ಮೆರಗನ್ನು ಹೆಚ್ಚಿಸಿದ್ದಾರೆ.

**ದೋಣಿ : ೧೯೭೩**

ಪ್ರಕೃತಿ ಚಿತ್ರಗಳಲ್ಲಿ ಪಾಟೀಲರ ಪರಿಶ್ರಮವು ಅಪಾರವಾದುದು. ಪಾಟೀಲರು ನೈಜ ಶೈಲಿ ಮತ್ತು ಆಧುನಿಕವಾದ ಅಮೂರ್ತ ಶೈಲಿಗಳಲ್ಲಿ ನಿಸರ್ಗಚಿತ್ರ ರಚಿಸುತ್ತಾರೆ. ಜಲವರ್ಣ, ತೈಲವರ್ಣ, ಅಕ್ರಾಲಿಕ್, ಮಿಶ್ರವರ್ಣಗಳಲ್ಲಿಯೂ ಪ್ರಕೃತಿ ಚಿತ್ರ ರಚಿಸಿರುವ ಇವರು ದೋಣಿ ಶೀರ್ಷಿಕೆಯ ಈ ಕಲಾಕೃತಿಯನ್ನು ಜಲವರ್ಣದಲ್ಲಿ ಚಿತ್ರಿಸಿದ್ದಾರೆ. ಈ ಕೃತಿಯಲ್ಲಿ ಸಮುದ್ರದಲ್ಲಿ ಕಂಡು ಬರುವ ಸೂರ್ಯಾಸ್ತದ ಸುಂದರ ನೋಟವನ್ನು ಚಿತ್ರಿಸಲಾಗಿದೆ. ಹಿಂದೆ ಕೆಂಪಾದ ಸೂರ್ಯ, ನೀಲಕಡಲು, ದಂಡೆಯ ಮೇಲೆ ಸಮುದ್ರ ವೀಕ್ಷಿಸುತ್ತಿರುವ ಜನಸ್ತೋಮ ಚಿತ್ರಿಸಲಾಗಿದೆ. ಸಾಂಪ್ರದಾಯಿಕ ಮತ್ತು ಆಧುನಿಕ ಶೈಲಿಗಳ ಸಮ್ಮಿಶ್ರಣದಲ್ಲಿ ಚಿತ್ರ ರಚನೆಗೊಂಡಿದೆ. ತಿಳು ನೀಲಿ ವರ್ಣಗಳಿಂದ ಆಕಾಶ ಸಮುದ್ರವನ್ನು ಕುಂಚದ ದೊಡ್ಡ ಬೀಸುಗಳಿಂದ ಚಿತ್ರಿಸಿದ್ದು, ದೋಣಿಯನ್ನು ಚಪ್ಪಟೆ ಬಣ್ಣ ಲೇಪನದಿಂದ ಚಿತ್ರಿಸಿದೆ. ಹಿನ್ನೆಲೆಯಲ್ಲಿ ಚಿಕ್ಕದೊಂದು ದೋಣಿಯ ಆಕೃತಿ ರಚಿಸಲಾಗಿದೆ.

**ಅರೆನಗ್ನ ಸ್ತ್ರೀ : ೧೯೭೩**

ಈ ಕೃತಿಯಲ್ಲಿ ಅರೆ ನಗ್ನಾಕಾರದಲ್ಲಿ ಕುಳಿತಿರುವ ಯೌವನಾವಸ್ತೆಯ ಮಹಿಳೆಯನ್ನು ಚಿತ್ರಿಸಲಾಗಿದೆ. ಭಾವನಾಲಹರಿಯಲ್ಲಿ ಮೈಮರೆತು ಕುಳಿತಿರುವ ಮಹಿಳೆ ಚಂಚಲತೆ, ವಿರಹತಾಪಗಳಿಂದ ಪರಿತಪಿಸುತ್ತಿದ್ದಾಳೆ. ದಪ್ಪನಾದ ಕಾಗದದ ಮೇಲೆ ಪೇಸ್ಟಲ್ ವರ್ಣದಿಂದ ಇದು ಚಿತ್ರಣಗೊಂಡಿದೆ. ಮಹಿಳೆಯು ಓರೆಯಾಗಿ ಕುಳಿತು ಮೈಮೇಲಿನ ಪಾರದರ್ಶಕ ಬಿಳಿಯ ವರ್ಣದ ತೆಳು ವಸ್ತ್ರವನ್ನು ಅರ್ಧ ಮೈ ಕಾಣುವಂತೆ ಧರಿಸಿದ್ದಾಳೆ. ಸ್ತ್ರೀಯ ಮೈ ಬಣ್ಣವು ಹಳದಿಯಿಂದ ಲೇಪನಗೊಂಡಿದೆ. ತಿಳು ಬಿಳುಪಿನ ವರ್ಣವನ್ನು ಹಿನ್ನೆಲೆಗೆ ಲೇಪಿಸಲಾಗಿದೆ.

**ಭಾವಚಿತ್ರ : ೧೯೭೪**

ಮಧ್ಯವಯಸ್ಕ ವ್ಯಕ್ತಿಯೊಬ್ಬನ ಎದೆಮೊಗದ ಚಿತ್ರ ಇದಾಗಿದೆ. ಈ ಭಾವಚಿತ್ರ ತೈಲವರ್ಣ ಮಾಧ್ಯಮದಿಂದ ರಚನೆಗೊಂಡಿದೆ. ಮುಖದ ನೈಜ ವರ್ಣಕ್ಕೆ ತಕ್ಕಂತಿರುವ ಬಣ್ಣ ನುಣುಪಿನಿಂದ ಕೂಡಿದೆ. ಕಂದು ವರ್ಣದ ಹೊಳುಪು ವ್ಯಕ್ತಿಯ ಮುಖದ ಭಾವಕ್ಕೆ ಚಲನೆಯನ್ನು

ತಂದುಕೊಟ್ಟಿದೆ. ವ್ಯಕ್ತಿಯ ಎದೆಯ ಮಟ್ಟದ ಆಕಾರದಲ್ಲಿ ಮೈಗೆ ಲೇಪಿಸಿದ ವರ್ಣವು ಕಾಂತಿಯಿಂದ ಕೂಡಿದೆ. ವ್ಯಕ್ತಿಯು ಮೈಮೇಲೆ ಹಾಕಿಕೊಂಡಿರುವ ಅಂಗಿ ಹಾಗೂ ಶಾಲು ಪಾರದರ್ಶಕವಾಗಿರುವಂತೆ ತೆಳುವರ್ಣದಿಂದ ವಿವರವಾಗಿ ರಚಿಸಲ್ಪಟ್ಟಿದೆ. ಮುಖದಲ್ಲಿ ಗಂಭೀರ ಭಾವನೆ ಕಂಡು ಬರುತ್ತದೆ. ಕುಂಚದ ಬೀಸುಗಳು ವೇಗದ ಗತಿಯನ್ನು ಪಡೆದುಕೊಂಡಿವೆ. ಹಾಗೆಯೇ ವ್ಯಕ್ತಿಯ ರೂಪಕ್ಕೆ ಸರಿಯಾದ ವರ್ಣಗಳ ಬಳಕೆ ಹಾಗೂ ಮುಖದ ಮೇಲೆ ಪರಿಣಾಮಕಾರಿಯಾದ ಭಾವನೆ ಗೋಚರಿಸುತ್ತಿದೆ. ನೆರಳು-ಬೆಳಕಿನ ವಿನ್ಯಾಸದ ಜೊತೆಗೆ ಆಕೃತಿಯ ದುಂಡುತನವನ್ನು ವಿಶಿಷ್ಟವಾಗಿ ರೂಪಿಸಿದ್ದಾರೆ.

**ವಸ್ತು ಚಿತ್ರಣ : ೧೯೭೪**

ನಿತ್ಯ ಬಳಕೆಯ ವಸ್ತುಗಳ ಉಪಯುಕ್ತತೆಯ ಜೊತೆಗೆ ಅವುಗಳನ್ನು ಕಲಾಕೃತಿಯಾಗಿಸುವ ಪ್ರಯತ್ನ ಮಾನವನಲ್ಲಿ ಬಹು ಹಿಂದಿನಿಂದಲೇ ನಡೆದು ಬಂದಿದೆ. ಅವುಗಳನ್ನು ಎದುರಿಗಿಟ್ಟು ಚಿತ್ರಿಸುವ ಪದ್ಧತಿಯಲ್ಲಿ ನೈಜ ಮತ್ತು ಸೃಜನಶೀಲ ಎಂಬುದಾಗಿ ವಿಂಗಡಿಸಬಹುದು. ಪ್ರಸ್ತುತ ಕೃತಿಯಲ್ಲಿ ಪಾಟೀಲರು ಸಹಜವಾಗಿರುವ ವಸ್ತುಗಳನ್ನು ಸೃಜನಶೀಲ ಮನೋಭಾವದಿಂದ ಚಿತ್ರಿಸಿದ್ದಾರೆ. ಜ್ಯಾಮಿತಿಯಾಕಾರದ ಪೆಟ್ಟಿಗೆ ಅದರ ಮೇಲೆ ಹೂವಿನ ಕುಂಡ, ಕುಂಡದೊಳಗೆ ಹೂಗಳು ರಚನೆಯಾಗಿವೆ. ಹೂವಿನ ಕುಂಡವನ್ನು ಗಾಜಿನಂತೆ ಚಿತ್ರಿಸಲಾಗಿದೆ. ಹೂವಿನ ಆಕೃತಿಯು ದುಂಡಗಾಗಿದ್ದು ಹಳದಿ ಎಲೆಗಳನ್ನು ರಚಿಸಿದ್ದಾರೆ. ಹೂದಾನಿಯ ಪಕ್ಕದಲ್ಲಿ ಎರಡು ಸೇಬು ಹಣ್ಣುಗಳಿದ್ದು ಅವುಗಳು ಹಳದಿ ಕೆಂಪು ವರ್ಣಗಳಿಂದ ಪೂರ್ಣಗೊಂಡಿವೆ. ಬಳಸಿರುವ ವರ್ಣ ತಂತ್ರವು ಕ್ಷಿಪ್ರಗತಿಯ ಚಲನೆಯನ್ನು ಪ್ರತಿಬಿಂಬಿಸುತ್ತದೆ. ಚಿತ್ರದ ಸುಮಾರು ಮುಕ್ಕಾಲು ಭಾಗವು ಕಪ್ಪು ವರ್ಣದಿಂದ ಲೇಪಿಸಲ್ಪಟ್ಟಿದ್ದರೂ ಇದರಿಂದ ಕಲಾಕೃತಿಗೆ ಯಾವುದೇ ಭಂಗ ಬರದ ಹಾಗೆ ಚಿತ್ರಿಸಲಾಗಿದೆ. ಪಾಬ್ಲೋ ಪಿಕಾಸೋ ರಚಿಸಿರುವ ಕ್ಯೂಬಿಜಂ ಶೈಲಿಯ ಸ್ಥಿರ ಚಿತ್ರಗಳ ನೆನಪು ಈ ಕಲಾಕೃತಿಯನ್ನು ನೋಡಿದಾಗ ಸಹಜವಾಗಿಯೇ ಬರುತ್ತದೆ.

**ಗೂಳಿಯೊಂದಿಗೆ ಇಬ್ಬರು ಮಹಿಳೆಯರು : ೧೯೭೪**

ಪುರುಷತ್ವ, ಕಾಮ, ಸ್ತ್ರೀಭಾವನೆಗಳನ್ನು ಸಾಂಕೇತಿಕವಾಗಿ ಚಿತ್ರಿಸಿರುವ ಕಲಾಕೃತಿ ಇದಾಗಿದೆ. ಪೆನ್ಸಿಲ್ ಮಾಧ್ಯಮದಿಂದ ರೇಖಾವಿನ್ಯಾಸದಲ್ಲಿ ಈ ಚಿತ್ರ ರಚನೆಯಾಗಿದೆ. ಇಲ್ಲಿ ಗೂಳಿಯೊಂದಿಗೆ ಇಬ್ಬರು ಮಹಿಳೆಯರು ಚಂಚಲತೆಯನ್ನು ಪ್ರದರ್ಶಿಸುತ್ತ ನಿಂತಿದ್ದಾರೆ. ಹೆಣ್ಣಿನ ಕಾಮ ಗುಣ ತುಂಬಾ ವಿಡಂಬನಾತ್ಮಕವಾಗಿ ಇಲ್ಲಿ ಮೂಡಿಬಂದಿದೆ. ಮಧ್ಯದಲ್ಲಿ ಮದವೇರಿದ

ಗೂಳಿ ಹಿಂದೆ ಸ್ತ್ರೀಯೊಬ್ಬಳು ಅಂಗಾತ ಮಲಗಿರುವಳು. ಮುಂಭಾಗದಲ್ಲಿ ಮತ್ತೊರ್ವ ಸ್ತ್ರೀಯು ಹೆಗಲ ಮೇಲೆ ಕೈ ಇಟ್ಟುಕೊಂಡು ನಿಂತಿರುವ ದೃಶ್ಯ ತುಂಬಾ ಚಂಚಲತೆಯನ್ನು ಪ್ರತಿನಿಧಿಸುತ್ತದೆ. ಇಲ್ಲಿ ಸ್ತ್ರೀಯ ಮನೋವೇದನೆ ಹಾಗೂ ಕಾಮ ಗುಣಗಳ ಜೊತೆಗೆ ಪುರುಷತನದ ವಿಕೃತಮನಸ್ಸನ್ನು ಸಾಂಕೇತಿಕವಾಗಿ ತೋರಿಸಲಾಗಿದೆ. ಸಂಯೋಜನೆಯಲ್ಲಿ ಸ್ತ್ರೀಯರಿಬ್ಬರೂ ನಗ್ನವಾಗಿದ್ದು ಪರಸ್ಪರ ಗೂಳಿಯನ್ನು ಅಪ್ಪಿಕೊಂಡಿದ್ದಾರೆ.

**ಹುಂಜ ಮತ್ತು ಮಹಿಳೆ : ೧೯೭೪**

ಹಳ್ಳಿಗಾಡಿನಲ್ಲಿ ಪ್ರೀತಿಯಿಂದ ಪಕ್ಷಿ, ಪ್ರಾಣಿಗಳನ್ನು ಸಾಕುವುದು ಸಾಮಾನ್ಯ. ಅದರಲ್ಲಿ ಹುಂಜ, ಕೋಳಿ, ನಾಯಿ, ದನಕರುಗಳೊಂದಿಗೆ ಕುದುರೆ ಕತ್ತೆ ಮುಂತಾದ ಅನೇಕ ಪ್ರಾಣಿಗಳಿರುತ್ತವೆ. ಸಂಪ್ರದಾಯದ ನೆಲೆಯಲ್ಲಿ ಗ್ರಾಮೀಣ ಪ್ರದೇಶದ ಜನತೆ ಇವುಗಳೊಂದಿಗೆ ತಮ್ಮ ಜೀವನ ಶೈಲಿಯನ್ನು ರೂಪಿಸಿಕೊಂಡಿರುತ್ತಾರೆ. ಬೆಳಗಿನ ಜಾವದಲ್ಲಿ ಸಮಯದಲ್ಲಿ ಪರಿಕಲ್ಪನೆಯನ್ನು ಹುಂಜ ಕೂಗುವುದರಿಂದ ಅರಿತುಕೊಳ್ಳುತ್ತಿದ್ದರು. ಈ ಹಿನ್ನೆಲೆಯಲ್ಲಿ ಹುಂಜ ಮತ್ತು ಮಹಿಳೆ ಎಂಬ ಶೀರ್ಷಿಕೆ ಇರುವ ಈ ಕೃತಿ ಮಹತ್ವದ್ದಾಗಿದೆ. ಈ ಕೃತಿಯಲ್ಲಿ ಸ್ತ್ರೀಯ ಕೈಯಲ್ಲಿರುವ ಹುಂಜವು ಮಹಿಳೆಯು ಅದರ ಮೇಲೆ ಹೊಂದಿರುವ ಪ್ರೇಮಪೂರ್ಣ ಕ್ಷಣಗಳನ್ನು ನೆನಪಿಸುತ್ತದೆ. ಹುಂಜವನ್ನು ವರ್ಣಮಯವಾಗಿ ಕುಂಚದ ಎಳೆತಗಳಿಂದ ಪೂರ್ಣಗೊಳಿಸಲಾಗಿದೆ. ಅದರ ಬಾಯಿ, ಕಾಲುಗಳು, ತಲೆಯ ಮೇಲಿರುವ ಕೆಂಪು ತುರಾಯಿ, ಗರಿಗಳು ಕಲಾತ್ಮಕವಾಗಿವೆ. ಮಹಿಳೆಯು ಧರಿಸಿರುವ ವೇಷ ಭೂಷಣಗಳು ಸಹಿತ ಸುಂದರವಾಗಿ ರಚನೆಯಾಗಿವೆ. ಹಣೆಯ ಮೇಲಿನ ಕೆಂಪು ಕುಂಕುಮವು ಎದ್ದು ಕಾಣುತ್ತಲಿದೆ. ಕೈಯಲ್ಲಿರುವ ಹುಂಜವು ಕೆಂಪು ವರ್ಣದಲ್ಲಿ ಕಂಗೊಳಿಸುತ್ತಿದೆ. ಹಿನ್ನಲೆಯಲ್ಲಿ ರಾತ್ರಿ ಹಗಲುಗಳ ಪ್ರತೀಕದಂತೆ ದಟ್ಟ ಹಾಗೂ ತೆಳು ವರ್ಣಗಳ ಲೇಪನವನ್ನು ಸಾಂಕೇತಿಕವಾಗಿ ಕೊಡಲಾಗಿದೆ.

**ಗೆಳೆತನ : ೧೯೭೪**

ಭಾವನಾತ್ಮಕ ಸಂಬಂಧಗಳನ್ನು ಕಲಾಕೃತಿಯಾಗಿ ರೂಪಿಸುವಾಗ ಪಾಟೀಲರು ವಿಶಿಷ್ಟವಾಗಿ ನಿಲ್ಲುತ್ತಾರೆ.ಅಂತಹ ಭಾವನಾತ್ಮಕ ಸಂಗತಿಗಳಲ್ಲೊಂದಾದ ಗೆಳೆತನವನ್ನು ಚಿತ್ರದಲ್ಲಿ ಪರಿಣಾಮಕಾರಿಯಾಗಿ ಚಿತ್ರಿಸಿದ್ದಾರೆ. ಗೆಳತನ ಶಿರ್ಷಿಕೆಯ ಈ ಕೃತಿ ಮಹತ್ವ ಪೂರ್ಣವಾಗಿದೆ. ಇಬ್ಬರು ಗೆಳೆಯರು ಯಾವುದೋ ವಿಷಯವನ್ನು ಕುರಿತು ಗಂಭೀರವಾಗಿ ಚಿಂತಿಸುತ್ತಿದ್ದಾರೆ. ಒಬ್ಬರು ಇನ್ನೊಬ್ಬರ ನೋವಿನಲ್ಲಿ ಭಾಗಿಯಾಗಿರುವಂತೆ ಕಂಡು ಬರುತ್ತದೆ. ಇಬ್ಬರ ಸ್ನೇಹದ ಸಂಕೇತವಾಗಿ ಎರಡು ಕೋಳಿಗಳನ್ನು ಚಿತ್ರಿಸಲಾಗಿದೆ. ಕೋಳಿಗಳು ಒಂದಕ್ಕೊಂದು ಗುಟುಕು

ಕೊಡುತ್ತಲಿವೆ. ಹಿನ್ನೆಲೆಯಲ್ಲಿ ತಿಳಿಕಂದು ವರ್ಣವಿದೆ. ಎರಡು ಕೋಳಿಗಳ ಪಕ್ಕದಲ್ಲಿ ಕಪ್ಪು ವರ್ಣದ ದೊಡ್ಡ ವೃತ್ತವನ್ನು ರಚಿಸಲಾಗಿದೆ. ಗೆಳೆತನಕ್ಕೆ ಭಂಗ ತರುವ ಸಂಕೇತ ಇದಾಗಿದೆ. ಒಟ್ಟಾರೆ ಚಿತ್ರಕ್ಕೆ ಮೆರಗು ತರುವಂತೆ ದಪ್ಪನಾದ ಕುಂಚದ ಬೀಸುಗಳು, ದಪ್ಪನಾದ ರೇಖೆಗಳು, ವರ್ಣಗಳು, ವೈವಿಧ್ಯಮಯವಾಗಿ ಮೂಡಿಬಂದಿವೆ.

**ರೈತಾಪಿ ಕುಟುಂಬ : ೧೯೭೫**

ಪಾಟೀಲರು ತಮ್ಮ ಕಲಾಕೃತಿಗಳಿಗೆ ಗ್ರಾಮೀಣ ಸಂಸ್ಕೃತಿಯ ಸೊಗಡನ್ನು ತರುವಲ್ಲಿ ನೈಜಭಾವನೆಗಳನ್ನು ಅಭಿವ್ಯಕ್ತಿಗೊಳಿಸಿದ್ದಾರೆ. ರೈತಾಪಿ ಕುಟುಂಬ ಎಂಬ ಶೀರ್ಷಿಕೆಯ ಈ ಕಲಾಕೃತಿಯಲ್ಲಿ ರೈತ ಕುಟುಂಬವನ್ನು ತುಂಬಾ ಪ್ರಭಾವಶಾಲಿಯಾಗಿ ಅನಾವರಣಗೊಳಿಸಿದ್ದಾರೆ. ನಿತ್ಯದ ಕೆಲಸ ಕಾರ್ಯಗಳಲ್ಲಿ ಮಗ್ನರಾದ ರೈತ ಕುಟುಂಬವು ಹಳ್ಳಿಯ ಪರಿಸರವನ್ನು ನೆನಪಿಸುವಂತಿದೆ. ಹಿಂಭಾಗದಲ್ಲಿ ರೈತ ಮಹಿಳೆ ಬುತ್ತಿಯನ್ನು ತಲೆಯ ಮೇಲೆ ಹೊತ್ತುಕೊಂಡು ನಿಂತಿರುವಳು. ಪಕ್ಕದಲ್ಲಿ ಪುರುಷನು ಭುಜದ ಮೇಲೆ ನೇಗಿಲ ಹೊತ್ತಂತೆ ಚಿತ್ರಿಸಲಾಗಿದೆ. ಇಲ್ಲಿ ಬಳಸಿರುವ ವರ್ಣಗಳು ಕೂಡ ಗ್ರಾಮೀಣ ಸಂಪ್ರದಾಯ ಸಂಸ್ಕೃತಿಯ ಹಿನ್ನೆಲೆಯನ್ನು ಬಿಂಬಿಸುತ್ತವೆ. ಹಳದಿ, ಕೆಂಪು, ನೀಲಿ, ಕಪ್ಪು ಮತ್ತು ಬಿಳಿಯನ್ನು ಪ್ರಮುಖವಾಗಿ ಬಳಸಲಾಗಿದೆ. ರೈತನ ಮುಖಕ್ಕೆ ಕಪ್ಪು, ತಲೆಗೆ ಧರಿಸಿದ ವಸ್ತ್ರವು ಕೆಂಪು ವರ್ಣದಿಂದ ಚಿತ್ರಿಸಿದೆ ಹಾಗೂ ಮಹಿಳೆಯು ನೀಲಿ ಹಳದಿ ಬಣ್ಣದ ಸೀರೆ ಧರಿಸಿದ್ದು, ರವಿಕೆಯನ್ನು ದಟ್ಟ ಕಂದು ವರ್ಣದಿಂದ ರಚಿಸಲಾಗಿದೆ. ವರ್ಣ ಸಾಮರಸ್ಯಕ್ಕೆ ಈ ಕೃತಿ ಉತ್ತಮ ಉದಾಹರಣೆಯಾಗಿದೆ.

**ಭಾವಚಿತ್ರ : ೧೯೭೫**

ಮಹಿಳೆಯೊಬ್ಬಳ ಎದೆಮೊಗದ ಭಾವಚಿತ್ರ ಇದಾಗಿದೆ. ಭಾವನಾತ್ಮಕ ಹಿನ್ನೆಲೆಯಿಂದ ಕೂಡಿದ ಈ ಚಿತ್ರದಲ್ಲಿ ಬಳಿಸಿರುವ ವರ್ಣಗಳು ಪ್ರಥಮ ಹಂತದ ವರ್ಣಗಳಂತೆ ಪ್ರಖರವಾಗಿವೆ. ಕೆಂಪು, ಹಳದಿ, ಕಂದು, ವರ್ಣಗಳು ಪ್ರಮುಖವಾಗಿ ಬಳಕೆಯಾಗಿವೆ. ಕುಂಚದ ಚಲನೆಯನ್ನು ವೇಗವಾಗಿ ನಿರ್ವಹಣೆ ಮಾಡಿದ್ದಾರೆ. ಇಲ್ಲಿ ರೂಪದರ್ಶಿಯ ಮುಖದಲ್ಲಿ ತಿಳು ವರ್ಣಗಳ ನಂತರ ದಟ್ಟವಾದ ಕೆಂಪು ಕಪ್ಪು ಮತ್ತು ಹಳದಿ ವರ್ಣಗಳನ್ನು ಸೀಮಿತ ಎಳೆತಗಳಿಂದ ಪೂರೈಸಲಾಗಿದೆ. ರೂಪದರ್ಶಿಯ ಕೂದಲುಗಳಲ್ಲಿ ಲಯವನ್ನು ತರಲು ವಿವಿಧ ಬಣ್ಣಗಳ ಮಿಶ್ರಣದಲ್ಲಿ ರೇಖಾವಿನ್ಯಾಸಗಳನ್ನು ಸೃಷ್ಠಿಸಲಾಗಿದೆ. ತೈಲವರ್ಣದಲ್ಲಿ ಪಾರದರ್ಶಕವಾದ ತಂತ್ರವನ್ನು ಹಿನ್ನೆಲೆಗೆ ಬಳಸಿಕೊಂಡಿರುವುದು ಈ ಭಾವಚಿತ್ರದ ವಿಶೇಷತೆಯಾಗಿದೆ.

**ಮಹಿಳೆಯರು : ೧೯೭೫**

ಈ ಚಿತ್ರದಲ್ಲಿ ರೇಖಾ ಪ್ರಧಾನವಾಗಿರುವ ಒಟ್ಟು ನಾಲ್ಕು ಆಕಾರಗಳಿದ್ದು ಎರಡು ಅಮೂರ್ತವಾಗಿದ್ದರೆ ಇನ್ನೆರಡು ಮೂರ್ತತೆಯನ್ನು ಪಡೆದುಕೊಂಡಿವೆ. ಮೇಲ್ಭಾಗದಲ್ಲಿ ಅಮೂರ್ತದ ಕಲ್ಪನೆಯಲ್ಲಿ ಇಬ್ಬರು ಸ್ತ್ರೀಯರನ್ನು ಸಾಂಕೇತಿಕವಾಗಿ ರೇಖಾ ವಿನ್ಯಾಸದಿಂದ ಚಿತ್ರಿಸಲಾಗಿದೆ. ರೇಖೆಯಲ್ಲಿ ಜೀವಂತಿಕೆ, ವೇಗ ಕಂಡು ಬರುತ್ತವೆ ಅದರ ಪಕ್ಕದಲ್ಲಿರುವ ಇನ್ನೊಂದು ರೇಖಾಚಿತ್ರವು ಮೂರ್ತರೂಪದ ನಗ್ನಾಕಾರದ ಮಹಿಳೆಯದಾಗಿದೆ. ಈ ಚಿತ್ರವು ತುಂಬಾ ಸ್ಪಷ್ಟತೆಯನ್ನು ತೋರಿಸುತ್ತದೆ. ಕುಳಿತಿರುವ ಸ್ತ್ರೀಯು ಯೋಚನಾ ಮಗ್ನಳಾಗಿದ್ದಾಳೆ. ಅದರಂತೆ ಕೆಳಭಾಗದ ಪಟ್ಟಿಕೆಯಲ್ಲಿ ಅಮೂರ್ತ ಸ್ವರೂಪದ ಜಾಮಿತಿಕ ಆಕೃತಿಗಳಿದ್ದು ರೇಖೆಯ ಲಯವು ಚಿತ್ರಕ್ಕೆ ತ್ರಿಮಾನ ಕಲ್ಪನೆಯನ್ನು ನೀಡುವಂತಿದೆ. ನಾಲ್ಕನೆಯ ಪಟ್ಟಿಕೆಯಲ್ಲಿ ನಗ್ನಾಕಾರದ ಮೂರು ಜನ ಸ್ತ್ರೀಯರು ನಿಂತಿರುವರು. ಹಿಂಬದಿಯಲ್ಲಿ ವರ್ಣಗಳಿಂದ ರೇಖೆಗಳನ್ನು ಎಳೆಯಲಾಗಿದೆ. ಹಿನ್ನೆಲೆಯಲ್ಲಿಯೂ ಬೇರೆ ಬೇರೆ ಆಕಾರಗಳನ್ನು ರೇಖಾ ವಿನ್ಯಾಸದಿಂದ ಅಮೂರ್ತ ಕಲ್ಪನೆಯಲ್ಲಿ ಸೃಜಿಸಲಾಗಿದೆ. ಅಲ್ಲಲ್ಲಿ ಬಳಸಿರುವ ವರ್ಣವು ಒಟ್ಟು ಕಲಾಕೃತಿಗೆ ಜೀವಂತಿಕೆಯನ್ನು ತಂದು ಕೊಟ್ಟಿದೆ.

**ಕುದುರೆ ಮತ್ತು ಮಹಿಳೆ : ೧೯೭೫**

ಸಾಂಕೇತಿಕ ಆಕಾರಗಳನ್ನು ಕಲಾಕೃತಿಗಳಲ್ಲಿ ವಿಷಯಕ್ಕೆ ಪೂರಕವಾಗಿ ಬಳಸಿಕೊಳ್ಳುವಲ್ಲಿ ಪಾಟೀಲರು ಸಿದ್ಧಹಸ್ತರಾಗಿದ್ದಾರೆ. ಮಹಿಳೆ, ಗೂಳಿ, ಕುದುರೆ, ಕಾಮ, ಇವುಗಳ ಕುರಿತು ಸಾಂಕೇತಿಕವಾದ ಅನೇಕ ಕೃತಿಗಳನ್ನು ಪಾಟೀಲರು ಬಣ್ಣ ಹಾಗೂ ರೇಖೆಯಲ್ಲಿ ಚಿತ್ರಿಸಿದ್ದಾರೆ. ಪ್ರಸ್ತುತ ಚಿತ್ರವು ರೇಖಾ ಪ್ರಧಾನವಾಗಿ ರಚಿಸಲ್ಪಟ್ಟಿದೆ. ಇಲ್ಲಿ ಮಹಿಳೆ, ಗೂಳಿ, ಕುದುರೆಗಳನ್ನು ಸಂಯೋಜಿಸಿ ಕಾಮ ಸಂಬಂಧಿ ವಿಚಾರಗಳನ್ನು ಸಾಂಕೇತಿಕವಾಗಿ ಬಿಂಬಿಸಲು ಪ್ರಯತ್ನಿಸಲಾಗಿದೆ. ಈ ಚಿತ್ರವು ಪ್ರೇಮಕ್ಕೆ ಕಾಮಕ್ಕೆ ಸಂಬಂಧಿಸಿದ್ದು ಇವೆರಡರ ಮಧ್ಯೆ ನುಸುಳುವ ಆಸೆ ಆಕಾಂಕ್ಷೆಗಳ ಬೇಡಿಕೆಗಳು ಚಿತ್ರರೂಪದಲ್ಲಿ ಇಲ್ಲಿ ಬಿಂಬಿತಗೊಂಡಿವೆ. ಅರೆ ನಗ್ನಾಕಾರದ ಗಂಡು-ಹೆಣ್ಣು ನಿಂತಿರುವುದು, ಎರಡು ಬದಿಯಲ್ಲಿ ಬಲಿಷ್ಠವಾದ ಕುದುರೆಗಳಿವೆ. ಆಕೃತಿಗಳಿಗೆ ಪೆನ್ನಿನ ರೇಖೆಗಳಿಂದ ನೆರಳು ಬೆಳಕಿನ ಛಾಯೆಯನ್ನು ಬಿಂಬಿಸಲಾಗಿದೆ. ಗಂಡು-ಹೆಣ್ಣುಗಳು ಸುತ್ತುವರಿದಂತೆ ರಚಿಸಲಾಗಿದೆ. ರೇಖೆಗಳು ವಿಶಿಷ್ಟವಾದ ಚಲನೆಯ ಪರಿಣಾಮ, ಜೀವಂತಿಕೆ ಮತ್ತು ಅರ್ಥವಂತಿಕೆಗಳನ್ನು ಒಳಗೊಂಡಿವೆ. ಪಾಟೀಲರ ಗಮನಾರ್ಹ ರೇಖಾ ಚಿತ್ರಗಳಲ್ಲಿ ಇದು ಸಹಿತ ಒಂದಾಗಿದೆ. ಪೆನ್ನು ಮತ್ತು ಇಂಕ್‌ಗಳಿಂದ ಚಿತ್ರಿಸಲ್ಪಟ್ಟಿದೆ.

**ತಲೆ ಬುರುಡೆ : ೧೯೭೫**

ಈ ಕೃತಿಯನ್ನು ಡ್ರೈ ಪೇಸ್ಟಲ್‌ನಿಂದ ಚಿತ್ರಿಸಲಾಗಿದೆ. ಆಧುನಿಕ ಸಂದರ್ಭದಲ್ಲಿ ರೈತನಿಗೊದಗಿರುವ ಹಲವು ಬಗೆಯ ಆಪತ್ತುಗಳು, ಅವುಗಳಿಂದುಟಾಗುವ ಭೀಕರ ಪರಿಣಾಮಗಳನ್ನು ಸಾಂಕೇತಿಕವಾಗಿ ಇಲ್ಲಿ ಚಿತ್ರಿಸಲಾಗಿದೆ. ಇದರಲ್ಲಿ ರೈತನ ಕುಟುಂಬದ ತಲೆ ಬುರುಡೆಗಳು ಗಮನ ಸೆಳೆಯುತ್ತವೆ. ಇಬ್ಬರು ರೈತರ ತಲೆ ಬುರುಡೆಗಳ ಮುಂದೆ ಸಹಜ ಆಕಾರದಲ್ಲಿರುವ ಇಬ್ಬರು ರೈತ ದಂಪತಿಗಳನ್ನು ಚಿತ್ರಿಸಲಾಗಿದೆ. ಇವರಿಬ್ಬರ ಮುಖದಲ್ಲಿ ಹತಾಶೆಯಭಾವನೆ ಮಡುಗಟ್ಟಿದೆ. ಪುರುಷನು ತಲೆಗೆ ವಸ್ತ್ರ ಸುತ್ತಿ ಕೊಂಡಂತೆ, ಸ್ತ್ರೀಯು ತಲೆಯ ಮೇಲೆ ಸೀರೆಯ ಸೆರಗನ್ನು ಹಾಕಿಕೊಂಡಿದ್ದಾಳೆ. ಮಹಿಳೆಯ ಮುಖವನ್ನು ಚಪ್ಪಟೆ ಆಕಾರದಲ್ಲಿ ರೇಖೆಯಿಂದ ಹಾಗೂ ಪುರುಷನ ಮುಖ ದುಂಡಗೆ ಚಿತ್ರಿಸಲಾಗಿದೆ. ಇವುಗಳಿಗೆ ಬಣ್ಣದ ಪೆನ್ಸಿಲ್‌ನಿಂದ ವರ್ಣ ವಿನ್ಯಾಸಗೊಳಿಸಲಾಗಿದೆ. ಪಾಟೀಲರು ಗ್ರಾಮೀಣ ಭಾಗದ ಜನರಾಗಿರುವುದರಿಂದ ಅಲ್ಲಿನ ಸಂಸ್ಕೃತಿ ಸಂಪ್ರದಾಯವನ್ನು ಅಭಿವ್ಯಕ್ತಿಗೊಳಿಸುವಲ್ಲಿ ಪ್ರಬುದ್ಧತೆ ತೋರುತ್ತಾರೆ.

**ಅಮೂರ್ತ ಶೈಲಿಯ ನಿಸರ್ಗಚಿತ್ರ : ೧೯೭೫**

ಪಾಟೀಲರು ಕೆಲವು ಕಲಾಕೃತಿಗಳನ್ನು ಅಮೂರ್ತ ಶೈಲಿಯಲ್ಲಿ ಚಿತ್ರಿಸಿದ್ದು ಅವುಗಳಲ್ಲಿ ಹೆಚ್ಚಿನವು ನಿಸರ್ಗ ಚಿತ್ರಗಳಾಗಿವೆ. ಅದರಲ್ಲೂ ಹಳ್ಳಿಯ ದೃಶ್ಯಗಳನ್ನು ಹೆಚ್ಚಾಗಿ ಈ ಶೈಲಿಯಲ್ಲಿ ಚಿತ್ರಿಸಿದ್ದಾರೆ. ಈ ಕಲಾಕೃತಿಯಲ್ಲಿ ಪಟ್ಟಣ ಒಂದರ ದೃಶ್ಯವನ್ನು ಅಮೂರ್ತಕಲ್ಪನೆಯಲ್ಲಿ ಚಿತ್ರಿಸಿದ್ದಾರೆ. ದೊಡ್ಡ ದೊಡ್ಡ ಮಹಲುಗಳು, ಎತ್ತರದ ಗೋಪುರಗಳು ಹಳದಿ ಬಿಳಿಯ ದೀಪಗಳು, ರಸ್ತೆಗಳು, ಗಿಡಮರಗಳು, ವಿದ್ಯುತ್ ಕಂಬಗಳು ಮುಂತಾದವುಗಳನ್ನು ಅಮೂರ್ತ ಶೈಲಿಯಲ್ಲಿ ರಚನೆ ಮಾಡಲಾಗಿದೆ. ಚಿತ್ರದ ಹಿನ್ನೆಲೆಯಲ್ಲಿ ದಟ್ಟ ನೀಲಿವರ್ಣ ಲೇಪನವಾಗಿದ್ದು ಅಲ್ಲಲ್ಲಿ ಹಳದಿ, ಕೆಂಪು, ಕಪ್ಪು, ಹಸಿರು ಬಣ್ಣಗಳನ್ನು ಆಕಾರಗಳಿಗೆ ಬಳಸಲಾಗಿದೆ. ಇಡೀ ಚಿತ್ರದಲ್ಲಿ ಜ್ಯಾಮಿತಿಕ ಆಕಾರಗಳು ತುಂಬಿಕೊಂಡಿವೆ. ಅಮೂರ್ತ ಕಲ್ಪನೆಯಲ್ಲಿರುವ ಈ ಪಟ್ಟಣದ ನಿಸರ್ಗ ಚಿತ್ರಣವು ಬೆಳಕಿನ ಕಿರಣಗಳ ಪ್ರತಿಫಲದಂತೆ ಕಂಡು ಬರುತ್ತದೆ.

**ನಿಸರ್ಗ : ೧೯೭೫**

ಬಣ್ಣದ ಸ್ವಚ್ಛಂದ ಎರಚಾಟದಿಂದ ಕೆಲವು ಅಮೂರ್ತ ಆಕಾರಗಳನ್ನು ಸೃಷ್ಟಿಸಿ ನಿಸರ್ಗ ಎಂಬ ಶೀರ್ಷಿಕೆಯನ್ನು ಈ ಚಿತ್ರಕ್ಕೆ ನೀಡಲಾಗಿದ. ಇಲ್ಲಿ ಯಾವುದೇ ಆಕಾರಗಳನ್ನು ಉದ್ದೇಶ ಪೂರ್ವಕವಾಗಿ ರಚನೆ ಮಾಡಿರದೇ ಬಣ್ಣದ ಸಹಜವಾದ ಮಿಶ್ರಣ ಹಾಗೂ ಹರಿವಿನಿಂದ

ಉಂಟಾದ ಆಕಾರಗಳಿವೆ. ಜೊತೆಗೆ ಕೆಲವು ಕಡೆಗೆ ಕುಂಚದ ದೊಡ್ಡ ದೊಡ್ಡ ಎಳೆತಗಳಿಂದ ಬಣ್ಣದ ಮೈವಳಿಕೆಯನ್ನು ಸೃಷ್ಟಿಸಲಾಗಿದೆ. ಅನುದ್ದೇಶಪೂರ್ವಕವಾಗಿ ರಚನೆಗೊಂಡ ಕೆಲವು ಅಮೂರ್ತ ಆಕಾರಗಳಿಗೆ ಪಕ್ಷಿಗಳ ಆಕಾರವನ್ನು ಕೊಟ್ಟಿದ್ದಾರೆ. ಬಣ್ಣಗಳು ಸೌಮ್ಯವಾಗಿದ್ದು ಇಡೀ ಚಿತ್ರ ಮುಂಜಾನೆಯ ಮಂಜಿನ ವಾತಾವರಣವನ್ನು ನೆನಪಿಸುತ್ತದೆ.

**ಮಹಿಳೆ : ೧೯೭೬**

ಗ್ರಾಮೀಣ ಮಹಿಳೆಯನ್ನು ಚಿತ್ರಿಸುವಾಗ ಪಾಟೀಲರು ಅವರ ವೇಷಭೂಷಣ ಸಂಸ್ಕೃತಿ ಪರಂಪರೆಗಳನ್ನು ಗಮನದಲ್ಲಿಟ್ಟು ಚಿತ್ರಿಸುತ್ತಾರೆ. ಪ್ರಸ್ತುತ ಚಿತ್ರದಲ್ಲಿ ಹಳ್ಳಿಯ ಮಹಿಳೆಯೊಬ್ಬಳು ಹುಲ್ಲು ಹಾಸಿನ ಮೇಲೆ ಕುಳಿತು ಯೋಚಿಸುತ್ತಿರುವಂತೆ ಚಿತ್ರಿಸಲಾಗಿದೆ. ಅವಳ ಮನಸ್ಸು ಶಾಂತತೆಯನ್ನು ಪ್ರಕೃತಿ ಮಾತೆಯ ಮಡಿಲಲ್ಲಿ ಪಡೆದುಕೊಳ್ಳಲು ಬಯಸುತ್ತಿರುವಂತೆ ಭಾಸವಾಗುತ್ತದೆ. ಆನಂದ ಮತ್ತು ಮಧುರ ಭಾವನೆಗಳು ಸ್ತ್ರೀ ಜೀವನದಲ್ಲಿ ಬಾಲ್ಯ ಮತ್ತು ಯೌವ್ವನದ ದಿನಗಳಲ್ಲಿ ಹೆಚ್ಚಾಗಿರುತ್ತದೆ. ಈ ಸಂತೋಷಪಡುವ ಕ್ಷಣಗಳು ಅಷ್ಟೇ ಮಧುರ. ಸ್ತ್ರೀಯೊಬ್ಬಳು ಏಕಾಂತ ಬಯಸುತ್ತಾ ಸುಂದರವಾದ ತನ್ನ ಬಾಲ್ಯದ ನೆನಪುಗಳನ್ನು ಸವಿಯುತ್ತಿದ್ದಾಳೆ. ಈ ಚಿತ್ರದಲ್ಲಿ ಪ್ರಕೃತಿಯನ್ನು ಸುತ್ತಲೂ ಚಿತ್ರಿಸುವ ಮೂಲಕ ಕಲಾಕೃತಿಯ ಅಂದವನ್ನು ಹೆಚ್ಚಿಸಲಾಗಿದೆ. ಹುಲ್ಲುಗಾವಲಿನ ಬಯಲಿನಲ್ಲಿ ಮಹಿಳೆ ಕುಳಿತಿದ್ದು ಸುತ್ತಲೂ ಪರಿಸರದ ಸಂಕೇತಕ್ಕೆ ಚಿಕ್ಕ ಚಿಕ್ಕ ಸಸ್ಯಗಳನ್ನು ರೇಖಾ ವಿನ್ಯಾಸದಿಂದ ರೂಪಿಸಲಾಗಿದೆ. ಸ್ತ್ರೀಯನ್ನು ತುಂಬಾ ಕ್ಷಿಪ್ರಗತಿಯಲ್ಲಿ ಸ್ಪಷ್ಟ ರೇಖೆಗಳಿಂದ ಚಿತ್ರಿಸಲಾಗಿದೆ. ಗ್ರಾಮೀಣ ಸ್ತ್ರೀಯ ಮೈ ಮೇಲೆ ಧರಿಸಿರುವ ವಸ್ತುಗಳು ತುಂಬಾ ಕಲಾತ್ಮಕವಾಗಿದ್ದು ಜನಪದ ಸಂಸ್ಕೃತಿಯನ್ನು ಪ್ರತಿಬಿಂಬಿಸುತ್ತವೆ.

**ಪ್ರಕೃತಿ ಮತ್ತು ಸ್ತ್ರೀ : ೧೯೭೬**

ವಿಷಯಗಳನ್ನು ಸಾಂಕೇತಿಕವಾಗಿ ಗೂಢಾರ್ಥದಲ್ಲಿ ಹೇಳುವಾಗ ಪಾಟೀಲರ ಮನೋಭೂಮಿಕೆ ವಿಶಾಲಗೊಳ್ಳುತ್ತದೆ ಎಂಬುದಕ್ಕೆ ಈ ಚಿತ್ರ ಉದಾಹರಣೆಯಂತಿದೆ. ಪ್ರಕೃತಿ ಮತ್ತು ಸ್ತ್ರೀ ಫಲವಂತಿಕೆಯ ಸಂಕೇತವಾಗಿರುವುದರಿಂದ ಸ್ತ್ರೀಯನ್ನು ಪ್ರಕೃತಿಗೆ ಹೋಲಿಸಿ ಇಲ್ಲಿ ಪಾಟೀಲರು ಚಿತ್ರಿಸಿದ್ದಾರೆ. ಸೃಷ್ಟಿ ಕ್ರಿಯೆಗೆ ಪ್ರಕೃತಿಯ ಕೊಡುಗೆ ಯಾವ ರೀತಿಯಲ್ಲಿ ನಡೆಯುತ್ತದೆ. ಮತ್ತು ಮನುಷ್ಯ ಕುಲದ ಸೃಷ್ಟಿಗೆ ಸ್ತ್ರೀ ಹೇಗೆ ಪ್ರಕೃತಿಯಂತೆ ಪಾತ್ರವಹಿಸುತ್ತಾಳೆ ಎಂಬಂತಹ ಸಂಗತಿಗಳನ್ನು ಸಾಂಕೇತಿಕವಾಗಿ ಇಲ್ಲಿ ಚಿತ್ರಿಸಲಾಗಿದೆ. ಪ್ರಕೃತಿಯ ಸುಂದರತೆ ಮತ್ತು ಸ್ತ್ರೀಯ ಸುಂದರತೆಗಳು ಆಕರ್ಷಣೆಯ ಮೂಲವಾಗಿದ್ದು, ಸೃಷ್ಟಿ ಕ್ರಿಯೆಗೆ ಪ್ರೇರಣೆ ಒದಗಿಸುವ ಶಕ್ತಿಯಾಗಿವೆ ಎಂಬುದನ್ನು ಸೂಚ್ಯವಾಗಿ ಹೇಳಲು ಇಲ್ಲಿ ಪ್ರಯತ್ನಿಸಲಾಗಿದೆ. ಅದಕ್ಕೆ ಪೂರಕವಾಗಿರುವಂತೆಯೇ

ಬಣ್ಣಗಳನ್ನು ಸಹಿತ ಪಾಟೀಲರ ಕಲಾಜ್ಞಾನವನ್ನು ತಿಳಿಸುತ್ತದೆ. ವರ್ಣಗಳು ಪಾರದರ್ಶಕವಾಗಿದ್ದು ಸೌಮ್ಯ ಅನುಭವ ಕೊಡುತ್ತವೆ. ಸ್ತ್ರೀಯ ನೈಜ ವರ್ಣ ಭಾವನೆಗೆ ಪೂರಕವಾಗಿದೆ. ಕುಂಚದ ಬೀಸುಗಳು ವಿಶಿಷ್ಠ ರೀತಿಯ ಮೈವಳಿಕೆಯನ್ನು ಕಲಾಕೃತಿಯಲ್ಲಿ ಉಂಟುಮಾಡಿವೆ. ಚಿತ್ರದ ಹಿನ್ನೆಲೆಯಲ್ಲಿ ನೀಲಿ ವರ್ಣದ ಕುಂಚದ ಎಳೆತಗಳನ್ನು ನಿರೂಪಿಸುವ ಮೂಲಕ ವಾತಾವರಣದ ಯಥಾದರ್ಶನ ಸಿದ್ಧಾಂತವನ್ನು ನಿರೂಪಿಸಲಾಗಿದೆ.

**ಬೀಸಣಿಕೆ : ೧೯೭೬**

ಗ್ರಾಮೀಣ ಪರಿಸರದಲ್ಲಿ ಕಲಾತ್ಮಕ ಬೀಸಣಿಕೆಗಳು ಇಂದಿನ ದಿನಗಳಲ್ಲಿ ಬಹುಮಟ್ಟಿಗೆ ನಶಿಸುತ್ತಲಿವೆ. ಮರೆಯಾಗಿ ಹೋಗುತ್ತಿರುವ ಇಂತಹ ಕಲಾತ್ಮಕ ಬೀಸಣಿಕೆಯನ್ನು ಪಾಟೀಲರು ಚಿತ್ರಕಲಾಕೃತಿಯ ಮೂಲಕ ಮುಂದಿನ ಪೀಳಿಗೆಗೆ ಕಾಯ್ದಿಡುವ ಪ್ರಯತ್ನ ಮಾಡಿದ್ದಾರೆ. ಬೀಸಣಿಕೆಯು ಒಂದು ಕಾಲದಲ್ಲಿ ತನ್ನದೇ ಆದ ರೀತಿಯಲ್ಲಿ ಮಹತ್ವ ಪಡೆದಿತ್ತು. ನಮ್ಮ ಸಂಸ್ಕೃತಿಯ ಪ್ರತಿಬಿಂಬದ ವಸ್ತುವಾಗಿ ಇಂದು ಈ ವಸ್ತು ಪಳೆಯುಳಿಕೆಯಾಗಿದೆ. ಆಧುನಿಕ ಫ್ಯಾನಗಳು ಸಾಕಷ್ಟು ಗಾಳಿಯನ್ನು ಹರಡುತ್ತಿದ್ದರೂ ಬೀಸಣಿಕೆಯ ಪ್ರಕೃತಿದತ್ತವಾದ ತಂಪಾದ ಗಾಳಿ ನೇರವಾಗಿ ನಮ್ಮ ಅಂತರಂಗಕ್ಕೆ ತಲುಪುತ್ತದೆ. ಇಲ್ಲಿ ಚಿತ್ರಿಸಲಾಗಿರುವ ಬೀಸಣಿಕೆಯ ಆಕೃತಿಯು ದುಂಡಾಗಿದ್ದು ಆಕೃತಿಯ ಹಿಂದೆ ಹಿಡಿಕೆ, ಮಧ್ಯದಲ್ಲಿ ವಿವಿಧ ವರ್ಣಗಳ ನಕ್ಷೆಗಳು ಹಾಗೂ ರೇಖೆಗಳಿಂದ ವಿವಿಧ ಚಿತ್ತಾರ ರಚಿಸಲಾಗಿದೆ. ಬಿಂದುಗಳು ವಿವಿಧ ವಕ್ರಾಕೃತಿಯ ವಿನ್ಯಾಸಗಳು ಚಿತ್ರಕ್ಕೆ ಮೆರಗನ್ನು ತಂದಿವೆ.

**ಗ್ರಾಮೀಣ ಮಹಿಳೆ : ೧೯೭೭**

ಪಾಟೀಲರು ಗ್ರಾಮೀಣ ಮಹಿಳೆಯರ ಚಿತ್ರಗಳನ್ನು ಹಲವಾರು ದೃಷ್ಟಿಕೋನಗಳಿಂದ ರಚಿಸಿದ್ದು ಅಂತಹ ಚಿತ್ರಗಳಲ್ಲಿ ಇದೂ ಒಂದಾಗಿದೆ. ಗ್ರಾಮಾಂತರ ಹಳ್ಳಿಯ ಮಹಿಳೆಯೊಬ್ಬಳು ಗ್ರಾಮೀಣ ಸಂಸ್ಕೃತಿಯ ಸೊಗಡನ್ನು ಬಿಂಬಿಸುವ ವೇಷ ಭೂಷಣಗಳನ್ನು ಧರಿಸಿಕೊಂಡಿರುವಂತೆ ಚಿತ್ರಿಸಲಾಗಿದೆ. ಚಿತ್ರದ ಮಧ್ಯದಲ್ಲಿ ಮಹಿಳೆಯ ಆಕೃತಿ ಇದ್ದು, ಗ್ರಾಮೀಣ ಸಂಪ್ರದಾಯದ ಉಡುಪುಗಳು, ಹಣೆಯ ಮೇಲೆ ತಿಲಕ, ಕಿವಿಯಲ್ಲಿ ಓಲೆ, ಹೂವಿನ ದಳದ ಹಾಗೆ ಗುಲಾಬಿ ವರ್ಣದ ತುಟಿಗಳು ಚಿತ್ರಕ್ಕೆ ಹೆಚ್ಚಿನ ಮೆರಗು ತಂದಿವೆ. ಸ್ತ್ರೀಯ ಕೇಶಾಲಂಕಾರವು ಸುಂದರವಾಗಿದೆ. ಹಿನ್ನೆಲೆಯಲ್ಲಿ ಬಿಳಿ, ನೀಲಿಗಳಿದ್ದು ಚುಕ್ಕೆಯ ರಂಗವಲ್ಲಿ ಇದೆ. ಇದಕ್ಕೆ ಹೊಂದುವಂತೆ ಅರ್ಧಗೋಲಾಕೃತಿಯ ವಿನ್ಯಾಸವನ್ನು ತಲೆಯ ಮೇಲೆ ರಚಿಸುವ ಮೂಲಕ ಕಲಾಕೃತಿಯ ಮೆರಗನ್ನು ದ್ವಿಗುಣಗೊಳಿಸಿದ್ದಾರೆ.

**ತಾಯಿ ಮಗು : ೧೯೭೭**

ಆಧುನಿಕತೆಯ ಭರಾಟೆಯಲ್ಲಿ ನಮ್ಮ ಜನಪದ ಸಂಪ್ರದಾಯವು ಅಳಿದು ಹೋಗುತ್ತಿದೆ. ತಾಯಿ ಮಗು ಶೀರ್ಷಿಕೆಯ ಈ ಕಲಾಕೃತಿ ಅಂತಹ ಜನಪದ ಸಂಪ್ರದಾಯವನ್ನು ಪ್ರತಿಬಿಂಬಿಸುವಲ್ಲಿ ಮಹತ್ವದ್ದಾಗಿದೆ. ತೈಲವರ್ಣದಿಂದ ಇದನ್ನು ರಚಿಸಲಾಗಿದೆ. ಇಲ್ಲಿ ರಚನೆಯಾದ ಕಲಾಕೃತಿಯಲ್ಲಿ  ತಾಯಿ ಮತ್ತು ಮಗು ಸುಂದರವಾದ ಹಳ್ಳಿಯ ಪರಿಸರದ ಸಾಂಪ್ರದಾಯಿಕ ಮನೆಯಲ್ಲಿರುವಂತೆ ಚಿತ್ರಿಸಲಾಗಿದೆ. ಶೃಂಗಾರ ಕಾವ್ಯವೇ ಹೊರ ಹೊಮ್ಮಿದಂತೆ ಭಾಸವಾಗುತ್ತಲಿದೆ. ಹಬ್ಬ ಬಂತೆಂದರೆ ಮನೆಯ ಅಲಂಕಾರವು ಹಳ್ಳಿ ಪರಿಸರದಲ್ಲಿ ವಿಶಿಷ್ಟತೆಯನ್ನು ಪಡೆದುಕೊಳ್ಳುತ್ತದೆ. ಪ್ರಸ್ತುತ ಕಲಾಕೃತಿಯಲ್ಲಿ ಗೋವಿನಮನೆಗೆ ಸಗಣೆ, ಬಿಳಿಯ ಸುಣ್ಣ ಕೆಂಪು ಜೇಡಿಮಣ್ಣುಗಳನ್ನು ಬಳಿದು ಅಲಂಕರಿಸಲಾಗಿದೆ. ಈ ಮನೆಯಲ್ಲಿ ತನ್ನ ಮಗುವಿನೊಂದಿಗೆ ಮಹಿಳೆ ನಿಂತಿರುವಳು. ನೀಲಿ ವರ್ಣದ ಸೀರೆಯನ್ನುಟ್ಟ ಸ್ತ್ರೀಯ ಮೈಬಣ್ಣವು ಕಂದು ವರ್ಣ ಸಂಯೋಜನೆಯಿಂದ ಪೂರ್ಣಗೊಳಿಸಲಾಗಿದೆ. ಮಹಿಳೆಯು ಉಟ್ಟಿರುವ ಸೀರೆ ಉತ್ತರ ಕರ್ನಾಟಕದ ಗ್ರಾಮೀಣ ಪ್ರತೀಕವಾಗಿದೆ ಪಕ್ಕದಲ್ಲಿ ನಿಂತಿರುವ ಮಗುವು ಬಿಳಿಯ ಅಂಗಿಯನ್ನು ತೊಟ್ಟು ನಿಂತಿದೆ. ಸ್ತ್ರೀಯ ಕೈಯಲ್ಲಿ ಬುಟ್ಟಿಯಂತಹ ವಸ್ತು ಇರುವುದು ಕಂಡು ಬರುತ್ತದೆ. ಮನೆಗೆ ಸಗಣಿ, ಕೆಮ್ಮಣ್ಣು ಮತ್ತು ಸುಣ್ಣ ಲೇಪನಕ್ಕೆ ತಿಳಿಹಳದಿ, ಬಿಳಿ, ತಿಳಿಹಸಿರು, ವರ್ಣಗಳನ್ನು ಉಪಯೋಗಿಸಿ ನೈಜತೆ ತರಲಾಗಿದೆ. ಉತ್ತರ ಕರ್ನಾಟಕದ ಹಳ್ಳಿಗಳಲ್ಲಿನ ಮನೆಗಳ ವಿನ್ಯಾಸಕ್ಕೆ ಇದೊಂದು ಉತ್ತಮ ಉದಾಹರಣೆಯಾಗಿದೆ.

**ನಗ್ನ ಸ್ತ್ರೀ : ೧೯೭೭**

ನಗ್ನ ಆಕಾರದ ಸ್ತ್ರೀಯರ ಚಿತ್ರಗಳನ್ನು ಪಾಟೀಲರು ಹಲವಾರು ರಚಿಸಿದ್ದರೂ ಅವುಗಳಲ್ಲಿ ರತಿಭಾವಕ್ಕೆ ಆಸ್ಪದವಿಲ್ಲದಂತೆ ಎಚ್ಚರಿಕೆ ವಹಿಸಿದ್ದಾರೆ. ಇಲ್ಲಿ ಸ್ತ್ರೀಯೊಬ್ಬಳು ಸ್ನಾನವಾದ ಬಳಿಕ ತನ್ನ ವಸ್ತ್ರಗಳನ್ನು ಒಣಗಿಸುವ ಕ್ರಿಯೆಯಲ್ಲಿ ತೊಡಗಿದ್ದಾಳೆ. ಸ್ತ್ರೀಯು ಮಂಚದ ಮೇಲೆ ಕುಳಿತಿರುವ ಭಂಗಿಯಲ್ಲಿ ಚಿತ್ರಿಸಲಾಗಿದೆ. ಇಲ್ಲಿ ರೇಖೆಗಳು ಪ್ರಧಾನವಾಗಿದ್ದರೂ ಭಾವನೆಯ ಉದ್ದೀಪನದಲ್ಲಿ ಹೆಚ್ಚುಗಾರಿಕೆ ಕಂಡು ಬರುತ್ತದೆ. ರೇಖೆಗಳು ನೀಳವಾಗಿ ಅಂದವಾಗಿ ಮೂಡಿಬಂದಿವೆ. ಅದೇ ತಾನೆ ಸ್ನಾನ ಮುಗಿಸಿಕೊಂಡು ಬಂದಿರುವ ಸ್ತ್ರೀಯ ಮೈಮೇಲೆ ಕೂದಲುಗಳು ಹರಡಿಕೊಂಡಿದ್ದು ಅವುಗಳಿಂದ ನೀರಿನ ಹನಿಗಳು ತೊಟ್ಟಿಕ್ಕುತ್ತಿವೆ. ಕೆಂಪು ಕಪ್ಪು ಹಳದಿ ಹಸಿರು ವರ್ಣಗಳು ಪ್ರಮುಖವಾಗಿ ಬಳಕೆಗೊಂಡಿವೆ. ಹಿನ್ನೆಲೆಯಲ್ಲಿ ಅನೇಕ ವಸ್ತುಗಳನ್ನು ಪೂರಕವಾಗಿ ಚಿತ್ರಿಸಲಾಗಿದೆ.

**ಯೋಚನಾ ಮಗ್ನ ಮಹಿಳೆ : ೧೯೭೭**

ಇದೊಂದು ಸೃಜನಶೀಲ ರೇಖಾಚಿತ್ರ ಅಸ್ಪಷ್ಟ ಆಕಾರಗಳಿಗೆ ಜೀವ ತುಂಬುವ ನಿಟ್ಟಿನಲ್ಲಿ ಆಕೃತಿಗೆ ಮೆರಗನ್ನು ತಂದುಕೊಡಲಾಗಿದೆ. ಈ ಚಿತ್ರದಲ್ಲಿ ಮಹಿಳೆಯೊಬ್ಬಳು ಯೋಚನಾ ಮಗ್ನಳಾಗಿ ಕುಳಿತಿರುವಂತೆ ಚಿತ್ರಿಸಲಾಗಿದೆ. ಆಕೃತಿಗಳಲ್ಲಿ ಸ್ಪಷ್ಟತೆ ಇರದಿದ್ದರೂ ಭಾವಲಹರಿಗೆ ಯಾವುದೇ ಧಕ್ಕೆ ಬಂದಿಲ್ಲ. ಆಕೃತಿಯ ಮಧ್ಯದಲ್ಲಿ ಜ್ಯಾಮಿತಿಯ ವಿನ್ಯಾಸಗಳಿವೆ. ಹಿಂಬದಿಯ ಆಯಾತಾಕಾರದ ಪಟ್ಟಿಕೆಯಲ್ಲಿ ನಕ್ಷೆಗಳು, ಎಡಬದಿಯಲ್ಲಿ ಎರಡು ಪಕ್ಷಿಗಳು ಕುಳಿತಂತಿವೆ. ಇವುಗಳನ್ನು ಸಾಂಕೇತಿಕವಾಗಿ ಬಳಸಿಕೊಳ್ಳಲಾಗಿದೆ.

**ಭಾವಚಿತ್ರ : ೧೯೭೮**

ಗ್ರಾಮೀಣ ವ್ಯಕ್ತಿಯ ಭಾವಚಿತ್ರ ಇದಾಗಿದೆ. ಈ ಭಾವ ಚಿತ್ರದ ರಚನಾತಂತ್ರವು ಆಕಾಡೆಮಿಕ್ ನೆಲೆಯಲ್ಲಿರುವುದು. ಮುಖದ ದುಂಡತನಕ್ಕೆ ತಕ್ಕಂತೆ ಬೀಸುಗಳನ್ನು ಎಳೆಯಲಾಗಿದೆ. ವ್ಯಕ್ತಿಯ ಮುಖದಲ್ಲಿ ಕೆಂಪು ವರ್ಣದ ಹೊಳಪು, ಹಸನ್ಮುಖತೆಯನ್ನು ತಂದುಕೊಟ್ಟಿರುವುದು ಕಲಾವಿದರ ಪರಿಶ್ರಮವನ್ನು ತೋರಿಸುತ್ತದೆ. ತಲೆಯ ರುಮಾಲು, ಮೈಮೇಲಿನ ನಿಲುವಂಗಿ ದಟ್ಟವರ್ಣದಲ್ಲಿ ಚಿತ್ರಣಗೊಂಡಿವೆ. ಹಿನ್ನಲೆ ವರ್ಣವು ಭಾವಕ್ಕೆ ಸ್ಫೂರ್ತಿಕೊಡುವಂತೆ ಪಾರದರ್ಶಕವಾಗಿ ಲೇಪನಗೊಂಡಿದೆ. ಅಂಗಾಂಗಳು ಮತ್ತು ನೆರಳು ಬೆಳಕಿನ ಪರಿಣಾಮದಿಂದ ರಚಿಸಲಾಗಿದೆ.

**ಬಾಲಕಿಯ ಭಾವಚಿತ್ರ : ೧೯೭೮**

ವಯಸ್ಕರು ಮತ್ತು ವೃದ್ಧರ ಭಾವಚಿತ್ರಗಳನ್ನು ರಚಿಸುವದಕ್ಕಿಂತ ಮಕ್ಕಳು ಮತ್ತು ಬಾಲ್ಯದ ವ್ಯಕ್ತಿಗಳ ಚಿತ್ರರಚಿಸುವುದು ಕಠಿಣವಾಗಿದೆ. ಪ್ರಸ್ತುತ ಕೃತಿಯಲ್ಲಿ ಕುಂಚದ ಬಿರುಸಿನ ಎಳೆತಗಳಿಂದ ಅತ್ಯಂತ ಕ್ಷಿಪ್ರಗತಿಯಲ್ಲಿ ಬಾಲಕಿಯ ಚಿತ್ರವನ್ನು ಪಾಟೀಲರು ರಚಿಸಿದ್ದಾರೆ. ಈ ಭಾವಚಿತ್ರದಲ್ಲಿ ಬಾಲಕಿಯ ನೈಜ ಚಹರೆ ಗೌಣವಾಗಿ ವಿರೂಪದೆಡೆಗೆ ಸಾಗಿದೆ. ಈ ಭಾವಚಿತ್ರದಲ್ಲಿ ಪ್ರಯೋಗಶೀಲತೆಯನ್ನು ಪಾಟೀಲರು ವಿಭಿನ್ನ ರೀತಿಯ ತಂತ್ರಗಾರಿಕೆಯಿಂದ ತೋರಿಸಿದ್ದಾರೆ. ದಟ್ಟವಾದ ಕುಂಚದ ಎಳೆತಗಳು, ನೆರಳು ಬೆಳಕಿನ ವಿನ್ಯಾಸಗಳು ಪರಿಣಾಮಕಾರಿಯಾಗಿ ಮೂಡಿಬಂದಿವೆ. ನೀಲಿ ಹಾಗೂ ಕೆಂಪು ವರ್ಣದಲ್ಲಿ ದೊಡ್ಡ ಕುಂಚದ ಎಳೆತಗಳನ್ನು ಹಿನ್ನೆಲೆಯಲ್ಲಿ ರಚಿಸಲಾಗಿದೆ ವರ್ಣಗಳ ಸಂಯೋಜನೆಯನ್ನು ಕೆಲವು ಕಡೆ ಪಾರದರ್ಶಕವಾಗಿ ಮತ್ತು ಕೆಲವು ಕಡೆ ಅಪಾರದರ್ಶಕವಾಗಿ ರಚಿಸಲಾಗಿದೆ. ಮುಖದಲ್ಲಿ ಮಿತವಾದ ಹಾಗೂ ಸೌಮ್ಯವಾದ ವರ್ಣಗಳನ್ನು ಈ ಭಾವಚಿತ್ರದಲ್ಲಿ ಬಳಸಲಾಗಿದೆ.

**ಹಳ್ಳಿಯ ದಂಪತಿಗಳು : ೧೯೭೮**

ಗ್ರಾಮೀಣ ವೇಷಭೂಷಣ ಧರಿಸಿದ ದಂಪತಿಗಳಿಬ್ಬರು ಈ ಚಿತ್ರದಲ್ಲಿದ್ದಾರೆ. ಒಂದು ಹಳ್ಳಿಯ ಮನೆಯ ಮುಂದೆ ದಂಪತಿಗಳು ತಮ್ಮ ಸಾಂಪ್ರದಾಯಿಕ ಉಡುಪು ಧರಿಸಿ ತಲೆಯ ಮೇಲೆ ಕೈ ಇಟ್ಟುಕೊಂಡಿರುವಂತಿದೆ. ದಂಪತಿಗಳಿಬ್ಬರು ತಮ್ಮ ಸಾಕು ಪ್ರಾಣಿಗಳಾದ ಆಡುಗಳು ಕಳೆದು ಹೋದಾಗ ಹುಡುಕುತ್ತ ಅವುಗಳನ್ನು ಕೂಗಿ ಕರೆಯುವ ದೃಶ್ಯವಿದೆ. ಕಲಾಕೃತಿಗೆ ಬಳಸಿರುವ ವರ್ಣಗಳು ಸೀಮಿತ ವರ್ಣಗಳಾದರೂ, ಅವುಗಳ ಹಿಂದಿರುವ ಅರ್ಥವಂತಿಕೆ ದೊಡ್ಡದು. ತಮ್ಮ ಪ್ರೀತಿಯ ಪ್ರಾಣಿಗಳು ತಮ್ಮಿಂದ ಮರೆಯಾದಾಗ ಅವುಗಳನ್ನು ದುಃಖದಿಂದ ಕೂಗಿ ಕರೆಯುವ ದೃಶ್ಯ ಪರಿಣಾಮಕಾರಿಯಾಗಿದೆ. ಮನೆಯ ಬಾಗಿಲ ಮುಂದೆ ನಿಂತು ಏರು ಧ್ವನಿಯಲ್ಲಿ ಕರೆಯುತ್ತಿರುವಂತೆ ಭಾಸವಾಗುತ್ತದೆ.

**ಆಧುನಿಕ ಶೈಲಿಯ ಭಾವಚಿತ್ರ : ೧೯೭೯**

ಈ ಹಿಂದಿನ ಭಾವಚಿತ್ರಗಳಿಗಿಂತ ಈ ಭಾವಚಿತ್ರವು ವಿಭಿನ್ನವಾಗಿ ರಚನೆಯಾಗಿದೆ. ಇಲ್ಲಿಯೂ ಕೂಡ ಕುಂಚದ ಬೀಸುಗಳು ಕ್ಷಿಪ್ರವಾಗಿ ರಚಿಸಲ್ಪಟ್ಟಿವೆ. ಹಿನ್ನೆಲೆಯಲ್ಲಿ ಅಮೂರ್ತ ಚಿತ್ರದಂತೆ ಬಣ್ಣಗಳದಪ್ಪ ಲೇಪನವಾಗಿದೆ. ಮುನ್ನೆಲೆಯಲ್ಲಿ ಹಸಿರು ಮತ್ತು ನೀಲಿ ದಟ್ಟ ಲೇಪನವನ್ನು ಕೊಡಲಾಗಿದೆ. ರೂಪದರ್ಶಿಯ ಕನ್ನಡಕವು ಪಾರದರ್ಶಕ ವರ್ಣ ಲೇಪನ ಕ್ರಮ ಪ್ರಕಟಿಸುತ್ತದೆ. ವಿವರಗಳಿಗೆ ಆದ್ಯತೆ ಇಲ್ಲದ ಈ ಭಾವಚಿತ್ರದಲ್ಲಿ ಕುಂಚದ ಬೀಸುಗಳೇ ರೂಪದರ್ಶಿಯ ಮುಖದ ದುಂಡತನವನ್ನು ತೋರ್ಪಡಿಸುತ್ತವೆ.

**ಕ್ಯೂಬಿಜಂ ಶೈಲಿಯ ಮಹಿಳೆಯ ಭಾವಚಿತ್ರ : ೧೯೭೯**

ಕೆಲವು ಭಾವಚಿತ್ರಗಳನ್ನು ಪಾಟೀಲರು ಆಧುನಿಕ ಶೈಲಿಯಲ್ಲಿ ರಚಿಸಿದ್ದಾರೆ. ಈ ಚಿತ್ರವು  ಕ್ಯೂಬಿಜಂ ಶೈಲಿ ಪ್ರತಿಬಿಂಬಿಸುವುದು. ಮಹಿಳೆಯ ಒಂದೇ ಚಿತ್ರದಲ್ಲಿ ಮೂರು ಕಡೆಯಿಂದ ನೋಡಿದಂತಹ ಅನುಭವ ಬರುವ ಹಾಗೆ ಚಿತ್ರಿಸಲಾಗಿದೆ. ಎದುರುಭಾಗ, ಎಡ ಹಾಗೂ ಬಲಭಾಗದ ನೋಟಗಳಲ್ಲಿರುವಂತೆ ಮುಖ, ಕೈಕಾಲುಗಳು ಹಾಗೂ ದೇಹ ವಿನ್ಯಾಸವನ್ನು ರೂಪಿಸಲಾಗಿದೆ. ಅದಕ್ಕಾಗಿಯೇ ಎರಡಕ್ಕಿಂತ ಹೆಚ್ಚಿನ ಕೈಕಾಲುಗಳನ್ನು ಚಿತ್ರಿಸಲಾಗಿದೆ. ಸಾಮಾನ್ಯವಾಗಿ ಈರೀತಿಯ ಚಿತ್ರಣವು ಕ್ಯೂಬಿಜಂ ಶೈಲಿಯಲ್ಲಿ ಕಂಡು ಬರುತ್ತದೆ. ಈ ಕೃತಿಯಲ್ಲಿ ಸ್ತ್ರೀಯೊಬ್ಬಳು ಸೊಂಟದ ಮೇಲೆ ಕೈ ಇಟ್ಟುಕೊಂಡು ನಿಂತಿದ್ದಾಳೆ. ಹಾರಾಡುತ್ತಿರುವ ಕೇಶರಾಶಿಯನ್ನು ಮತ್ತೊಂದು ಕೈಯಿಂದ ಹಿಂದೆ ತಳ್ಳುತ್ತಿದ್ದಾಳೆ. ಬಣ್ಣಗಳು ಸಹಿತ ಪ್ರಖರವಾಗಿದ್ದು ಕ್ಯೂಬಿಸ್ಟ ಶೈಲಿಗೆ ಪೂರಕವಾಗಿವೆ. ಮಹಿಳೆಯು ಬದಿಗೆ ಹೊರಳಿ ವಯ್ಯಾರದಿಂದ ನಿಂತಿರುವುದು

ಆಕರ್ಷಕವಾಗಿದೆ. ಅವಳ ಸೌಂದರ್ಯವು ನೋಡುಗರನ್ನು ಕನಸಿನ ಲೋಕಕ್ಕೆ ಕರೆದೊಯ್ಯುತ್ತದೆ. ಶೈಲಿ ಕೃತವಾಗಿರುವ ಮಹಿಳೆಯ ಸೊಂಟವು ನಯ ನಾಜೂಕಿನಿಂದ ಕೂಡಿದ್ದು ತಳುಕು ಬಳುಕಿನ ವೈಯಾರವನ್ನು ಪ್ರದರ್ಶಿಸುವಂತಿದೆ.

**ಬದುಕಿನ ಕರಾಳತೆ : ೧೯೭೯**

ಮಾನವನ ಮನಸ್ಸು ಸುಖ ಮತ್ತು ದುಖಃಗಳಿಗೆ ಸದಾ ಸ್ಪಂಧಿಸುತ್ತಿರುತ್ತದೆ. ಸಂತೋಷವಾದಾಗ ಅರಳುವುದು. ನೋವುಗಳಿಗೆ ಮುದುಡುವುದರ ಮೂಲಕ ಪ್ರತಿಕ್ರಿಯಿಸುತ್ತದೆ. ಕಲಾವಿದರ ಕೃತಿಗಳಿಗೆ ಇಂತಹ ಅನೇಕ ಸಂಗತಿಗಳು ವಸ್ತುವಾಗುತ್ತಲಿವೆ. ಈ ಕೃತಿಯಲ್ಲಿ ಪಾಟೀಲರು ಮನುಷ್ಯ ಬದುಕಿನಲ್ಲಿ ಸಂಬಂಧಿಕರು ಸತ್ತಾಗ ಉಂಟಾಗುವ ನೊವು, ವೇದನೆಗಳನ್ನು ಪರಿಣಾಮಕಾರಿಯಾಗಿ ಬಿಂಬಿಸಿದ್ದಾರೆ. ಕರಾಳ ಛಾಯೆ ಎಂದು ತಲೆ ಬರಹವನ್ನು ಇದಕ್ಕೆ ನೀಡಿದ್ದು ಭಾವನೆಗಳಿಗೆ ಅನುಸಾರವಾಗಿರುವ ಆಕಾರಗಳನ್ನು ಬಳಸಲಾಗಿದೆ. ಈ ಕೃತಿಯಲ್ಲಿ ಮೃತದೇಹ ಬಿದ್ದುಕೊಂಡಿದ್ದು, ಅದನ್ನು ಹದ್ದು ಕಾಗೆಗಳು ಕಿತ್ತು ತಿನ್ನುತ್ತಿವೆ. ಪಕ್ಕದಲ್ಲಿ ಸ್ತ್ರೀಯೊಬ್ಬಳು ರೋಧಿಸುತ್ತ ಕುಳಿತಿದ್ದಾಳೆ. ಸ್ಮಶಾನದ ರಹಸ್ಯ ಭಯಾನಕವಾಗಿ ಗೋಚರಿಸುತ್ತಲಿದೆ. ಮಹಿಳೆಯ ಮುಖದ ಮೇಲಿರುವ ರೇಖೆಗಳು ಅವಳ ದುಖಃ ಹಾಗೂ ಭಯದ ಪ್ರತಿಬಿಂಬದಂತಿವೆ. ಮೃತದೇಹದ ಮೇಲೆ ಹಾರಾಡುವ ಹದ್ದು ಕಾಗೆಗಳು ಮಾಂಸ ಕಿತ್ತು ತಿನ್ನುವ ದೃಸ್ಯ ಕರಾಳತನಕ್ಕೆ ಸಂಕೇತವಾಗಿದೆ. ಇಂಡಿಯನ್ ಇಂಕ್ ನಿಂದ ರಚಿಸಲ್ಪಟ್ಟಿದೆ.

**ಗಣೇಶ : ೧೯೭೯**

ಭಾರತೀಯ ಕಲಾಕ್ಷೇತ್ರದಲ್ಲಿ ಗಣೇಶನ ಮೇಲೆ ಹಲವರು ಸೃಜನಶೀಲ ಕೃತಿ ರಚಿಸಿದ್ದಾರೆ. ಅದರಂತೆ ಪಾಟೀಲರು ಸಹಿತ ಗಣೇಶನ ಬಗ್ಗೆ ಕಲಾಕೃತಿ ರಚನೆ ಮಾಡಿದ್ದಾರೆ. ಇಲ್ಲಿ ಗಣಪತಿಯನ್ನು ದೇವರಾಗಿ ನೋಡದೇ ಮನುಷ್ಯ ಸಹಜ ಸ್ವಭಾವ ಮೂಡಿ ಬರುವಂತೆ ಚಿತ್ರಿಸಲಾಗಿದೆ. ಅತಿರಂಜಿತವಾದ ಆಭರಣಗಳು ಇಲ್ಲಿಲ್ಲ ದೈವತ್ವದ ನಿರೂಪಣೆ ಕಂಡು ಬರುವುದಿಲ್ಲ. ಗಂಭೀರವಾಗಿ ಕುಳಿತಿರುವ ಗಣಪತಿಯ ಮುಖದಲ್ಲಿ ಶಾಂತತೆ ಮೈದುಂಬಿದಂತಿದೆ.

ಚರ್ಮದ ಹೋಲಿಕೆಯಂತೆ ಮುಖಕ್ಕೆ ಹಳದಿ ವರ್ಣದಿಂದ ನೆರಳು ಬೆಳಕು ಸೃಷ್ಠಿಸಲಾಗಿದೆ. ಇದು ಚಿತ್ರದ ಅಂದವನ್ನು ಇನ್ನಷ್ಟು ಹೆಚ್ಚಿಸುವಂತೆ ಕಂಗೊಳಿಸುತ್ತದೆ. ಯಾವುದೇ ಆಭರಣಗಳಿಲ್ಲದೆ ಮಾನವನಂತೆ ನಿರಾಭರಣಗೊಳಿಸಲಾಗಿದೆ. ಉಟ್ಟಿರುವ ಪಂಚೆಯು ತಿಳಿ ಬಿಳಿ ಬಣ್ಣದಿಂದ ಕುಂಚದ ಬೀಸುಗಳಿಂದ ರಚಿಸಲ್ಪಟ್ಟಿದೆ. ಹಿಂಬದಿಯಲ್ಲಿ ದಟ್ಟ ಬಿಳಿ ವರ್ಣದ

ಲಿಂಗವನ್ನು ರಚಿಸಿದ್ದಾರೆ. ಹಿಂದಿರುವ ನೀಲಿ ವರ್ಣದ ಪಟ್ಟಿಕೆಯಲ್ಲಿ ಬುದ್ದನ ಪ್ರತಿಮೆಯಂತೆ ನಿಂತಿರುವ ವಿಗ್ರಹಗಳಿದ್ದು ಚಿತ್ರಕ್ಕೆ ಮೆರಗು ತಂದಿದೆ. ನೋಡಲು ಮಾನವಾಕೃತಿಗೆ ಗಣೇಶನ ಮುಖವಾಡ ಹಾಕಿದಂತೆ ಕಂಡು ಬರುತ್ತದೆ.

**ನೃತ್ಯ : ೧೯೭೯**

ನೃತ್ಯವು ಒಂದು ಮನೋರಂಜನೆ ಎಂದು ಪರಿಗಣಿಸುವ ಆಧುನಿಕ ಜನಾಂಗವು ಅದನ್ನು ಮೋಜಿಗೆ ಹೋಲಿಸಿದಂತೆ ಕಂಡು ಬರುತ್ತದೆ. ನೃತ್ಯಕ್ಕೆ ಒಂದು ಸಂಪ್ರದಾಯಿಕ ಹಿನ್ನೆಲೆ ಇದೆ. ನೃತ್ಯದ ಮೊದಲ ರೂಪ ನಟರಾಜನಲ್ಲಿ ಆರೋಪಿಸಲಾಗುತ್ತದೆ. ನೃತ್ಯದ ಸಂಕೇತವಾಗಿ ಬಳಸುವುದುಂಟು. ಭಾರತದ ಮೊದಲ ಹದಿನೆಂಟು ಕೈಗಳುಳ್ಳ ನಟರಾಜನೆಂದರೆ ಬಾದಾಮಿಯಲ್ಲಿದೆ. ನಾಡಿನ ಕಲಾವಿದರಲ್ಲಿ ನೃತ್ಯಕ್ಕೆ ಪ್ರಾರ್ಥನಾ ಮನೋಭಾವವಿದೆ. ಈ ಚಿತ್ರದಲ್ಲಿ ಪಾಟೀಲರು ನೃತ್ಯದ ಭಂಗಿಯನ್ನು ಚಿತ್ರಿಸಿದ್ದಾರೆ.

ಆಧುನಿಕ ಶೈಲಿಯಲ್ಲಿ ಪಾರಂಪರಿಕ ನೃತ್ಯಭಂಗಿಯನ್ನು ಚಿತ್ರಿಸಲಾಗಿದೆ. ಕಲಾವಿದರು ಅಸ್ಪಷ್ಟ ಆಕೃತಿಗಳ ಮುಖಾಂತರ ನೃತ್ಯವನ್ನು ಕಲಾಕೃತಿಯನ್ನಾಗಿಸಿದ್ದಾರೆ. ಚಿತ್ರದ ವರ್ಣವು ಡ್ರೈ ಪೇಸ್ಟಲ್‌ನಿಂದ ರಚಿಸಿದ್ದು, ಆಕೃತಿಗಳು ಪರಸ್ಪರ ನರ್ತಿಸುವಂತಿವೆ. ಆಕೃತಿಗಳಿಗೆ ನೇರ ಪ್ರಥಮ ದರ್ಜೆಯ ವರ್ಣ ಲೇಪನವಿದ್ದು, ಅತ್ಯಂತ ಚಿಕ್ಕ ಚಿಕ್ಕ ಸ್ತ್ರೀಚಿತ್ರಗಳು ಒಂದಕ್ಕೊಂದು ವಿರುದ್ಧವಾಗಿ ನರ್ತಿಸುವಂತಿವೆ.

**ರಾತ್ರಿ : ೧೯೭೯**

ರಾತ್ರಿ ಎಂಬ ಶಿರ್ಷಿಕೆಯಲ್ಲಿ ಆ ಸಮಯದಲ್ಲಿ ನಡೆಯುವ ನಿಗೂಢ ಮತ್ತು ಮರೆಮಾಚಿರುವ ಘಟನೆಗಳನ್ನು ಕಲಾಕೃತಿಯ ಮೂಲಕ ಪ್ರತಿಬಿಂಬಿಸಿದ್ದಾರೆ. ಪ್ರಸ್ತುತ ಚಿತ್ರದಲ್ಲಿ ದಂಪತಿಗಳಿಬ್ಬರು ಅರೆನಗ್ನವಾಗಿ ಮನೆಯೊಳಗೆ ಜೀವ ಸೃಷ್ಟಿಯಾಗುವ ನಿಟ್ಟಿನಲ್ಲಿ ತಮ್ಮನ್ನು ತಾವು ಮರೆತು ತಲ್ಲೀನರಾಗಿರುವ ದೃಶ್ಯವಿದೆ. ಆಕೃತಿಯ ಭಾವನೆಗೆ ತಕ್ಕಂತೆ "ರಾತ್ರಿ" ಎಂಬ ಶೀರ್ಷಿಕೆಯನ್ನು ಕೊಟ್ಟಿರುವುದು ಸೂಕ್ತವಾಗಿದೆ. ಕಾಮಭಾವನೆಯಿಂದ ಪ್ರೇರಿತರಾದ ಗಂಡು ಹೆಣ್ಣುಗಳಿಬ್ಬರು ಪರಸ್ಪರ ತಮ್ಮ ತೃಷೆಯನ್ನು ತೀರಿಸಿಕೊಳ್ಳುವ ನಿಟ್ಟಿನಲ್ಲಿ ಕ್ರಿಯೆಯಲ್ಲಿ ತೊಡಗಿದ್ದಾರೆ. ದಂಪತಿಗಳ ಆಕೃತಿಗಳು ತುಂಬಾ ಸ್ಪಷ್ಟವಾಗಿ ಮೂಡಿ ಬಂದಿದ್ದು ಸ್ತ್ರೀರೂಪಕ್ಕೆ ಹಳದಿ, ಪುರುಷನಿಗೆ ಕೆಂಪು ವರ್ಣವನ್ನು ಲೇಪಿಸಿದ್ದಾರೆ. ಇದು ಡ್ರೈಪೇಸ್ಟಲ್‌ದಿಂದ ರಚಿಸಿದ ಕೃತಿಯಾಗಿದೆ. ಚಿತ್ರದ ಹಿನ್ನಲೆಯಲ್ಲಿ ನೀಲಿ ಮತ್ತು ಬಿಳಿ ವರ್ಣಗಳಿಂದ ಚಿತ್ರದ ಭಾವಕ್ಕೆ ಕುಂದುಂಟಾಗದಂತೆ ಕುಂಚದ ಎಳೆತಗಳನ್ನು ದಪ್ಪನಾಗಿ ಮೂಡಿಸಲಾಗಿದೆ.

**ಕಾರ್ಮಿಕ ಮಹಿಳೆ : ೧೯೭೯**

ಈ ಕಲಾಕೃತಿಯು ಪ್ಲೆವುಡ್ ಮೇಲೆ ರೇಖಾ ಹಿನ್ನೆಲೆಯಿಂದ ರಚಿಸಿ ನಂತರ ಅದನ್ನು ಚಿಕ್ಕದೊಂದು ದೀಪದಿಂದ ಆಕೃತಿಯಲ್ಲಿ ಬೇಕಾದ ರೀತಿಯಲ್ಲಿ ನೆರಳು ಬೆಳಕು ಬರುವಂತೆ ಸುಟ್ಟು ಕಲಾಕೃತಿಯನ್ನು ರಚಿಸಲಾಗಿದೆ. ಈ ಕೃತಿಯಲ್ಲಿ ಮಹಿಳೆಯೊಬ್ಬಳು ತಲೆಯ ಮೇಲೆ ಬುಟ್ಟಿಯನ್ನು ಹೊತ್ತು ತರುವಲ್ಲಿ ನಿರತಳಾಗಿದ್ದಾಳೆ. ಗ್ರಾಮೀಣ ಸಂಪ್ರದಾಯದ ಕೂಲಿ ಕಾರ್ಮಿಕ ಮಹಿಳೆಯ ಹಿಂಬದಿಯಲ್ಲಿ ಇಟ್ಟಿಗೆಯಲ್ಲಿ ರಚಿಸಿದ ಮನೆಯನ್ನು ಚಿತ್ರಿಸಲಾಗಿದೆ. ಇದು ಜ್ಯಾಮಿತಿಕ ಆಕೃತಿಯಲ್ಲಿ ರಚನೆಗೊಂಡಿದೆ. ಸುಟ್ಟಿರುವ ಭಾಗವು ಕಪ್ಪಗಾಗಿದ್ದು ರೇಖೆಗಳು ನೀಳವಾಗಿ ಕಂಡು ಬರುತ್ತದೆ. ಹೀಗೆ ಸಂಪ್ರದಾಯಕ ಶೈಲಿಯ ಈ ಚಿತ್ರದ ರಚನಾ ಕೌಶಲ್ಯವು ತುಂಬಾ ಅಮೋಘವಾದ ಅನುಭವವನ್ನು ನೀಡುತ್ತದೆ. ಮರ ಮಾಧ್ಯಮದ ಮೇಲೆ ರೇಖಾವಿನ್ಯಾಸದಿಂದ ಆಕಾರವನ್ನು ಮಾಡಿಸಿ ನಂತರ ಬೇಕಾದ ಸ್ಥಳಗಳಲ್ಲಿ ದೀಪದಿಂದ ಸುಡುವ ಮೂಲಕ ಕಲಾಕೃತಿ ಈ ವಿಧಾನಕ್ಕೆ ವುಡ್ ಬರ್ನಿಂಗ್ ಕಲಾಕೃತಿ ಎಂಬುದಾಗಿ ಕರೆಯಲಾಗುತ್ತದೆ.

**ಶಕ್ತಿ : ೧೯೭೯**

ವುಡ್ ಬರ್ನಿಂಗ್ ವಿಧಾನದಲ್ಲಿ ಈ ಕೃತಿ ರಚಿಸಲ್ಪಟ್ಟಿದೆ. ಇದನ್ನು ಶಕ್ತಿ ಎಂದು ಹೆಸರಿಸಲಾಗಿದೆ. ಈ ಚಿತ್ರದಲ್ಲಿ ನಮ್ಮ ಜಾಣಪದ ಶಿಲ್ಪಗಳಾದ ದುರ್ಗವ್ವ ದ್ಯಾಮವ್ವ ದೇವತೆಗಳ ಆಕಾರದಿಂದ ಪ್ರಭಾವಿತರಾಗಿ ಕಲಾವಿದ ತನ್ನ ಚಿತ್ರದಲ್ಲಿ ಬಳಸಿಕೊಂಡು ವಿಶಿಷ್ಟರೂಪ ಕೊಟ್ಟಿರುವುದು ಕಂಡು ಬರುತ್ತದೆ. ನಾವು ಹೆಣ್ಣು ದೇವತೆಗಳನ್ನು ಶಕ್ತಿ ದೇವತೆಗಳೆಂದು ಕರೆಯುತ್ತೇವೆ. ಜಾನಪದ ಶಿಲ್ಪಕ್ಕೆ ಹೊಸ ರೂಪವನ್ನು ಕೊಟ್ಟು ಕಲಾವಿದ ಇದನ್ನು ಚಿತ್ರಿಸಿದ್ದಾನೆ. ಜನಪದ ಶಿಲ್ಪಗಳಲ್ಲಿರುವಂತೆ ಅಗಲವಾದ ಮುಖ ದೊಡ್ಡ ದೊಡ್ಡ ಕಣ್ಣುಗಳು, ಉದ್ದವಾಗಿರುವ ಎರಡು ಗೆರೆ ಎಳೆದು ಮುಖವನ್ನು ಸಿತ್ರಿಸಿದ್ದು, ನಗ್ನ ಆಕಾರವಿದ್ದರೂ ಕೆಳ ಉಡುಪನ್ನು ತೋರಿಸಿದಂತೆ ಚಿತ್ರಿಸಲಾಗಿದೆ. ಸಾಮಾನ್ಯವಾಗಿ ದೇವತೆಗಳಿಗೆ ಇರುವಂತೆ ಹಸ್ತ ಮುದ್ರೆಯನ್ನು ಚಿತ್ರಿಸಲಾಗಿದೆ. ತಲೆಯ ಕಿರೀಟ, ಕಿವಿಯ ಓಲೆ, ಕೊರಳ ಹಾರವನ್ನು ಸರಳವಾಗಿ ತೋರಿಸಲಾಗಿದೆ. ಒಂದು ರೀತಿಯಲ್ಲಿ ಕಪ್ಪು ವರ್ಣದ ಪೇಪರ ಮೇಲೆ ತಿಳಿ ವರ್ಣದಿಂದ ಚಿತ್ರಿಸಿರುವಂತೆ ಕಾಣುವ ಈ ಚಿತ್ರ ಮೂಲತಃ ಪ್ಲೈವುಡ್‌ನ್ನು ಹೀಟರನಿಂದ ಸುಡುವ ತಂತ್ರವಾಗಿದೆ. ಇದರ ಮೇಲಿರುವ ಗೆರೆಗಳು ಉದ್ದೇಶಪೂರ್ವಕವಾಗಿ ರಜಿಸಿರದೇ ಕಟ್ಟಿಗೆಯ ಮೇಲಿರುವ ಮೈವಳಿಕೆಗಳು ಸುಟ್ಟಾಗ ಆ ರೀತಿಯಾಗಿ ಗೆರೆಗಳ ರೂಪದಲ್ಲಿ ಕಾಣಿಸಿಕೊಂಡು ಕಲಾಕೃತಿಯ ಅಂದವನ್ನು ಹೆಚ್ಚಿಸಿವೆ.

**ಪುರುಷನ ಭಾವಚಿತ್ರ : ೧೯೮೦**

ಇದೊಂದು ಪಾಟೀಲರ ಪ್ರಯೋಗಶೀಲ ಭಾವಚಿತ್ರಗಳಲ್ಲೊಂದಾಗಿದೆ. ಕೇವಲ ಕುಂಚದ ರಭಸದ ಬೀಸುಗಳಿಂದ ರಚನೆಗೊಂಡ ಭಾವಚಿತ್ರವಾಗಿದ್ದು ನೆರಳು ಬೆಳಕಿನ ಪರಿಣಾಮವು ಮುಖದಲ್ಲೆಲ್ಲ ಚಲಿಸಿದಂತಿದೆ. ರೂಪದರ್ಶಿಯ ಭಾವನೆಗೆ ಹೊಂದಿಕೊಳ್ಳುವಂತೆ ವರ್ಣ ಸಂಯೋಜನೆ ಕಂಡು ಬರುತ್ತದೆ. ಇಲ್ಲಿ ವ್ಯಕ್ತಿಯೊಬ್ಬನನ್ನು ಭಾವನಾತ್ಮಕವಾಗಿ ಆತನ ವೇಷಭೂಷಣಗಳೊಂದಿಗೆ ಚಿತ್ರಿಸಲಾಗಿದೆ.

ವ್ಯಕ್ತಿಯ ಮೈಬಣ್ಣವು ನೈಜವಾಗಿ ರೂಪಿಸಲಾಗಿದೆ. ರೂಪದರ್ಶಿಯ ಮುಖದಲ್ಲಿ ಚಹರೆಯನ್ನು ಸ್ಪಷ್ಟಪಡಿಸುವ ಕಲಾತ್ಮಕ ರೇಖೆಗಳನ್ನು ಎಳೆಯಲಾಗಿದೆ. ಉಡುಪುಗಳ ರಚನೆಯಲ್ಲಿಯೂ ನೈಜತೆ ಇದೆ ಹೀಗಾಗಿ ಇದು ಕಲಾವಿದ್ಯಾರ್ಥಿಗೆ ಭಾವಚಿತ್ರದ ಕುರಿತು ಉತ್ತಮ ಮಾರ್ಗದರ್ಶನ ನೀಡಬಲ್ಲ ಕೃತಿಯಾಗಿದೆ. ಚಿತ್ರಕ್ಕೆ ಹೊಂದಿಕೊಂಡಂತೆ ಹಿನ್ನೆಲೆಯಾಗಿ ಕಪ್ಪು, ಕೆಂಪು ಹಾಗೂ ನೀಲಿ ವರ್ಣಗಳ ಸಂಯೋಜನೆಯೊಂದಿಗೆ ಬಿಳವರ್ಣದ ಎಳೆತಗಳು ಪರಿಣಾಮಕಾರಿಯಾಗಿ ಮೂಡಿ ಬಂದಿವೆ.

**ಗೆಳತಿಯರು : ೧೯೮೦**

ಈ ಚಿತ್ರದಲ್ಲಿ ಸ್ತ್ರೀ ಸ್ವಾತಂತ್ರ್ಯದ ಪ್ರಾಮುಖ್ಯತೆಯನ್ನು ಬಿಂಬಿಸುವ ಪ್ರಯತ್ನ ಅಡಗಿದೆ. ಇಬ್ಬರು ಆಪ್ತ ಸ್ನೇಹಿತೆಯರು ನಗ್ನ ರೂಪದಲ್ಲಿದ್ದು ಯಾವುದೋ ಒಂದು ಕೆಲಸದಲ್ಲಿ ತೊಡಗಿದಂತಿದೆ. ಸ್ತ್ರೀಯರಿಬ್ಬರ ದೇಹ ವರ್ಣಗಳು ವಿರುದ್ಧವಾಗಿದ್ದು ಹಳದಿ ಮತ್ತು ಕಂದು ವರ್ಣ ಲೇಪನದಿಂದ ಕೂಡಿವೆ. ಹಳ್ಳಿಯ ಸ್ತ್ರೀಯರಂತೆ ಇವರು ಕಂಡು ಬರುತ್ತಲಿದ್ದಾರೆ. ಚಿತ್ರದ ಹಿನ್ನೆಲೆಯಲ್ಲಿ ಗ್ರಾಮೀಣ ಭಾಗದ ಮಡಿಕೆಗಳನ್ನು ಹಿಂಬದಿಗೆ ಕಡಗೋಲನ್ನು ಚಿತ್ರಿಸಲಾಗಿದೆ. ಹಸಿರು ಮತ್ತು ಬಿಳಿಯ ವರ್ಣದ ಲೇಪನವಿದೆ. ಚಿತ್ರದ ರೇಖೆಗಳು ತುಂಬಾ ಸ್ಪಷ್ಟವಾಗಿ ಮೂಡಿಬಂದಿವೆ. ಕಂದು ವರ್ಣದ ಸ್ತ್ರೀಗೆ ತಲೆ ಇಲ್ಲದಂತೆ ಚಿತ್ರಿಸಲಾಗಿದೆ. ಆದರೂ ಭಾವಕ್ಕೆ ಯಾವ ಭಂಗವಿಲ್ಲದಂತೆ ವಿನ್ಯಾಸಕ್ಕೆ ಮಹತ್ವವನ್ನು ತಂದುಕೊಟ್ಟಿದ್ದಾರೆ.

**ಮಹಿಳೆ : ೧೯೮೦**

ರೇಖಾವಿನ್ಯಾಸದಲ್ಲಿ ರಚಿಸಲ್ಪಟ್ಟ ಈ ಚಿತ್ರದಲ್ಲಿ ಮಹಿಳೆ ಯೋಚನಾ ಮಗ್ನಳಾಗಿರುವಂತೆ ಚಿತ್ರಿಸಲಾಗಿದೆ. ಬಣ್ಣದ ಲೇಪನವಿರದ ಈ ಕೃತಿಯು ಪಾರದರ್ಶಕ ನೆಲೆಯಲ್ಲಿ ಪರಿಣಾಮಕಾರಿಯಾಗಿ ಮೂಡಿಬಂದಿದೆ. ಕಾಗದದ ಮೇಲೆ ನೇರವಾಗಿ ಸ್ಕೆಚ್‌ಪೆನ್‌ನಿಂದ ಚಿತ್ರಿಸಲ್ಪಟ್ಟಿದೆ. ಗ್ರಾಮೀಣ ಸಂಪ್ರದಾಯಿಕ ಉಡುಪಿನಲ್ಲಿರುವ ಮಹಿಳೆಯನ್ನು ಅಲಂಕಾರಿಕವಾಗಿ

ಚಿತ್ರಿಸಲಾಗಿದೆ. ತಲೆಯ ಮೇಲೆ ಬುಟ್ಟಿ ಹೊತ್ತುಕೊಂಡಿದ್ದು ಸುಸಂಸ್ಕೃತ ಮನೆತನದ ಮಹಿಳೆಯಂತೆ ಹಣೆಯ ಮೇಲೆ ದೊಡ್ಡದಾದ ತಿಲಕವನ್ನಿಟ್ಟಿದ್ದಾಳೆ. ರೇಖೆಗಳಿಗೆ ಅತ್ಯಂತ ವೇಗವನ್ನು ಕೊಟ್ಟಿರುವುದು ಈ ಕೃತಿಯಲ್ಲಿ ಕಂಡು ಬರುತ್ತದೆ.

**ಯೋಚನೆಯಲ್ಲಿ ಕುಳಿತ ಮಹಿಳೆ :** ೧೯೮೦

ಮಹಿಳೆಯೊಬ್ಬಳು ಯಾವುದೋ ಯೋಚನೆಯಲ್ಲಿ ಮಗ್ನಳಾಗಿರುವಂತೆ ಚಿತ್ರಿಸಲಾಗಿದೆ. ರೇಖಾ ವಿನ್ಯಾಸದಿಂದ ಚಿತ್ರಿಸಿದ ಈ ಕೃತಿ ಕಲಾವಿದನ ಸೃಜನಶೀಲತೆಗೆ ಸಾಕ್ಷಿಯಾಗಿದೆ. ಕುಳಿತಿರುವ ಮಹಿಳೆಯ ಚಿಂತನೆಗೆ ಪೂರಕವಾಗಿ ಹಿಂಭಾಗದಲ್ಲಿ ಸಂಖ್ಯೆಗಳು ಮತ್ತು ಸಂಕೇತಗಳನ್ನು ರೂಪಿಸಲಾಗಿದೆ. ಸ್ತ್ರೀಯು ಯಾವುದೋ ಒಂದು ಮನೋವೇದನೆಯಲ್ಲಿ ತಾನು ಮೈ ಮರೆತಿರುವಂತಿದೆ. ಮುಂದಿನ ಕಾಲಮಾನದ ಬಗ್ಗೆ ಚಿಂತಿತಳಾದ ಮಹಿಳೆಯ ಮುಖದಲ್ಲಿ ಭಾವನೆಗಳು ಮಡುಗಟ್ಟಿವೆ. ರೇಖೆಗಳ ಸೌಂದರ್ಯವನ್ನು ತುಂಬಾ ಸ್ಪಷ್ಟವಾಗಿ ಬಿಂಬಿಸಲಾಗಿದೆ. ರವಿಕೆಯು ಪಾರದರ್ಶಕದಂತೆ ಕಂಡು ಬರುತ್ತಿದೆ. ಸ್ತ್ರೀಯ ಭಾವನೆಗಳು ತರಂಗಗಳಂತೆ ಹರಡಿಕೊಂಡು ಚಲನೆಯನ್ನು ತಂದುಕೊಟ್ಟಿವೆ. ಭಾವನಾತ್ಮಕ ಚಿತ್ರಗಳ ಪ್ರಬುದ್ಧ ವಿನ್ಯಾಸವನ್ನು ಪ್ರಸ್ತುತ ಚಿತ್ರವು ಪ್ರತಿಬಿಂಬಿಸುತ್ತದೆ.

**ಸಂಗಾತಿಯ ನೆನಪು :** ೧೯೮೦

ಮಾನವನು ಒಂದಲ್ಲ ಒಂದು ರೀತಿಯಲ್ಲಿ ಜೊತೆಗಾರರ ನೆನಪಿನಲ್ಲಿ ಬಾಳುತ್ತಾನೆ. ಯೌವ್ವನದಲ್ಲಿ ಹೆಂಡತಿ, ಮುಪ್ಪಿನಲ್ಲಿ ಮಗನ ಆಸರೆ ಬಯಸುವ ಗಂಡು ಅವರಿಲ್ಲದಾಗ ಅವರ ಉಂಟು ಮಾಡಿದ ಮಧುರ ಭಾವನೆಗಳು, ಸರಸ ವಿರಸಗಳನ್ನು ನೆನಪಿಸಿಕೊಳ್ಳುತ್ತಲಿರುತ್ತಾರೆ. ಈ ಕಲಾಕೃತಿಯಲ್ಲಿ ಹೆಣ್ಣೊಬ್ಬಳು ತನ್ನ ಪ್ರಿಯತನಮನಿಲ್ಲದ ಸಮಯದಲ್ಲಿ ಆತನ ನೆನಪಾಗಿ ಎದ್ದು ಕುಳಿತ ಸನ್ನಿವೇಶದಂತೆ ಭಾಸವಾಗುತ್ತದೆ. ಸ್ತ್ರೀಯ ದೇಹವು ನಗ್ನವಾಗಿದ್ದು ನೋಡಲು ಗರ್ಭಿಣಿ ಸ್ತ್ರೀಯಂತೆ ಗೋಚರವಾಗುತ್ತದೆ. ಪ್ರಿಯತಮನ ದಾರಿ ಕಾಯುತ್ತಿರುವಂತೆ ಆಕೆಯ ಅಂತರಾಳ ಭಾವನೆ ಕಂಡು ಬರುತ್ತದೆ. ಆಕೃತಿಯ ಅಂಗರಚನಾ ವಿನ್ಯಾಸವು ನೈಜವಾಗಿದೆ. ಹಿನ್ನೆಲೆಯಲ್ಲಿ ಬಿಳಿ ಪರದೆ ಕಂಡು ಬರುತ್ತದೆ. ಮಲಗುವ ಮಂಚದ ಮೇಲೆ ಮಹಿಳೆಯು ಕುಳಿತಂತೆ ಕಂಡು ಬರುತ್ತಲಿದೆ. ಪೂರ್ಣ ದಟ್ಟವಾದ ಹಳದಿ, ಕಂದು ವರ್ಣ ಲೇಪಿಸಿದ ಈ ಕೃತಿಯು ಜೀವಂತಿಕೆಯಿಂದ ಕೂಡಿದ್ದು ಹೆಣ್ಣಿನ ಯೌವ್ವನಾವಸ್ಥೆಯ ಸಂಗಾತಿ ಭಾವನೆಗಳನ್ನು ಸೂಚಿಸುತ್ತದೆ.

**ಜೋಗಮ್ಮ : ೧೯೮೦**

ಈ ಚಿತ್ರವು ಸಂಪ್ರದಾಯಿಕ ಗ್ರಾಮ ಸಂಸ್ಕೃತಿಯನ್ನು ಪ್ರತಿನಿಧಿಸುವ ಕಲಾತ್ಮಕ ಚಿತ್ರವಾಗಿದೆ. ಕೃತಿಯ ಸಂಯೋಜನೆಯಲ್ಲಿ ಗ್ರಾಮಗಳಲ್ಲಿರುವ ದುರ್ಗಮ್ಮ, ಊರಮ್ಮ, ಮಾರೆಮ್ಮ ಬಂಡೆಮ್ಮಗಳಂತಹ ದೇವತೆಯ ರೂಪವಿನ್ಯಾಸವು ಇಲ್ಲಿ ಕಂಡು ಬರುತ್ತದೆ. ವಿಶಿಷ್ಟ ಆಚರಣೆಯ ಹಿನ್ನೆಲೆಯಲ್ಲಿ ಕೆಲವು ಸಮುದಾಯದ ಸ್ತ್ರೀಯರು ಜೋಗಮ್ಮನಾಗಿ ಪರಿವರ್ತಿತರಾಗುತ್ತಾರೆ. ಈ ಚಿತ್ರದಲ್ಲಿ ಮಹಿಳೆಯೊಬ್ಬಳು ಜೋಗಮ್ಮನಾಗಿ ಸಾಂಪ್ರದಾಯಿಕ ವೇಷಭೂಷಣಗಳಿಂದ ಅಲಂಕೃತಗೊಂಡಂತೆ ಕಂಡು ಬರುತ್ತಾಳೆ.

ಮುಖವು ದಟ್ಟ ನೀಲಿಯಿಂದ ಲೇಪಿತವಾಗಿದ್ದು, ಹಣೆಗೆ ಕೆಂಪು ಬಣ್ಣವಿದೆ. ಹಳದಿ ಹಸಿರು ಬಿಳಿ ವರ್ಣಗಳಲ್ಲದೆ ಕಪ್ಪು ಹಾಗೂ ಕಂದು ವರ್ಣಗಳು ಕಲಾಕೃತಿಯಲ್ಲಿ ಕಂಡು ಬರುತ್ತವೆ. ದೇವಿಯ ಮುಖದಲ್ಲಿನ ನೀಳವಾದ ಮೂಗು, ಕಿವಿಯ ಓಲೆ, ಮೂಗುತಿಗಳು, ಧರಿಸಿರುವ ಸೀರೆಯ ಕೆಂಪು ವರ್ಣ ಕೊರಳಲ್ಲಿ ಧರಿಸಿರುವ ಬೆಳ್ಳಿಯುಂಗುರವು ಇನ್ನಷ್ಟು ಮೆರಗು ತಂದಿವೆ. ಚಿತ್ರದ ಹಿನ್ನೆಲೆ ಆರಾಧನಾ ಮನೋಭಾವವನ್ನು ಹೆಚ್ಚಿಸುವಂತಹ ಬಣ್ಣ ಲೇಪನದಿಂದ ಕೂಡಿದೆ.

**ಎಪ್ಪತ್ತರಿಂದ ಎಂಭತ್ತರ ದಶಕದ ಕಲಾಕೃತಿಗಳ ವಿಶ್ಲೇಷಣೆ :**

ಪಾಟೀಲರು ಕಲಾ ಬದುಕಿಗೆ ಸ್ವತಂತ್ರವಾಗಿ ಪಾದಾರ್ಪಣೆ ಮಾಡಿದ ನಂತರ ಎರಡನೆಯ ದಶಕದ ಕಲಾಕೃತಿಗಳನ್ನು ಇಲ್ಲಿ ವಿಶ್ಲೇಷಿಸಲಾಗಿದೆ. ಕ್ರಿ.ಶ. ೧೯೭೧ ರಿಂದ ಕ್ರಿ.ಶ ೧೯೮೦ ರ ವರೆಗಿನ ಹತ್ತು ವರ್ಷದ ಅವಧಿಯಲ್ಲಿ ರಚಿಸಿದ ಕಲಾಕೃತಿಗಳನ್ನು ಅಧ್ಯಯನಕ್ಕೆ ಆಯ್ದುಕೊಳ್ಳಲಾಗಿದೆ. ಇಲ್ಲಿ ಈ ದಶಕದಲ್ಲಿ ರಚಿಸಿದ ಸುಮಾರು ೪೭ ಕೃತಿಗಳನ್ನು ಅಧ್ಯಯನಕ್ಕೆ ಪರಿಗಣಿಸಲಾಗಿದೆ.

ಈ ಹಂತದಲ್ಲಿ ಪಾಟೀಲರು ಅಳವಡಿಸಿಕೊಂಡ ಚಿತ್ರಶೈಲಿ ಅವರದೇ ಆದ ವಿಶಿಷ್ಟತೆಯನ್ನು ಪಡೆದುಕೊಂಡಿದೆ. ಈ ದಶಕದ ಕಲಾಕೃತಿಗಳಲ್ಲಿ ಅವರು ಪ್ರತ್ಯೇಕ ಚಿತ್ರಶೈಲಿಯನ್ನು ಅಳವಡಿಸಿಕೊಳ್ಳುವಲ್ಲಿ ಯಶಸ್ವಿಯಾಗುತ್ತಿರುವ ಪ್ರಯತ್ನಗಳು ಕಂಡು ಬರುತ್ತವೆ. ಈ ದಶಕದಲ್ಲಿ ವೈವಿಧ್ಯ ವಿಷಯಗಳಿಗೆ ಸಂಬಂಧಪಟ್ಟ ಕಲಾಕೃತಿಗಳು ಪಾಟೀಲರಿಂದ ರಚನೆಗೊಂಡಿವೆ. ಕೆಲವು ಕಲಾಕೃತಿಗಳು ವಯೋ ಸಹಜವಾಗಿರುವ ಕಾಮ, ಪ್ರೇಮ, ಪ್ರೀತಿ, ನಗ್ನತೆ, ಸ್ತ್ರೀ ಆಕರ್ಷಣೆ ಮುಂತಾದ ಸಂಗತಿಗಳಿಂದ ಪ್ರೇರಿತವಾಗಿದ್ದರೆ ಮತ್ತೆ ಕೆಲವು, ಬದುಕಿಗಾಗಿ, ಜೀವನ ನಿರ್ವಹಣೆಗಾಗಿ, ದುಡಿಮೆ ಅವಶ್ಯ ಎನ್ನುವ ಸಂಕೇತವನ್ನು ಪ್ರತಿನಿಧಿಸುತ್ತವೆ. ಇದರ ಜೊತೆಗೆ

ಗಾಢವಾಗುತ್ತಿರುವ ಗೆಳೆತನ, ಹಳ್ಳಿ ಸಂಸ್ಕೃತಿ, ಗ್ರಾಮೀಣ ಬದುಕು, ಸಂಗಾತಿ ಆಯ್ಕೆ, ಗೆಳತಿಯರ ಬಯಕೆ, ಸ್ತ್ರೀ ಸಂಗಕ್ಕಾಗಿ ಹಾತೊರೆಯುವ ಮನಸ್ಸು, ಸಾಂಕೇತಿಕವಾಗಿ ಇಂತಹ ವಿಚಾರಗಳನ್ನು ಪ್ರಸ್ತುತ ಪಡಿಸಿರುವುದು ಮತ್ತೆ ಕೆಲವು ಕಲಾಕೃತಿಗಳಲ್ಲಿ ಕಂಡುಬರುತ್ತದೆ. ಇವುಗಳ ಜೊತೆಗೆ ಭಾವಚಿತ್ರಗಳನ್ನು ರಚಿಸುವ ಹಿಂದಿನ ಆಸಕ್ತಿಯು ಈ ದಶಕದಲ್ಲಿ ದ್ವಿಗುಣಗೊಂಡಿರುವುದನ್ನು ನೋಡಬಹುದು. ಅಲ್ಲದೆ ಅದೇ ತಾನೆ ಭಾರತದಲ್ಲಿ ಪ್ರಖ್ಯಾತಿಯನ್ನು ಪಡೆದುಕೊಳ್ಳುತ್ತಿದ್ದ ನವ್ಯಕಲಾಶೈಲಿಗಳ ಕಡೆಗೆ ಇವರ ಮನಸ್ಸು ಹರಿದಿರುವುದು ಈ ದಶಕದಲ್ಲಿ ಕಂಡುಬರುವ ಪ್ರಮುಖ ಅಂಶವಾಗಿದೆ.

ತಾರುಣ್ಯದಲ್ಲಿ ಮಾನವನ ಮನಸ್ಸು ಕೇವಲ ಸ್ತ್ರೀ ಸೌಂದರ್ಯದ ಬಗ್ಗೆ ಚಿಂತಿಸದೇ ಪ್ರಕೃತಿಯ, ಪ್ರಾಣಿ, ಪಕ್ಷಿ, ಗಿಡ, ಮರ, ಇತರೆ ವಸ್ತುಗಳು ಒಟ್ಟಾರೆ ಸಮಗ್ರ ನಿಸರ್ಗದಲ್ಲಿನ ಪ್ರತಿಯೊಂದರಲ್ಲೂ ಕಾಣುವ ಸೌಂದರ್ಯದ ಬಗ್ಗೆ ವಿವೇಚಿಸುತ್ತಲಿರುತ್ತದೆ. ಹಾಗಾಗಿಯೇ ಪಾಟೀಲರು ಈ ದಶಕದಲ್ಲಿ ಸ್ತ್ರೀ ಚಿತ್ರಗಳ ಜೊತೆಗೆ ಮುಂಜಾನೆ ಹಾಗೂ ಮುಸ್ಸಂಜೆಗಳು, ಪಕ್ಷಿಗಳು, ರಾತ್ರಿ, ಹಗಲು, ಸಮುದ್ರ ತೀರ, ಹಳ್ಳಿಯ ಹುಲ್ಲುಗಾವಲು, ಮುಂತಾದ ಸುಂದರ ಚಿತ್ರಗಳನ್ನು ರಚಿಸಿದ್ದಾರೆ.

ಪಕ್ಷಿ ಮತ್ತು ಮಹಿಳೆ, ಮಹಿಳೆಯರು, ಮಹಿಳೆಯ ಕನಸು, ಪ್ರೇಮ, ಮಹಿಳೆ, ಅರೆನಗ್ನ ಸ್ತ್ರೀ, ಪ್ರಕೃತಿ ಮತ್ತು ಸ್ತ್ರೀ, ಗ್ರಾಮೀಣ ಮಹಿಳೆ, ಯೋಚನಾಮಗ್ನ ಮಹಿಳೆ, ಸಂಗಾತಿಯ ನೆನಪು ಮುಂತಾದ ಚಿತ್ರಗಳು ಈ ದಶಕದಲ್ಲಿ ಅವರ ವಯೋಮಾನದ ಸಹಜ ಮಾನಸಿಕ ಕ್ರಿಯೆಯಾದ ಪ್ರೇಮ, ಪ್ರೀತಿ, ಪ್ರಣಯ, ಮೈಥುನಗಳ ಬಗ್ಗೆ ಇರುವ ಗಾಢವಾದ ಅಭಿಲಾಷೆಯನ್ನು ಬಿಂಬಿಸುತ್ತವೆ. ಈ ದಶಕದಲ್ಲಿ ಈ ಬಗೆಯ ಚಿತ್ರಗಳೇ ಹೆಚ್ಚಾಗಿರುವುದು ವಿಶೇಷವಾಗಿದೆ. ಮಹಿಳೆಯರು ಎನ್ನುವ ಶಿರ್ಷಿಕೆಯ ಸುಮಾರು ಹತ್ತು ಕಲಾಕೃತಿಗಳಿವೆ. ಅದೆ ರೀತಿ ನಗ್ನ ಮಹಿಳೆ ಎಂಬ ಹಸರಿನ ಎರಡು ಚಿತ್ರಗಳು, ಗೂಳಿಯೊಂದಿಗೆ ಮಹಿಳೆಯರು, ಪ್ರೇಮ, ಈ ಎಲ್ಲ ಕೃತಿಗಳು ಅದೇ ಭಾವನೆಗಳಿಂದ ಪ್ರೇರಿತವಾಗಿರುವುದು ಗೋಚರಿಸುತ್ತದೆ.

ಶಿಕ್ಷಣದ ನಂತರ ಬದುಕಿಗಾಗಿ ನೆಲೆಗೊಳ್ಳಲು ಹಲವಾರು ಉದ್ಯೋಗಗಳ ಕುರಿತು ಮನಸ್ಸು ಯೋಚಿಸತೊಡಗುತ್ತದೆ. ರೈತನ ಕುಟುಂಬ, ಹಳ್ಳಿ ಬದುಕು, ಬದುಕಿನ ಕರಾಳತೆ, ಶಕ್ತಿ, ಕಾರ್ಮಿಕ ಮಹಿಳೆ ಎಂಬಂತಹ ಕೃತಿಗಳು ಈ ದಶಕದಲ್ಲಿ ಅವರ ಮನಸ್ಸು ಯೋಚಿಸಿರುವ ಬದುಕಿನ ನೆಲೆಯ ಹುಡುಕಾಟದ ನಿಲುವುಗಳನ್ನು ಅಭಿವ್ಯಕ್ತಗೊಳಿಸುತ್ತವೆ. ಇದರೊಂದಿಗೆ ತನ್ನ ತನವನ್ನು ತೋರಿಸುವ ಪ್ರಯತ್ನ, ನಾಲ್ಕು ಜನರಲ್ಲಿ ಎದ್ದು ಕಾಣಬೇಕೆನ್ನುವ

ನಿಲುವುಗಳು, ತನ್ನನ್ನು ಇತರರೆದುದು ತೆರೆದುಕೊಳ್ಳುವಿಕೆ ಈ ಹಂತದಲ್ಲಿ ನಡೆಯುವ ಮಾನಸಿಕ ಕ್ರಿಯೆಗಳಾಗಿವೆ. ಈ ಮಾನಸಿಕ ಕ್ರಿಯೆಗಳು ಬಾಹ್ಯವಾಗಿ ಅನುಷ್ಠಾನಗೊಳ್ಳುತ್ತವೆ. ಈ ದಶಕದಲ್ಲಿ ಪಾಟೀಲರು ಸಹಿತ ಅಂತಹ ಪ್ರಯತ್ನಗಳನ್ನು ಮಾಡಿರುವುದು ಕೆಲವು ಕೃತಿಗಳ ಹಿನ್ನೆಲೆಯಲ್ಲಿ ಕಂಡುಬರುತ್ತದೆ. ಸ್ವಭಾವಚಿತ್ರ, ಗೆಳೆತನ ಎಂಬ ಕೃತಿಗಳು ಈ ಅಂಶವನ್ನು ಪ್ರತಿನಿಧಿಸುತ್ತವೆ. ಬೀಸಣಿಕೆ, ದೋಣಿ, ಗಣೇಶ, ನೃತ್ಯ, ಜೋಗಮ್ಮ, ತಾಯಿ ಮತ್ತು ಮಗು ಈ ಚಿತ್ರಗಳು ಗ್ರಾಮೀಣ ಸಂಸ್ಕೃತಿ, ಆಚಾರ ವಿಚಾರ, ನಂಬಿಕೆ ಆಚರಣೆಗಳನ್ನು ಪ್ರತಿಬಿಂಸಿಸುವ ಕೃತಿಗಳಾಗಿವೆ. ಬೀಸಣಿಕೆ ಚಿತ್ರದಲ್ಲಿ ಹಳೆಕಾಲದಲ್ಲಿ ಗ್ರಾಮೀಣ ಭಾಗದಲ್ಲಿ ಪ್ರಚಲಿತದಲ್ಲಿದ್ದ ಬಿದರಿನ ಕಲಾತ್ಮಕ ಬೀಸಣಿಕೆಯನ್ನು ಚಿತ್ರಿಸಲಾಗಿದೆ.

ಗ್ರಾಮೀಣ ಭಾಗದ ಕಲಾತ್ಮಕ ಬೀಸಣಿಕೆಗಳ ಕಲಾವಂತಿಕೆ ವೈವಿಧ್ಯಮಯ ವಾಗಿರುತ್ತದೆ. ಚೌಕ, ಆಯತ, ವೃತ್ತ, ಅಂಡಾಕಾರ, ನಕ್ಷತ್ರ, ಷಟ್ಕೋನ ಹೀಗೆ ಹಲವು ಆಕಾರಗಳಲ್ಲಿ ಬಿದರಿನಿಂದ ಹೆಣೆಯಲಾದ ಈ ಬೀಸಣಿಕೆಗಳನ್ನು ನೋಡುವುದೇ ಒಂದು ಸೊಬಗು. ಇವುಗಳನ್ನು ವಿಶೇಷವಾಗಿ ಹೆಣೆದು ಮುತ್ತು, ಮಣಿಗಳು, ಬಣ್ಣದ ಅರಿವೆ, ಮರದ ಬಳೆಗಳು, ಕನ್ನಡಿ ತುಂಡುಗಳು ಹೀಗೆ ಹಲವಾರು ಬಗೆಯಲ್ಲಿ ಅಲಂಕರಿಸಿರುತ್ತಾರೆ. ಅಂತಹ ಕಲಾತ್ಮಕ ಬೀಸಣಿಕೆಗಳು ಇಂದು ಕಂಡುಬರುವುದಿಲ್ಲ. ಪಾಟೀಲರು ತಮ್ಮ ಚಿತ್ರಕಲಾಕೃತಿಯಲ್ಲಿ ಇದನ್ನು ಅಳವಡಿಸಿಕೊಳ್ಳುವ ಮೂಲಕ ಇದನ್ನು ಮುಂದಿನ ಪೀಳಿಗೆಗೆ ಕಾಯ್ದಿಡುವ ಮಹತ್ವದ ಕೆಲಸ ಮಾಡಿದ್ದಾರೆ.

ಗಣೇಶ ಚಿತ್ರವು ಗ್ರಾಮೀಣ ಪರಿಸರದಲ್ಲಿ ಸಾಮೂಹಿಕವಾಗಿ ಆಚರಿಸುವ ಉತ್ಸವಗಳ ನೆನಪನ್ನು ಪ್ರತಿನಿಧಿಸುತ್ತದೆ. ಮಕ್ಕಳು, ಯುವಕರು, ಎಲ್ಲರೂ ಉತ್ಸಾಹದಿಂದ ಭಾಗವಹಿಸುವ ಗಣೇಶ ಉತ್ಸವದಲ್ಲಿ ಕಲಾತ್ಮಕ ಆಚರಣೆಗಳ ಸುಗ್ಗಿಯೇ ನಡೆಯುವುದು. ಅಂತಹ ನೆನಪನ್ನು ಪಾಟೀಲರು ಇಲ್ಲಿ ಕಟ್ಟಿಕೊಟ್ಟಿದ್ದಾರೆ. ಅದೇ ರೀತಿ ನೃತ್ಯ ಎಂಬ ಕೃತಿಯಲ್ಲಿ ಹಳ್ಳಿಗರು ವಿಶಿಷ್ಟ ಸಂದರ್ಭಗಳಲ್ಲಿ ಆಚರಿಸುವ ಜನಪದ ನೃತ್ಯ ಪ್ರಕಾರ ಒಂದನ್ನು ಪ್ರತಿನಿಧಿಸಿದ್ದಾರೆ. ಜೋಗಮ್ಮ ಕೃತಿಯಲ್ಲಿ ಗ್ರಾಮೀಣ ಪರಂಪರೆಯಲ್ಲಿ ಇಂದಿಗೂ ಪ್ರಚಲಿತದಲ್ಲಿರುವ ನಂಬಿಕೆ ಆಚರಣೆಯೊಂದನ್ನು ಚಿತ್ರದ ಮೂಲಕ ಅಭಿವ್ಯಕ್ತಗೊಳಿಸಿದ್ದಾರೆ. ಜೋಗಮ್ಮ ಆಚರಣೆಯ ಅನಿಷ್ಠ ಪದ್ಧತಿಯನ್ನು ತೊರೆಯಲು ಸಾಮಾಜಿಕವಾಗಿ ಸಂದೇಶ ಒಂದನ್ನು ಈ ಕೃತಿಯ ಮೂಲಕ ನೀಡಲು ಪ್ರಯತ್ನಿಸಿದ್ದಾರೆ. ತಾಯಿ ಮಗು ಎಂಬ ಚಿತ್ರದಲ್ಲಿ ತಾಯಿ ಮಗುವಿನ ಮಧ್ಯೆ ಇರುವ ಮಮತೆ, ವಾತ್ಸಲ್ಯವನ್ನು ಬಿಂಬಿಸುವ ಜೊತೆಗೆ ಹಳ್ಳಿಯ ಪರಿಸರದ ಹಾಡು, ಆಟ, ನೋಟ, ನಂಬಿಕೆ, ಆಚರಣೆಗಳ ಹಿನ್ನೆಲೆಯನ್ನು ಕಟ್ಟಿಕೊಟ್ಟಿದ್ದಾರೆ. ಇಂದಿನ ಆಧುನಿಕತೆಯ

ಭರಾಟೆಯಲ್ಲಿ ಹಾಗೂ ದೂರದರ್ಶನ (ಟಿ.ವಿ) ಆಗಮನದಿಂದಾಗಿ ತಾಯಿ ಮಗುವಿನ ಮಧ್ಯದ ಮಮತೆ ವಾತ್ಸಲ್ಯಗಳು ಮರೆಯಾಗುವುದರ ಜೊತೆಗೆ ತಾಯಿ ಮಗುವನ್ನು ರಮಿಸುವ ಜನಪದ ಹಾಡು ಆಟಗಳು ಸಹಿತ ಕಣ್ಮರೆಯಾಗಿವೆ. ಮಗು ಊಟಕ್ಕೆ ಹಟ ಮಾಡಿದಾಗ ತಾಯಿ ಚಂದಿರನನ್ನು ತೋರಿಸಿ ಹಾಡು ಹೇಳಿ ಊಟ ಮಾಡಿಸುತ್ತಿದ್ದಳು. ಮಗು ಹಾಡಿನ ಜೊತೆಗೆ ಚಂದಿರ ಹಾಗೂ ಬೆಳದಿಂಗಳ ಸೌಂದರ್ಯವನ್ನು ಆಸ್ವಾದನೆ ಮಾಡುತ್ತ ಊಟ ಮಾಡುತ್ತಿತ್ತು. ಪ್ರಸ್ತುತ ಚಿತ್ರದಲ್ಲಿಯೂ ತಾಯಿ ಮಗುವಿಗೆ ಚಂದಿರನನ್ನು ತೋರಿಸುತ್ತ ಊಟ ಮಾಡಿಸುತ್ತಿರುವ ಸಂದರ್ಭವನ್ನು ಬಿಂಬಿಸಲಾಗಿದೆ.

ಹುಂಜ ಮತ್ತು ಮಹಿಳೆ, ದೋಣಿ, ಈ ಕೃತಿಗಳು ಹಳ್ಳಿಯ ನಿತ್ಯ ಬದುಕಿನ ಘಟನಾವಳಿಗಳನ್ನು ಚಿತ್ರಿಸುತ್ತವೆ. ಇದಲ್ಲದೆ ಪಾಟೀಲರು ಈ ದಶಕದಲ್ಲಿ ಪಾಶ್ಚಾತ್ಯ ಆಧುನಿಕ ಶೈಲಿಯ ಪ್ರಭಾವಕ್ಕೆ ನಿಧಾನವಾಗಿ ಒಳಗಾಗುತ್ತಿರುವುದು ಕಂಡುಬರುತ್ತದೆ. ಆಧುನಿಕ ಶೈಲಿಯ ಭಾವಚಿತ್ರ, ಕ್ಯೂಬಿಸಂ ಶೈಲಿಯ ಭಾವಚಿತ್ರ, ಆಧುನಿಕ ಸ್ಥಿರಚಿತ್ರ ಇವೆಲ್ಲ ಪಾಶ್ಚಾತ್ಯ ಪ್ರಭಾವದಿಂದ ಪ್ರೇರಣೆಗೊಂಡಿವೆ. ಈ ದಶಕದಲ್ಲಿ ಇಂತಹ ಚಿತ್ರಗಳ ಜೊತೆಗೆ ರೈತರ ಬದುಕು ಬವಣೆಗಳನ್ನು ಕಟ್ಟಿಕೊಡುವ ಹಿನ್ನೆಲೆಯಲ್ಲಿಯ ಕೆಲವು ಕೃತಿಗಳು ಪಾಟೀಲರಿಂದ ರಚಿಸಲ್ಪಟ್ಟಿವೆ. ಬದುಕಿನ ಕರಾಳತೆ, ರೈತನ ಕುಟುಂಬ, ತಲೆಬುರುಡೆ ಮುಂತಾದ ಕೃತಿಗಳು ಈ ಹಿನ್ನೆಲೆಯಲ್ಲಿವೆ. ಬದುಕಿನ ಕರಾಳತೆ ಎಂಬ ಕೃತಿಯಲ್ಲಿ ರೈತನ ಬಡತನ, ಬೆಳೆಹಾಣಿ, ದಬ್ಬಾಳಿಕೆಗಳಿಂದ ನೊಂದುಕೊಂಡು ನೇಣು ಹಾಕಿಕೊಳ್ಳುತ್ತಿರುವಂತೆ ಚಿತ್ರಿಸಲಾಗಿದೆ. ಇಂತಹ ಘಟನೆಗಳು ಇಂದು ಹೆಚ್ಚಿನ ಪ್ರಮಾಣದಲ್ಲಿ ನಡೆಯುತ್ತಿವೆ ಎಂಬುದನ್ನು ಇಲ್ಲಿ ಗಮನಿಸಬಹುದಾಗಿದೆ.

ರೈತನ ಕುಟುಂಬ ಕೃತಿಯಲ್ಲಿ ರೈತನೊಬ್ಬ ಯಾವುದೋ ಸಮಸ್ಯೆಯಿಂದಾಗಿ ಹಣೆಗೆ ಕೈಯಿಟ್ಟುಕೊಂಡು ಚಿಂತಿಸುತ್ತ ಕುಳಿತಿದ್ದಾನೆ. ಮನೆಯ ಇತರ ಸದಸ್ಯರು ಕೂಡಾ ಆತನ ಚಿಂತೆಯಲ್ಲಿ ಭಾಗಿಗಳಾಗಿದ್ದಾರೆ. ತಲೆಬುರುಡೆ ಕೃತಿಯಲ್ಲಿ ರೈತನೊಬ್ಬ ಆತ್ಮಹತ್ಯೆ ಮಾಡಿಕೊಂಡಿದ್ದಾನೆ. ಇನ್ನೊಬ್ಬ ಆತನ ಹೆಣದ ಮುಂದೆ ರೋಧಿಸುತ್ತ ಕುಳಿತಿದ್ದಾನೆ. ಸತ್ತವ್ಯಕ್ತಿಯ ಹೆಣವನ್ನು ಹದ್ದು ಕಾಗೆಗಳು ನಾಯಿ, ನರಿಗಳು, ಕತ್ತರಿಸಿ ತಿನ್ನುತ್ತಿವೆ. ದೂರದಲ್ಲಿ ಮೂರ್ನಾಲ್ಕು ತಲೆಬುರುಡೆಗಳು ಆ ಸಂದರ್ಭದ ಭೀಕರತೆಯನ್ನು ಪ್ರತಿಬಿಂಬಿಸುತ್ತಲಿವೆ. ಇಂತಹ ಚಿತ್ರಗಳಲ್ಲದೆ ಈ ದಶಕದಲ್ಲಿ ತಮ್ಮ ಎಂದಿನ ಹಳ್ಳಿಯ ನೆನಪು, ಪ್ರಸಿದ್ಧ ವ್ಯಕ್ತಿಗಳ ಭಾವಚಿತ್ರಗಳನ್ನು ಅನುಕರಿಸುವುದು, ಮಕ್ಕಳ ಬಗ್ಗೆ ಚಿತ್ರಗಳನ್ನು ರಚಿಸಿರುತ್ತಾರೆ. ಈ ದಶಕದ ಚಿತ್ರಗಳು ಅವರು ವೈಯಕ್ತಿಕವಾಗಿ ಬೆಳೆಯುವಲ್ಲಿ ಹಾಗೂ ಪ್ರತ್ಯೇಕ ಶೈಲಿಯನ್ನು ರೂಪಿಸಿಕೊಳ್ಳುವ ನಿಟ್ಟಿನಲ್ಲಿ ಸಾಗಿರುವ ದಿಟ್ಟ ಹೆಜ್ಜೆಯ ಗುರುತನ್ನು ತೋರಿಸಿ ಕೊಡುತ್ತವೆ.

ಎಪ್ಪತ್ತರಿಂದ ಎಂಭತ್ತರ ದಶಕದ ಕಲಾಕೃತಿಗಳು



ಮುಸಂಜೆ, 1971, 24X30



ಪಕ್ಷಿ ಮತ್ತು ಮಹಿಳೆ, 1971, 24X30



ಸ್ವ ಭಾವಚಿತ್ರ, 1972, 18X24



ಪ್ರೇಮ, 1972, 24X30





ಮಹಿಳೆ, 1972, 24X30



ದೋಣಿ, 1973, 24X30





ಅರೆನಗ್ನ ಸ್ತ್ರೀ, 1973, 24X24



ಭಾವಚಿತ್ರ, 1974, 24X30





ವಸ್ತುಚಿತ್ರಣ, 1974, 24X24



ಗೂಳಿಯೊಂದಿಗೆ ಇಬ್ಬರು ಮಹಿಳೆಯರು, 1974, 18X24



ಹುಂಜ ಮತ್ತು ಮಹಿಳೆ, 1974, 24X24



ಗೆಳೆತನ, 1974, 24X30





ರೈತಾಪಿ ಕುಟುಂಬ, 1975, 24X30



ಭಾವಚಿತ್ರ, 1974, 24X30





ಮಹಿಳೆಯರು, 1975, 12x18



ಕುದುರೆ ಮತ್ತು ಮಹಿಳೆ, 1975, 12x18





ನಿಸರ್ಗ ಚಿತ್ರಣ, 1975, 18X18



ಮಹಿಳೆ, 1976, 18X24





ತಲೆ ಬುರುಡೆ, 1975, 12x18



ಅಮೂರ್ತ ಶೈಲಿಯ ನಿಸರ್ಗಚಿತ್ರ, 1975, 12x18





ಪ್ರಕೃತಿ ಮತ್ತು ಸ್ತ್ರೀ, 1976, 24X24



ಬಿಸಣಿಕೆ, 1976, 18X18





ಗ್ರಾಮೀಣ ಮಹಿಳೆ, 1977, 18X24



ತಾಯಿ ಮಗು, 1977, 18X24





ನಗ್ನ ಸ್ತ್ರೀ, 1977, 18X18



ಯೋಚನಾ ಮಗ್ನಳಾದ ಮಹಿಳೆ, 1977, 12X18





ಭಾವಚಿತ್ರ, 1978, 24x30



ಬಾಲಕಿಯ ಭಾವಚಿತ್ರ, 1978, 24x30





ಹಳ್ಳಿ ದಂಪತಿಗಳು, 1978, 24X30



ಆಧುನಿಕ ಶೈಲಿಯ ಭಾವಚಿತ್ರ, 1978, 24X30





ಕ್ಯೂಬಿಸಂ ಶೈಲಿಯಲ್ಲಿ ರಚಿಸಿದ ಮಹಿಳೆಯ ಭಾವಚಿತ್ರ, 1979, 12X18



ಬದುಕಿನ ಕರಾಳತೆ, 1979, 24X30





ರಾತ್ರಿ, 1979, 18X24



ಕಾರ್ಮಿಕ ಮಹಿಳೆ, 1979, 18X24





ಶಕ್ತಿ, 1979, 18x24



ಭಾವಚಿತ್ರ, 1979, 18x24



ಗೆಳತಿಯರು, 1980, 24X24



ಗೆಳತಿಯರು, 1980, 24X24



# ಎಪ್ಪತ್ತರಿಂದ ಎಂಭತ್ತರ ದಶಕದ ಕಲಾಕೃತಿಗಳು



ಸಂಗಾತಿಯ ನೆನಪು, 1980, 24X30



ಜೋಗಮ್ಮ, 1980, 24X30



೦೩. ಎಂಭತ್ತರಿಂದ ತೊಂಭತ್ತರ ದಶಕದ ಕಲಾಕೃತಿಗಳು

ಇಲ್ಲಿ ೧೯೮೧ ರಿಂದ ೧೯೯೦ರ ವರೆಗೆ ರಚನೆಗೊಂಡ ಪಾಟೀಲರ ವಿವಿಧ ಕಲಾಕೃತಿಗಳನ್ನು ಅಧ್ಯಯನಕ್ಕೆ ಒಳಪಡಿಸಲಾಗಿದೆ. ಈ ದಶಕದಲ್ಲಿ ಶಾಮಲಾಬಾಯಿ ಭಾವಚಿತ್ರ, ನಗರ ದೃಶ್ಯ, ನಿಸರ್ಗ ದೃಶ್ಯ, ದಾಂಪತ್ಯ, ವಿರಹದಲ್ಲಿರುವ ಮಹಿಳೆ, ಅಮ್ಮನ ಮಡಿಲು, ಪ್ರೇಮ ಸಂದೇಶ, ಪರ್ವತ ಶ್ರೇಣಿ, ಸಂತಾಪ, ಮುಖವಾಡಗಳು, ಚಿಂತೆ, ಕಾಗೆ, ಜೆ.ಎಂ.ಎಸ್.ಮಣಿ ಭಾವಚಿತ್ರ, ಆರ್. ಎಂ. ಹಡಪದ ಭಾವಚಿತ್ರ, ಪ್ರಕೃತಿ ಮತ್ತು ಸ್ತ್ರೀ, ಶೃಂಗರಿಸಿಕೊಳ್ಳುತ್ತಿರುವ ಮಹಿಳೆ ಹೀಗೆ ಸುಮಾರು ಐವತ್ತೇಳು ಕಲಾಕೃತಿಗಳನ್ನು ವಿಶ್ಲೇಷಣೆ ಮಾಡಲಾಗಿದೆ. ಅವುಗಳ ಸ್ಥೂಲ ಮಾಹಿತಿ ಕೆಳಗಿನಂತಿದೆ.

**ಶಾಮಲಾಬಾಯಿ ಭಾವಚಿತ್ರ : ೧೯೮೧**

ಈ ಭಾವಚಿತ್ರವು ಶಾಮಲಾಬಾಯಿ ಎಂಬುವಳದಾಗಿದೆ. ತೈಲವರ್ಣದಲ್ಲಿ ಅತ್ಯಂತ ನೈಜ ರೀತಿಯಲ್ಲಿ ರಚಿಸಲ್ಪಟ್ಟಿದೆ. ಮುಖದಲ್ಲಿ ಕಾಂತಿಯುಕ್ತ ಕೆಂಪು, ಹಳದಿ ಹಾಗೂ ಬಿಳಿಯ ವರ್ಣಗಳ ಸಂಯೋಜನೆ ಇದೆ. ಮಂದಹಾಸ ಮುಖದಲ್ಲಿದೆ. ಕುಂಚದ ಬೀಸುಗಳಿಂದ ಮುಖದ ಲಕ್ಷಣಗಳು ಹೊರಹೊಮ್ಮುವಂತೆ ಮಾಡಲಾಗಿದೆ. ನೆರಳು ಬೆಳಕಿನ ಪರಿಣಾಮಕಾರಿಯಾದ ನಿರೂಪಣೆ ಇದೆ. ಧರಿಸಿರುವ ಉಡುಪುಗಳಲ್ಲಿ ಸೀರೆಯ ನೆರಿಗೆಗಳನ್ನು ಅತ್ಯಂತ ಸೂಕ್ಷ್ಮ ಹಾಗೂ ನೈಜವಾಗಿ ಚಿತ್ರಿಸಲಾಗಿದೆ. ಕಣ್ಣಲ್ಲಿ ಕಾಂತಿ ಸೂಸದಿದ್ದರೂ ಮುಖದಲ್ಲಿ ಚಲನ ಯುಕ್ತವಾದ ಕಾಂತಿಯ ಹೊಳಪು ಸ್ಪಷ್ಟವಾಗಿ ಗೋಚರವಾಗುತ್ತದೆ. ಈ ರೀತಿಯ ರಚನಾಕ್ರಮವು ಪ್ರಬುದ್ಧ ಕಲಾವಂತಿಕೆ ಹಾಗೂ ವರ್ಣಗಳ ಅರ್ಥವಂತಿಕೆಗಳನ್ನು ಅರಿತುಕೊಂಡ ಕಲಾವಿದರಿಗೆ ಮಾತ್ರ ಸಾಧ್ಯವಾಗುತ್ತದೆ. ಅಂತಹ ಪ್ರಯತ್ನ ಈ ಚಿತ್ರದಲ್ಲಿದೆ.

**ನಗರದೃಶ್ಯ : ೧೯೮೧**

ಪಾಟೀಲರು ಹಳ್ಳಿಯ ದೃಶ್ಯಗಳನ್ನು ಚಿತ್ರಿಸಿರುವಂತೆ ಪಟ್ಟಣ ಮತ್ತು ಬೃಹತ್ ನಗರಗಳ ಭೂ ದೃಶ್ಯಗಳನ್ನು ಸಹಿತ ಪರಿಣಾಮಕಾರಿಯಾಗಿ ಚಿತ್ರಿಸಿದ್ದಾರೆ. ಈ ಕೃತಿಯಲ್ಲಿ ನಗರ ಒಂದರ ಭೂ ದೃಶ್ಯವನ್ನು ಆಧುನಿಕ ಶೈಲಿಯಲ್ಲಿ ಚಿತ್ರಿಸಿದ್ದಾರೆ. ಅಮೂರ್ತ ಶೈಲಿಯಲ್ಲಿರುವ ಈ ಕೃತಿಯಲ್ಲಿ ಭಾವನಾತ್ಮಕ ಸೆಳಕುಗಳು ಮೂಡಿಬಂದಿವೆ. ಚೌಕ, ತ್ರಿಕೋನ, ಆಯತ, ವೃತ್ತ ಹೀಗೆ ಜ್ಯಾಮಿತಿ ಆಕೃತಿಗಳು ಒಂದನ್ನೊಂದು ವಿಶಿಷ್ಟ ಕೋನಗಳಲ್ಲಿ ಸಂಧಿಸಿರುವಂತೆ ಚಿತ್ರಿಸಲಾಗಿದೆ. ವರ್ಣಗಳ ಬಳಕೆ, ಪಟ್ಟಿಕೆಯಾಕಾರದ ದೊಡ್ಡ ಬೀಸುಗಳು ಆಕೃತಿಗೆ ಮೆರಗನ್ನು ತಂದುಕೊಟ್ಟಿವೆ.

**ನಿಸರ್ಗ ಚಿತ್ರ : ೧೯೮೧**

ಪಾಟೀಲರ ಕಲ್ಪನೆಗೆ ಕೌಶಲ್ಯದ ಮೆರಗು ಕೊಡುವುದರಲ್ಲಿ ಈ ನಿಸರ್ಗ ಚಿತ್ರಗಳು ಅತ್ಯಂತ ಪ್ರಮುಖ ಪಾತ್ರವಹಿಸುತ್ತವೆ. ಕವಿಯ ಕಲ್ಪನೆಗೂ ಮೀರಿ ಕಲಾವಿದನ ಕೈಯಲ್ಲಿ ನಿಸರ್ಗ ವೈವಿಧ್ಯರೂಪಗಳನ್ನು ಪಡೆದುಕೊಂಡಿರುವುದು ಇಲ್ಲಿ ಕಂಡು ಬರುತ್ತದೆ. ಇಲ್ಲಿ ನಿಸರ್ಗ ಆಧುನಿಕವಾಗಿ ಅಭಿವ್ಯಕ್ತಿಗೊಂಡಂತಾಗಿದೆ. ನೀರಿನ ಪ್ರತಿಫಲನದಲ್ಲಿ ಪ್ರಭಾವಕಾರಿಯಾಗಿ ರಚಿತಗೊಂಡ ಚಿತ್ರವು ಅದಮ್ಯ ಚೈತನ್ಯ ತುಂಬಿದಂತಿದೆ. ಮರ ಗಿಡಗಳು, ನೀರಿನ ತಗ್ಗಾದ ಪ್ರದೇಶ ಸುತ್ತಲು ಹುಲ್ಲುಗಾವಲು ಹೀಗೆ ಚಿತ್ರಕ್ಕೆ ಸೊಬಗನ್ನು ತಂದುಕೊಟ್ಟಿವೆ. ಕುಂಚದ ರಭಸವಾದ ಬೀಸುಗಳು ಪೂರಕ ಚಲನೆಯನ್ನು ಚಿತ್ರಕ್ಕೆ ಒದಗಿಸಿವೆ. ಜಲವರ್ಣ ಸಂಯೋಜನೆಯನ್ನು ಸಮರ್ಥವಾಗಿ ಬಳಸಿಕೊಂಡು ಸೃಷ್ಟಿಯ ಆಕಾರಗಳಿಗೆ ಭಾವನಾತ್ಮಕವಾದ ಪ್ರತಿಸೃಷ್ಟಿಯನ್ನು ಪಾಟೀಲರು ಇಲ್ಲಿ ರಚಿಸಿಕೊಟ್ಟಿದ್ದಾರೆ.

**ದಾಂಪತ್ಯ : ೧೯೮೧**

ಪ್ರಕೃತಿಯ ಭಾಗವಾಗಿರುವ ಮನುಷ್ಯಕುಲ ಪ್ರೀತಿ, ಪ್ರೇಮ ಮತ್ತು ಕಾಮದ ಮೂಲಕ ತನ್ನ ಸಂಕುಲವನ್ನು ಅರಳಿಸುವ ಕ್ರಿಯೆಯನ್ನು ಮಾಡುತ್ತ ಬಂದಿದೆ. ಸ್ತ್ರೀ ಮತ್ತು ಪುರುಷರ ಪ್ರೀತಿ, ಪ್ರೇಮ ಮತ್ತು ಕಾಮದ ಮೂಲಕವಾಗಿಯೇ ಪ್ರಕೃತಿಯ ಮುಂದುವರಿಕೆ ಸಾಗುತ್ತದೆ. ಪ್ರಕೃತಿಯ ಸಹಜವಾದ ಕಾಮಕ್ರಿಯೆಯ ಅರಳುವಿಕೆ ಪ್ರಸ್ತುತ ಚಿತ್ರದಲ್ಲಿ ಸಾಂಕೇತಿಕವಾಗಿ ರಚನೆಯಾಗಿದೆ. ಅಲಂಕಾರಿಕವಾಗಿ ಚಿಗುರೆಲೆ ಬಳ್ಳಿಗಳ ಮೂಲಕ ಪೂರಕವಾತಾವರಣವನ್ನು ಕಲಾವಿದರು ನೀಡಿದ್ದಾರೆ. ಈ ಕಲಾಕೃತಿಯಲ್ಲಿ ನಗ್ನ ರೂಪದಲ್ಲಿರುವ ಸ್ತ್ರೀ ಪುರುಷರಿಬ್ಬರು ಪರಸ್ಪರ ಸುರತ ಕ್ರಿಯೆಯಲ್ಲಿ ತೊಡಗಿದ್ದಾರೆ. ಪುರುಷ ಆಕಾರಕ್ಕೆ ಪೌರುಷದ ಸಂಕೇತ ಎಂಬಂತೆ ಹಳದಿ ವರ್ಣವಿದ್ದು, ಸ್ತ್ರೀ ಆಕೃತಿಯ ಹಿಂದೆ ಕೆಂಪು ಪರದೆಯ ವಿನ್ಯಾಸವಿದೆ. ಹಿಂಬದಿಯಲ್ಲಿ ರಾತ್ರಿಯ ಕಲ್ಪನೆಯನ್ನು ಪ್ರತಿನಿಧಿಸುವ ಹಾಗೇ ನೀಲಿ ಕುಂಚದ ಬೀಸುಗಳಿವೆ. ಒಟ್ಟಾರೆ ಚಿತ್ರದಲ್ಲಿ ಭಾವನೆಗೆ ಮಹತ್ವ ಕೊಡಲಾಗಿದೆ. ದಂಪತಿಗಳ ಚಿಂತನೆಯ ಆಳ ಹರವುಗಳಿಗೆ ಅಂತ್ಯವಿಲ್ಲವೆಂಬುದನ್ನು ಸಾಂಕೇತಿಕವಾಗಿ ಬಿಂಬಿಸಲಾಗಿದೆ.

**ವಿರಹದಲ್ಲಿರುವ ಮಹಿಳೆ : ೧೯೮೧**

ಚಾರ್ಕೋಲ್ ವರ್ಣದಿಂದ ರಚಿಸಿದ ಈ ಕಲಾಕೃತಿಯಲ್ಲಿ ನಗ್ನವಾಗಿರುವ ಮಹಿಳೆ ಇದ್ದಾಳೆ. ವಿರಹದಲ್ಲಿ ಮೈಮರೆತ ಸ್ತ್ರೀಯು ತನ್ನನ್ನೆ ತಾನು ಮರೆತು ಕುಳಿತಿರುವ ಭಂಗಿ ಇದಾಗಿದೆ. ಯೌವ್ವನದಲ್ಲಿ ಸಾಮಾನ್ಯವಾಗಿರುವ ತುಡಿತಗಳು, ವಿರಹ ಬಾವವು ಇಲ್ಲಿ

ವ್ಯಕ್ತವಾಗಿದೆ. ಪುರುಷ ಮಿಲನದ ಬಯಕೆಯಲ್ಲಿ ಅವಿತಿರುವ ಅವಳ ಭಾವವು ಲಜ್ಜೆಯನ್ನು ಮೆಟ್ಟನಿಂತಂತಿದೆ. ಅವಳ ಭಾವಲಾವಣ್ಯ ತೀರ ವಿಡಂಬನಾತ್ಮಕವಾಗಿದೆ. ಆಕೃತಿಯ ಮುಖವು ಅರ್ಧದಷ್ಟು ಚಿತ್ರಿಸಿದ್ದು ರೂಪಕ್ಕೆ ಯಾವುದೇ ಬರವಿಲ್ಲದಂತೆ ವೈಭವೀಕರಿಸಲಾಗಿದೆ. ಚಿತ್ರವು ಅಂಗ ರಚನಾ ಶಾಸ್ತ್ರವನ್ನು ಹೊರತುಪಡಿಸಿದಂತಿದ್ದು, ವೈಯಕ್ತಿಕ ಶೈಲಿಯನ್ನು ಪ್ರತಿನಿಧಿಸುತ್ತದೆ.

**ಭಾವಚಿತ್ರ : ೧೯೮೨**

ಎಂ. ಬಿ. ಪಾಟೀಲರು ಐವತ್ತರ ಆಸುಪಾಸಿನ ವೃದ್ಧ ವ್ಯಕ್ತಿಗಳನ್ನು ಭಾವಚಿತ್ರಕ್ಕೆ ಹೆಚ್ಚಾಗಿ ಬಳಸಿರುವುದು ಕಂಡು ಬರುತ್ತದೆ. ಈ ವ್ಯಕ್ತಿಚಿತ್ರವೂ ತುಂಬಾ ಸೂಕ್ಷ್ಮ ಹಾಗೂ ನಯ ನಾಜೂಕಿನ ಕಲಾಕೃತಿಯಾಗಿದೆ. ಇಲ್ಲಿಯೂ ಕೂಡ ಕುಂಚವು ನಯವಾಗಿ ಮುಖದ ಮೇಲೆಲ್ಲ ಚಲಿಸಿ ವ್ಯಕ್ತಿಯ ಆಕೃತಿಗೆ ತಕ್ಕಂತೆ ಸ್ಪಷ್ಟತೆಯನ್ನು ತಂದುಕೊಟ್ಟಿದೆ. ಮುಖದಲ್ಲಿ ಬೆಳಕಿನ ಭಾಗವೂ ಹೆಚ್ಚಾಗಿದ್ದು ವ್ಯಕ್ತಿಯ ಮುಖದಲ್ಲಿ ಮಂದಹಾಸ ಬೀರಿದೆ. ಇದಕ್ಕೆ ಹಿನ್ನೆಲೆಯಾಗಿ ನೀಲಿ ಹಸಿರು ವರ್ಣದ ಲೇಪನವಿದ್ದು ವ್ಯಕ್ತಿಯ ನಿಲುವಂಗಿಗೆ ಬಿಳಿಯ ವರ್ಣದ ಬೀಸುಗಳಿವೆ. ನೋಡುಗನಲ್ಲಿ ಸ್ಪಷ್ಟ ಕಲ್ಪನೆಯನ್ನು ಮೂಡಿಸುವಂತೆ ಚಿತ್ರದ ರಚನಾ ವಿಧಾನವಿದೆ.

**ಬಾಲಕಿಯ ಭಾವಚಿತ್ರ : ೧೯೮೨**

ಮಕ್ಕಳ ಭಾವಚಿತ್ರ ರಚಿಸುವುದು ತುಂಬಾಕಷ್ಟಕರ ಎನ್ನುವುದು ಸಾಮಾನ್ಯ ಆದರೆ ಪಾಟೀಲರು ಸುಮಾರು ಎಂಟತ್ತು ವರ್ಷದ ಬಾಲೆಯೊಬ್ಬಳನ್ನು ಬಹುಸಮರ್ಥವಾಗಿ ರಚಿಸಿರುವುದು ಇಲ್ಲಿ ಕಂಡು ಬರುತ್ತದೆ. ಮಗುವಿನ ಮುಖದಲ್ಲಿ ಬಿಳಿ ಕೆಂಪು ಹಾಗೂ ಹಳದಿ ವರ್ಣಗಳುಳ್ಳ ಕುಂಚದ ಎಳೆತಗಳಿವೆ. ಮಗುವಿನ ಭಾವನೆಗೆ ತಕ್ಕಂತೆ ಚರ್ಮದ ಹೊಳಪನ್ನು ನುಣುಪಾಗಿ ಇರುವಂತೆ ರಚಿಸಲಾಗಿದೆ.

ನೆರಳು ಬೆಳಕಿನ ಸಂಯೋಜನೆಯೂ ತುಂಬಾ ಪರಿಣಾಮ ಕಾರಿಯಾಗಿದೆ. ಮಗುವಿನಲ್ಲಿರುವ ಮುಗ್ಧತನವನ್ನು ಮಿತವಾದ ಕೆಂಪು ವರ್ಣಗಳ ಲೇಪನ ಹಾಗೂ ಕುಂಚದ ಸೂಕ್ಷ್ಮ ಎಳೆತಗಳಿಂದ ತೋರಿಸಲಾಗಿದೆ. ಅಂಗಾಂಗದ ದುಂಡುತನವನ್ನು ನೆರಳು ಬೆಳಕಿನ ಮೂಲಕ ನಯವಾಗಿ ತೋರಿಸಲಾಗಿದೆ. ಚಿತ್ರದ ಹಿನ್ನೆಲೆಯನ್ನು ನೀಲಿ ಬಣ್ಣದಿಂದ ಪೂರ್ಣಗೊಳಿಸಲಾಗಿದೆ. ಒಟ್ಟಿನಲ್ಲಿ ಮಗುವಿನ ಎಳೆಯ ಭಾವಕ್ಕೆ ಅನುಗುಣವಾದ ಎಲ್ಲ ಭಾವನೆಗಳು ಇಲ್ಲಿ ವ್ಯಕ್ತಗೊಂಡಿವೆ. ಪ್ರಸ್ತುತ ಕಲಾಕೃತಿಯಲ್ಲಿ ಬಾಲಕಿಯ ಭಾವನೆಗಳು ನೋಡುಗರ ಮನಮುಟ್ಟುವಂತೆ ಚಿತ್ರಿಸಿರುವುದು ಪಾಟೀಲರು ಮಕ್ಕಳ ಬಗೆಗೆ ಹೊಂದಿರುವ ಮಮತೆಯು ಕಾರಣವಾಗಿದೆ.

**ಅಮ್ಮನ ಮಡಿಲು : ೧೯೮೨**

ಕಲಾವಿದರು ಈ ಕೃತಿಯಲ್ಲಿ ತಮ್ಮ ಬಾಲ್ಯದ ನೆನಪನ್ನು ಕಾಡುವ ತಾಯಿ ಮಗುವಿನ ಸಂಬಧವನ್ನು ಅಭಿವ್ಯಕ್ತಿಸಿದ್ದಾರೆ. ತಾಯಿ ತನ್ನ ಮಗುವಿಗೆ ತೆರೆದೆದೆಯಿಂದ ಹಾಲನ್ನು ಕೊಡುತ್ತಲಿದ್ದಾಳೆ. ಮಗು ಆಕೆಯ ಮಡಿಲಲ್ಲಿ ವಾತ್ಸಲ್ಯದಿಂದ ನಲಿಯುತ್ತಿದೆ. ಹೆಣ್ಣಿನ ತೆರೆದ ಎದೆಯು ಯಾವುದೇ ವಿಕೃತ ಭಾವನೆಯನ್ನು ನೋಡುಗರಲ್ಲಿ ಮೂಡಿಸದೇ ಇರುವಂತೆ ಚಿತ್ರಿಸಿರುವುದು ಕಲಾವಿದರ ನೈಪುಣ್ಯವಾಗಿದೆ. ಎಳ್ಳಷ್ಟು ಕಲ್ಮಶವಿಲ್ಲದ ತಾಯಿಯ ಮಮಕಾರವು ಅನನ್ಯವಾದ ಭಾವನೆಯನ್ನು ಮೂಡಿಸುತ್ತಿದೆ. ಸಂಪ್ರದಾಯಕ ವೇಷ ಭೂಷಣಗಳಲ್ಲಿರುವ ತಾಯಿಯ ಮುಖದಲ್ಲಿ ಅಕ್ಕರೆಯ ಮಡಿಲು ತುಂಬಿ ಕೊಂಡಂತಿದೆ. ಬಣ್ಣಗಳು ಕಣ್ಣಿಗೆ ತಂಪು ನೀಡುವಂತೆ ಲೇಪಿಸಲ್ಪಟ್ಟಿವೆ. ಈ ಕಲಾಕೃತಿಯಲ್ಲಿ ಮಗು ಮತ್ತು ತಾಯಿಯ ಅವಿನಾಭಾವ ಸಂಬಂಧಗಳು ಸಾಂಕೇತಿಕವಾಗಿ ನಿರೂಪಣೆ ಗೊಂಡಿವೆ. ಇದರಲ್ಲಿ ರೇಖೆ ಮತ್ತು ವರ್ಣಗಳು ಭಾವನೆಗಳನ್ನು ಬಿಂಬಿಸುವಲ್ಲಿ ಪ್ರಮುಖ ಪಾತ್ರವಹಿಸಿವೆ.

**ತಾಯಿ ಮಗು : ೧೯೮೨**

ಈ ಕಲಾಕೃತಿಯಲ್ಲಿ ತಾಯಿ ಮಗುವಿನ ಸಂಬಂಧಗಳ ಜೊತೆಗೆ ಹುಣ್ಣಿಮೆಯ ಬೆಳದಿಂಗಳ ಭಾವನಾತ್ಮಕ ಪರಿಣಾಮವನ್ನು ಚಿತ್ರಿಸಲಾಗಿದೆ. ಈ ಚಂದ್ರನ ಬೆಳದಿಂಗಳಲ್ಲಿ ಮಕ್ಕಳು ಆಟಪಾಠಗಳಲ್ಲಿ ತೊಡಗಿಕೊಂಡಿರುವುದು ಹಿಂದಿನ ದಿನಗಳಲ್ಲಿ ಸಾಮಾನ್ಯ ಸಂಗತಿಯಾಗಿತ್ತು. ಬೆಳದಿಂಗಳಲ್ಲಿ ಮಾತ್ರ ಆಡುವ ಕೆಲವು ವಿಶಿಷ್ಟ ಆಟಗಳು ಕುತೂಹಲಕಾರಿಯಾಗಿವೆ. ಬೆಳದಿಂಗಳ ಬೆಳಕಲ್ಲಿ ಆಡುವ ಇಂತಹ ವಿಶಿಷ್ಟ ಜನಪದ ಆಟಗಳು, ಮಕ್ಕಳಲ್ಲಿ ಮುದನೀಡುತ್ತವೆ. ಅದೇ ರೀತಿ ಅಳುತ್ತಿರುವ ಮಕ್ಕಳ ಅಳುವನ್ನು ನಿಲ್ಲಿಸಲು ರಾತ್ರಿಯಲ್ಲಿ ತಾಯಿ ಬೆಳದಿಂಗಳ ಬೆಳಕಲ್ಲಿ ಚಂದಿರನನ್ನು ತೋರಿಸಿದಾಗ ಅಳು ನಿಲ್ಲಿಸಿ ನಗುತ್ತವೆ.

ಈ ಚಿತ್ರದಲ್ಲಿಯೂ ತಾಯಿಯೊಬ್ಬಳು ಬೆಳಕಲ್ಲಿ ಚಂದಿರನನ್ನು ತನ್ನ ಮಗುವಿಗೆ ತೋರಿಸುತ್ತ ಊಟ ಮಾಡಿಸುತ್ತಿದ್ದಾಳೆ. ತನ್ನ ಮಗುವನ್ನು ಎತ್ತಿಕೊಂಡು ಅಂಗಳದಲ್ಲಿ ಕುಳ್ಳಿರಿಸಿದಂತೆ ಚಿತ್ರಿಸಲಾಗಿದೆ. ಮಹಿಳೆಯು ಧರಿಸಿದ ಬಿಳಿಯ ಸೀರೆಯು ಬೆಳದಿಂಗಳಿಗೆ ಕಂಗೊಳಿಸಿದಂತೆ ಕಂಡು ಬರುತ್ತಿದೆ. ಆಕಾಶದಲ್ಲಿ ಇರುವ ಚಂದಿರನ ಬಿಂಬವನ್ನು ನೋಡುತ್ತಿರುವಂತೆ ಅದರ ಮುಖದಲ್ಲಿ ಸಂತೋಷ ನಲಿದಾಡಿದೆ. ನೀಲಿ ವರ್ಣದ ಅಸ್ಪಷ್ಟ ಕುಂಚದ ಬೀಸುಗಳು ಆಕಾಶದ ಕಲ್ಪನೆ ನೀಡಿವೆ. ಹಿಂಬದಿಯ ಪರಿಸರದಲ್ಲಿ ಬಿಳಿಯ ಚಂದಿರನನ್ನು ಸೃಷ್ಟಿಸಿ ಸಾಂಕೇತಿಸಲಾಗಿದೆ. ತಾಯಿಯ ಮುಖದಲ್ಲಿ ಸಂತೋಷ ಆನಂದೋಲ್ಲಾಸ ಉಕ್ಕುವಂತೆ ಕಂಡು ಬರುತ್ತಿದೆ.

**ಪ್ರೇಮ ಸಂದೇಶ : ೧೯೮೨**

ನಮ್ಮ ಪೌರಾಣಿಕ ಸಂದರ್ಭದಲ್ಲಿ ಪ್ರೀತಿ ಪ್ರೇಮಕ್ಕೆ ವಿವಿಧ ರೀತಿಯ ಹೂಗಳನ್ನು ಬಳಸುವಂತೆ ಪ್ರೇಮ ಸಂದೇಶ ರವಾನಿಸಲಿಕ್ಕೆ ಪ್ರಾಚೀನ ಕಾಲದಲ್ಲಿ ಸಂದೇಶವಾಹಕಗಳಾಗಿ ಪಾರಿವಾಳಗಳನ್ನು ಬಳಸಲಾಗುತ್ತಿತ್ತು. ಅದರಲ್ಲೂ ಪ್ರೇಮ ಸಂದೇಶದಲ್ಲಿ ಪ್ರೇಯಸಿ ಪ್ರಿಯಕರ ತಮ್ಮ ಬಯಕೆಗಳನ್ನು ತಿಳಿಸಲು ಪಾರಿವಾಳವನ್ನು ಬಳಸುತ್ತಿದ್ದುದು ಭಾರತೀಯರ ಪ್ರಾಚೀನ ವಿಧಾನವಾಗಿದೆ. ಈ ಕಲಾಕೃತಿಯಲ್ಲಿ ಸುಂದರವಾದ ಸ್ತ್ರೀ ಒಬ್ಬಳು ಪಾರಿವಾಳದೊಂದಿಗೆ ಸಂಭಾಷಿಸುತ್ತಿದ್ದಾಳೆ.

ಸ್ತ್ರೀ ಮುಖದಲ್ಲಿ ಭಾವೋದ್ವೇಗವು ತುಂಬಿಕೊಂಡಂತೆ ಕಂಡು ಬರುತ್ತಿದೆ. ಸಂದರ್ಭಕ್ಕೆ ತಕ್ಕಂತೆ ಆಕೃತಿಯಲ್ಲಿ ಚಲನಾ ಸ್ಥಿತಿ ಸೃಷ್ಟಿಸಲಾಗಿದೆ. ಸ್ತ್ರೀಯ ಮುಖ ಕಪ್ಪು ವರ್ಣದ್ದಾಗಿದೆ. ಅವಳ ಉಡುಪುಗಳು ಗುಲಾಬಿ ಹಾಗೂ ಬಿಳಿ ವರ್ಣದಲ್ಲಿವೆ. ಕೈಯಲ್ಲಿ ಪಕ್ಷಿಯನ್ನು ಹಿಡಿದು ನಿಂತಿರುವ ಭಂಗಿ ತುಂಬಾ ಸುಂದರವಾಗಿದೆ. ಹಿಂಬದಿಯಲ್ಲಿ ಸಂಕೇತ ರೂಪದ ನೀಲಿ ವರ್ಣದ ಗಿಡಗಳು ಕಂಡು ಬಂದಿದ್ದು ಅದಕ್ಕೆ ಹೊಂದಿಕೊಳ್ಳುವಂತೆ ಹಳದಿ ವರ್ಣದ ಲೇಪನವಿದೆ. ಈ ಪ್ರೇಮ ಸಂದೇಶವು ಸ್ತ್ರೀಯ ಯೌವ್ವನದ ತುಡಿತವನ್ನು ವ್ಯಕ್ತ ಪಡಿಸುತ್ತದೆ.

**ಪರ್ವತ ಶ್ರೇಣಿ : ೧೯೮೩**

ಪಾಟೀಲರು ಪ್ರಕೃತಿ ಸೌಂದರ್ಯವನ್ನು ವಿಶೇಷವಾಗಿ ಪರ್ವತ ಶ್ರೇಣಿಗಳ ಸಾಲುಗಳನ್ನು ಅಮೂರ್ತ ಶೈಲಿಯಲ್ಲಿ ರಚಿಸಿದ ಕಲಾಕೃತಿಯಿದು. ಜಲವರ್ಣ ತಂತ್ರ ಸಾಧ್ಯತೆಗಳನ್ನು ಸಮರ್ಥವಾಗಿ ಬಳಸಿಕೊಂಡು ರಚಿಸಿದ ಈ ಚಿತ್ರವು ಪರ್ವತಗಳ ಪರಿಸರದಲ್ಲಿ ಸಾಯಂಕಾಲದ ಸಂದರ್ಭವನ್ನು ಸೂಚಿಸುತ್ತದೆ. ಚಿತ್ರದಲ್ಲಿ ಗುಡ್ಡಗಳ ರಚನಾತಂತ್ರ ಜ್ಯಾಮಿತಿಕ ವಿನ್ಯಾಸದಿಂದ ಕೂಡಿದೆ. ಪ್ರಕೃತಿ ಚಿತ್ರದ ವ್ಯಾಕರಣವು ಇಲ್ಲಿ ಕಂಡು ಬರುವುದಿಲ್ಲ. ಯಥಾದರ್ಶನ ಸೇರಿದಂತೆ ವರ್ಣಗಳ ಬಳಕೆಯು ವಿಶಿಷ್ಟವಾಗಿ ಬಳಸಿಕೊಂಡು ರಚಿಸಿದ ತಂತ್ರ ಕೌಶಲ್ಯದ ಉತ್ತಮ ಪ್ರಯೋಗವಾಗಿದೆ. ಇದರಲ್ಲಿ ಪರ್ವತ ಶ್ರೇಣಿಯ ಸುಂದರ ನೋಟ ಅಲ್ಲಿನ ಗಿಡಮರಗಳು ಮತ್ತು ಕಲ್ಲುಬಂಡೆಗಳು ಸಾಂಕೇತಿಕವಾಗಿ ಮೂಡಿವೆ. ಇದು ಅಮೂರ್ತ ಶೈಲಿಯಲ್ಲಿದ್ದು, ಪ್ರತಿಯೊಂದು ಸಾಂಕೇತಿಕವಾಗಿ ನಿರೂಪಣೆಗೊಂಡಿದ್ದು, ಸ್ಪಷ್ಟವಾದ ಆಕಾರಗಳು ಗೋಚರಿಸುವುದಿಲ್ಲ. ವರ್ಣಗಳ ಮೂಲಕ, ರೇಖೆಗಳ ಮೂಲಕ ಮತ್ತು ಮೈವಳಿಕೆಯ ಮೂಲಕ ಅಗಾಧ ಪರಿಣಾಮವನ್ನು ಸೃಷ್ಟಿಸಿರುವ ಪಾಟೀಲರ ಪ್ರಬುದ್ಧತೆ ಇಲ್ಲಿ ಕಂಡು ಬರುತ್ತದೆ.

**ನಿಸರ್ಗ ಚಿತ್ರ : ೧೯೮೩**

ಈ ಚಿತ್ರದಲ್ಲಿ ಜಲ ವರ್ಣಗಳು ತೀವ್ರ ವೇಗದ ಬಳಕೆಗೆ ಒಳಪಟ್ಟಿವೆ. ಕಲಾವಿದರು ಅಂತರಾಳದ ಅನುಭವವನ್ನು ಪ್ರಕೃತಿಯ ಹಿನ್ನೆಲೆಯಲ್ಲಿ ಬಿಂಬಿಸಿದ್ದಾರೆ. ಅಮೂರ್ತ ಆಕಾರಗಳಲ್ಲಿ ರಚಿಸಿರುವ ಈ ಕೃತಿಯುಲ್ಲಿ ಮರದ ರೆಂಬೆಕೊಂಬೆಗಳ ಮೇಲೆ ಬಿದ್ದಂತಹ ಬೆಳಕು ಪ್ರತಿಫಲಿತವಾಗುತ್ತಲಿದೆ. ರೇಖೆಗಳಿಗೆ ಪ್ರಾಮುಖ್ಯತೆಯನ್ನು ಇಲ್ಲಿ ಕೊಡಲಾಗಿದೆ. ನಿಸರ್ಗ ಇದು ಗಮನಾರ್ಹ ಕೃತಿಯಾಗಿದ್ದು ಪರಿಸರ ಕಾಳಜಿ ಹಾಗೂ ಸೌಂದರ್ಯ ಪ್ರಜ್ಞೆಯನ್ನು ಬಿಂಬಿಸುತ್ತದೆ. ಪರಿಸರ ಮಾನವನಿಗೆ ಸೌಂದರ್ಯಪ್ರಜ್ಞೆ ವರ್ಣಗಳ ಸಂವೇದನೆ ಸೃಷ್ಟಿ ಸೊಬಗನ್ನು ಸವಿಯುವಲ್ಲಿ ತರಬೇತಿ ಕೊಡುತ್ತದೆ.

ಮನುಷ್ಯರ ವರ್ಣಮಯ ಬದುಕನ್ನು ರೂಪಿಸುವಲ್ಲಿ ನಿಸರ್ಗದ ಪಾತ್ರ ಮುಖ್ಯವಾಗಿದೆ. ಈ ಹಿನ್ನೆಲೆಯಿಂದಲೇ ಪ್ರಸ್ತುತ ಚಿತ್ರ ರಚಿಸಲಾಗಿದೆ. ಅದಕ್ಕೆ ಅನುಕೂಲವಾಗುವಂತೆ ಚಿತ್ರಚನೆ ಮಾಡಲಾಗಿದ್ದು, ಮೊದಲಿಗೆ ಕಾಗದವನ್ನು ನೀರಿನಲ್ಲಿ ನೆನಸಿ ಅದು ಹಸಿ ಇರುವಾಗಲೇ ವರ್ಣಗಳನ್ನು ಲೇಪಿಸಲಾಗಿದೆ. ನೇರವಾಗಿ ನೀರಿನಲ್ಲಿ ಕುಂಚಗಳನ್ನು ಅದ್ದಿ ನಂತರ ದಟ್ಟ ವರ್ಣಗಳಲ್ಲಿ ಕುಂಚಗಳನ್ನು ಅದ್ದಿ ನೇರವಾಗಿ ಕುಂಚದಿಂದ ಬೀಸುಗಳ ಮೂಲಕ ಬಣ್ಣ ಲೇಪಿಸಿ ಚಿತ್ರಿಸಲಾಗಿದೆ.

ಹಾಳೆಯ ತೇವಾಂಶವು ಆರುವುದರೊಳಗೆ ಬೇರೆ ಬೇರೆ ವರ್ಣಗಳ ಚೆಲ್ಲಾಟದಲ್ಲಿ ಲೇಪನಮಾಡುವ ಮೂಲಕ ವರ್ಣಮಯ ಕಲಾಕೃತಿ ರೂಪಿಸಲಾಗಿದೆ. ಬೆಟ್ಟಗುಡ್ಡಗಳ ಮಧ್ಯದಲ್ಲಿ ನೀರು ಹರಿಯುತ್ತಿರುವಂತೆ ಕಂಡು ಬರುವ ಈ ಸುಂದರ ದೃಶ್ಯದಲ್ಲಿ ಆಕಾಶದಲ್ಲಿ ಮೋಡಗಳು ತುಂಬಿಕೊಂಡಂತೆ ಬಣ್ಣಗಳನ್ನು ಹರಿಸಲಾಗಿದೆ. ಜಲವರ್ಣದಿಂದ ರಚಿಸಿದ ಚಮತ್ಕಾರಿಕ ಚಿತ್ರ ಇದಾಗಿದೆ.

**ನಗರ ದೃಶ್ಯ : ೧೯೮೩**

ಅಮೂರ್ತ ಶೈಲಿಯುಲ್ಲಿ ರಚಿಸಿದ ಕಲಾಕೃತಿ ಇದಾಗಿದೆ. ಪಾಟೀಲರು ಸೃಜನಶೀಲತೆಯ ಅಭಿವ್ಯಕ್ತಿಯ ಹಿನ್ನೆಲೆಯಲ್ಲಿ ನಗರವನ್ನು ಅಮೂರ್ತವಾಗಿ ವರ್ಣಗಳ ವೈವಿಧ್ಯತೆಯಿಂದ ಚಿತ್ರಿಸಿದ್ದಾರೆ. ಕೆಂಪು ಕಂದು ಮತ್ತು ಕಪ್ಪು ವರ್ಣಗಳನ್ನು ಕುಂಚದ ಬೀಸುಗಳಿಂದ ದಪ್ಪನಾಗಿ ಲೇಪಿಸಲಾಗಿದೆ. ನಗರ ಬದುಕಿನ ಜಂಜಾಟ, ಗಲಿಬಿಲಿ, ದಟ್ಟತೆ, ಒತ್ತಡದ ಬದುಕುಗಳು ಸಾಂಕೇತಿಕವಾಗಿ ಮೂಡಿ ಬಂದಿವೆ. ವರ್ಣಲೇಪನವು ಪ್ರಖರತೆಯಿಂದ ಕೂಡಿದೆ. ಹಿನ್ನೆಲೆಯಲ್ಲಿ ನಿಸರ್ಗದ ಸೊಬಗನ್ನು ಕಲಾಕೃತಿಯಲ್ಲಿ ತರುವ ಪ್ರಯತ್ನವನ್ನು

ಕಲಾವಿದರು ಮಾಡಿದ್ದಾರೆ. ಕೇವಲ ವರ್ಣದ ಬೀಸುಗಳಿಂದ ಸೌಂದರ್ಯಾನುಭೂತಿಯನ್ನು ಸೆರೆಹಿಡಿಯಲಾಗಿದೆ. ನೀಲಿ ಬಿಳಿ ಹಳದಿ ಕಂದು ವರ್ಣಗಳು ಪ್ರಮುಖವಾಗಿ ಬಳಕೆಯಾಗಿದ್ದು, ದೂರ ಸಮೀಪಗಳ ನಿಯಮ, ನೈಜತೆ, ಸಾದೃಶ್ಯತೆಗಳಿಂದ ಮುಕ್ತವಾಗಿರುವಂತಿವೆ. ಈ ಕಲಾಕೃತಿಯಲ್ಲಿ ಅಲ್ಲಲ್ಲಿ ಚಿಕ್ಕ ಆಕೃತಿಯ ರೂಪದಲ್ಲಿ ಬಿಳಿಯ ರೇಖೆಗಳ ಪಟ್ಟಿಕೆಗಳು ಆಕರ್ಷಕವಾಗಿವೆ.

**ಸಂತಾಪ : ೧೯೮೩**

ಈ ಕೃತಿಯಲ್ಲಿ ಮಹಿಳೆಯರಿಬ್ಬರು ಪರಸ್ಪರ ದುಖಃ ಹಂಚಿಕೊಳ್ಳುತ್ತ ಸಂತಾಪ ವ್ಯಕ್ತಪಡಿಸುತ್ತಿರುವ ಸನ್ನಿವೇಶವನ್ನು ಚಿತ್ರಿಸಲಾಗಿದೆ. ಕಾಗದದ ಮೇಲೆ ರೇಖಾ ವಿಧಾನದಿಂದ ಚಿತ್ರಿಸಿದೆ. ಆಕೃತಿಯ ಹಿನ್ನೆಲೆಯನ್ನು ಇಂಡಿಯನ್ ಇಂಕ್ ನಿಂದ ಮೂಡಿಬಂದಿರುವ ದೃಶ್ಯವು ತುಂಬಾ ಸೊಗಸಾಗಿದೆ. ಮನೆಯಲ್ಲಿ ಯಾವುದೋ ದುಖಃದ ಸನ್ನಿವೇಶದಿಂದಾಗಿ ಒಡಲು ತುಂಬಿಕೊಂಡು ಮಾತು ಬಾರದಂತಾಗಿ ನೋವಿನಿಂದ ಪರಸ್ಪರ ಅಪ್ಪಿಕೊಂಡಿದ್ದಾರೆ.

ಒಬ್ಬಳು ಇನ್ನೊಬ್ಬಳನ್ನು ಸಮಾಧಾನ ಮಾಡುತ್ತಿರುವ ಪ್ರಸಂಗವು ಪರಿಣಾಮಕಾರಿಯಾಗಿ ಮೂಡಿಬಂದಿದೆ. ಸಂಕೇತ ಪ್ರಧಾನವಾದ ಈ ಕೃತಿಯಲ್ಲಿ ಭಾವನೆಗಳಿಗೆ ಹೆಚ್ಚಿನ ಆದ್ಯತೆ ನೀಡಲಾಗಿದೆ. ಸ್ತ್ರೀಯರಿಬ್ಬರ ದೇಹವು ರೇಖೆಗಳಿಂದ ಅಲಂಕರಿಸಲ್ಪಟ್ಟಿದೆ. ಪ್ರತಿಯೊಂದು ರೇಖೆಗಳು ಚಲನಾತ್ಮಕವಾಗಿದ್ದು ಆಕಾರಗಳು ಅಲಂಕಾರಿಕ ಶೈಲಿಯನ್ನು ಪ್ರತಿನಿಧಿಸುತ್ತವೆ. ಚಿತ್ರದ ಹಿನ್ನೆಲೆಯಲ್ಲಿ ಮಸುಕಾದ ವರ್ಣ ಲೇಪನವನ್ನು ಮಾಡುವ ಮೂಲಕ ದುಖಃವನ್ನು ಸಾಂಕೇತಿಸಲಾಗಿದೆ.

**ಮುಖವಾಡಗಳು : ೧೯೮೩**

ಕಲಾವಿದರು ತಮ್ಮ ಅಮೂರ್ತ ಶೈಲಿಯ ಕಲಾಕೃತಿಗಳಲ್ಲಿ ಹೊಸತನದ ಹೊಳಪನ್ನು ತರುವಲ್ಲಿ ತಲ್ಲೀನರಾಗಿರುವಂತೆ ಗೋಚರವಾಗುತ್ತದೆ. ಈ ಕಲಾಕೃತಿಯಲ್ಲಿ ವಿಶೇಷವಾದ ರೀತಿಯಲ್ಲಿ ತಮ್ಮ ಬಾಲ್ಯದ ದಿನಗಳನ್ನು ಮುಖವಾಡಗಳ ಮೂಲಕ ಅಮೂರ್ತವಾಗಿ ಅಭಿವ್ಯಕ್ತಿಸಿದ್ದಾರೆ ಪಾಟೀಲರು ತಮ್ಮ ಬಾಲ್ಯದ ಅನೇಕ ಘಟನೆಗಳನ್ನು ದೃಶ್ಯದ ಮೂಲಕ ಪ್ರಕಟಿಸುವ ಹವ್ಯಾಸವನ್ನು ಇಟ್ಟುಕೊಂಡಿದ್ದಾರೆ. ಈ ಕಲಾಕೃತಿಯೂ ಅಂತಹ ಒಂದು ಪ್ರಯತ್ನವಾಗಿದೆ. ಕಲಾಕೃತಿಯಲ್ಲಿ ಅಸ್ಪಷ್ಟವಾದ ಕುಂಚದ ಬೀಸುಗಳು ವರ್ಣ ಸಂಯೋಜನೆಗಳು ಅಮೂರ್ತ ಆಕಾರಗಳು ಸಾಂಕೇತಿಕವಾಗಿ ಅವರ ಬಾಲ್ಯದ ನೆನಪನ್ನು ಮರುಕಳಿಸುವಂತೆ ಮಾಡಿವೆ. ಅವರ ಆಟ, ಪಾಠ, ನೋಟ, ಸ್ನೇಹ, ಮಮತೆ, ಕರುಣೆ, ಪ್ರೀತಿ ಮುಂತಾದ ವಿಷಯಗಳ ಪರಿಕಲ್ಪನೆ

ಮೂಡಿಸುವಂತೆ ಕಲಾಕೃತಿಯಲ್ಲಿ ಕೆಂಪು ಹಸಿರು, ಹಳದಿ, ನೀಲಿ, ಕಪ್ಪು, ಬಿಳಿ ಮುಂತಾದ ಬಣ್ಣಗಳಿಂದ ಆಕಾರಗಳನ್ನು ಸೃಷ್ಟಿಸಲಾಗಿದೆ. ಓರೆಯಾಗಿ ಕುಳಿತಿರುವಂತೆ ಮುಖವಾಡವನ್ನು ಧರಿಸಿರುವಂತೆ ಬಾಲಕನಂತೆ ಹಾಗೂ ಪಕ್ಕದಲ್ಲಿ ಆಟೋಟದ ಸಾಮಗ್ರಿಗಳಿದ್ದು ಮೈಬಣ್ಣಕ್ಕೆ ಹುಲಿಯ ಬಿಳಿಯ ಪಟ್ಟಿಕೆಗಳನ್ನು ಎಳೆದಿರುವಂತೆ ಚಿತ್ರಿಸಲಾಗಿದೆ. ಚಿತ್ರಕ್ಕೆ ಹಿನ್ನಲೆಯಾಗಿ ನೀಲಿ ಮತ್ತು ಕಪ್ಪು ವರ್ಣದ ದೊಡ್ಡ ಪಟ್ಟಿಕೆಗಳು ಕಳೆಯನ್ನು ತಂದಿವೆ. ಇಲ್ಲಿನ ಪ್ರಧಾನ ಆಕೃತಿಗಳೆಲ್ಲವು ಅವಕಾಶವನ್ನು ಪೂರ್ಣವಾಗಿ ಬಳಸಿಕೊಂಡಿರುವುದು ತುಂಬಾ ಪರಿಣಾಮಕಾರಿಯಾಗಿದೆ.

**ಗ್ರಾಮೀಣ ಪರಂಪರೆ : ೧೯೮೩**

ನಗರ ಸಂಸ್ಕೃತಿಗೆ ಹಳ್ಳಿ ಪರಂಪರೆಗಳೇ ಮೂಲಾಧಾರವಾಗಿವೆ. ಗ್ರಾಮೀಣ ಜನಪದ ಸಂಸ್ಕೃತಿಗಳು ಇಂದಿಗೂ ತಮ್ಮ ವಿಶಿಷ್ಟತೆಗಳಿಂದಾಗಿ ಮಹತ್ವ ಪಡೆದುಕೊಂಡಿವೆ. ಅಂತಹ ಗ್ರಾಮೀಣ ಪ್ರದೇಶದಲ್ಲಿ ಜನಿಸಿದ ಪಾಟೀಲರು ಗ್ರಾಮ ಜೀವನ ಶೈಲಿಯಲ್ಲಿ ಅನೇಕ ಕೃತಿಗಳನ್ನು ರಚಿಸಿದ್ದಾರೆ. ಹೆಚ್ಚಾಗಿ ಸ್ತ್ರೀಯರ ಚಿತ್ರಗಳ ಮೂಲಕ ಹಳ್ಳಿ ಸಂಸ್ಕೃತಿಯನ್ನು ಬಿಂಬಿಸಿರುವ ಇವರು ಈ ಚಿತ್ರದಲ್ಲಿಯೂ ಅಂತಹ ಪ್ರಯತ್ನ ಮಾಡಿದ್ದಾರೆ. ಪ್ರಸ್ತುತ ಚಿತ್ರಕಲಾಕೃತಿಯಲ್ಲಿ ಇಬ್ಬರು ಸ್ತ್ರೀಯರು ಗ್ರಾಮ ಪರಿಸರದಲ್ಲಿ ಚಿತ್ರಿಸಲ್ಪಟ್ಟಿದ್ದಾರೆ.

ಸ್ತ್ರೀಯರಿಬ್ಬರೂ ಪರಸ್ಪರ ಒಬ್ಬರನ್ನೊಬ್ಬರು ನೋಡುತ್ತಾ ಚರ್ಚೆಯಲ್ಲಿರುವಂತೆ ಕಂಡು ಬರುತ್ತದೆ. ಗ್ರಾಮೀಣ ಸಂಸ್ಕೃತಿಯನ್ನು ಬಿಂಬಿಸುವ ವೇಷಭೂಷಣಗಳು, ರೂಪುರೇಷಗಳು ಇಲ್ಲಿವೆ. ಸ್ತ್ರೀಯರ ಮೈಬಣ್ಣ ತಿಳು ಬಿಳುಪಿನಿಂದ ಕೂಡಿದ್ದು ಆಕೃತಿಗೆ ತಕ್ಕಂತೆ ಧರಿಸಿರುವ ಉಡುಪುಗಳನ್ನು ಗಾಢವಾದ ಬಣ್ಣಗಳಿಂದ ಚಿತ್ರಿಸಲಾಗಿದೆ. ಕುಂಚದ ರಭಸದ ಎಳೆತಗಳು ಇಲ್ಲಿ ಪ್ರಭಾವಬೀರಿವೆ. ಕಂದು, ಹಳದಿ ವರ್ಣದ ಲೇಪನವು ಚಿತ್ರಕ್ಕೆ ನೈಜವಾದ ಗೋಡೆಯ ಕಲ್ಪನೆ ಕೊಡುವಂತೆ ಪ್ರತಿಬಿಂಬಿತಗೊಂಡಿದೆ.

**ಚಿಂತೆ : ೧೯೮೮**

ರೈತನ ಬದುಕು ಇಂದಿನ ಜಾಗತಿಕರಣಕ್ಕೆ ಸಿಲುಕಿ ನಿರ್ನಾಮವಾಗುತ್ತಿದೆ. ಹಿಂದಿನ ಹಳ್ಳಿ ಬದುಕಿನಲ್ಲಿ ರೈತನಿಗಿದ್ದ ಮಹತ್ವ ಇಂದು ಕಡಿಮೆಯಾಗುತ್ತಲಿದೆ. ಬೇರೆ ಬೇರೆ ಕಾರಣಗಳ ಜೊತೆಗೆ ಬೆಳೆ ಹಾನಿ ಪ್ರಸಂಗಗಳಿಂದ ರೈತರು ನೊಂದುಕೊಳ್ಳುತ್ತಿದ್ದಾರೆ. ಕೆಲವರು ಆತ್ಮಹತ್ಯೆಯಂತಹ ಕ್ರಮಗಳಿಗೂ ಮುಂದಾಗುತ್ತಿದ್ದಾರೆ. ಈ ಕೃತಿಯಲ್ಲಿ ಹಳ್ಳಿಯ ಮನೆಯೊಂದರಲ್ಲಿ ವ್ಯಕ್ತಿಯೋರ್ವನು ಕುಳಿತಿದ್ದು ಎರಡು ಬದಿಯ ಗೋಡೆಗಳ ಮಧ್ಯ ಕುಳಿತು ಯೋಚಿಸುವಂತೆ ಚಿತ್ರಿಸಲಾಗಿದೆ. ಮುಂಬದಿಯಲ್ಲಿ ಒಂದು ಪುಟ್ಟಿಯಿದೆ. ಕಂದು ವರ್ಣದ ವ್ಯಕ್ತಿಗೆ ಬಿಳಿಯ ರುಮಾಲು ಬಿಳಿ

ಪಂಚೆ  ಚಿತ್ರಿಸಲಾಗಿದೆ. ವ್ಯಕ್ತಿಯ ಮುಂಭಾಗದ ಗೋಡೆಗೆ ಕೆಂಪು ವರ್ಣವಿದೆ. ಅದು ಆತನ ಚಿಂತಾಜನಕ ಸ್ಥಿತಿಯನ್ನು ಸಾಂಕೇತಿಸುತ್ತದೆ. ಉಳಿದಂತೆ ಕುಳಿತ ವ್ಯಕ್ತಿಯ ಮುಖದಲ್ಲಿನ ಭಾವನೆ, ವರ್ಣ ಸಂಯೋಜನೆ, ರೇಖಾ ವಿನ್ಯಾಸಗಳು ಮನಸೆಳೆಯುತ್ತವೆ. ಇಂದಿನ ರೈತ ಬದುಕಿನ ಪರಿಕಲ್ಪನೆಯನ್ನು ಇದು ಬಿಂಬಿಸುತ್ತದೆ.

**ಹಳ್ಳಿಯ ಮಹಿಳೆ : ೧೯೮೮**

ಜನಪದ ಶೈಲಿಯ ಚಿತ್ರಗಳು ಪಾಟೀಲರಿಗೆ ಹಳ್ಳಿ ಜೀವನದ ಜೊತೆ ಇರುವ ಅನನ್ಯತೆಯನ್ನು ಸೂಚಿಸುತ್ತವೆ. ಗ್ರಾಮೀಣ ಪ್ರದೇಶದ ಹಿನ್ನೆಲೆಯು ಅವರ ಹೆಚ್ಚಿನ ಕಲಾಕೃತಿಗಳ ಮೂಲ ತಿರುಳಾಗಿದೆ. ಈ ಕಲಾಕೃತಿಯಲ್ಲಿ ಮಹಿಳೆಯೊಬ್ಬಳು ಹಳ್ಳಿಯ ಸಾಂಪ್ರದಾಯಿಕ ವೇಷಭೂಷಣಗಳನ್ನು ತೊಟ್ಟುಕೊಂಡು ಯೋಚನಾಮಗ್ನಳಾಗಿ ಕುಳಿತಿದ್ದಾಳೆ. ಆಕೆಯ ಮುಖದಲ್ಲಿ ಭಾವನೆಗಳು ಮಡುಗಟ್ಟಿವೆ. ಕುಳಿತ ಚಿಂತನಾ ಶೀಲಳಾಗಿರುವಂತಹ ಭಾವವು ಆಕರ್ಷಕವಾಗಿದೆ. ಮಹಿಳೆಯ ಯೋಚನಾ ಲಹರಿಯನ್ನು ಹಲವು ರೀತಿಯಲ್ಲಿ ಬಿಂಬಿಸಲು ಕಲಾವಿದ ಪ್ರಯತ್ನಿಸಿರುವಂತಿದೆ. ಸ್ತ್ರೀಗೆ ಲೇಪಿಸಿರುವ ಬಣ್ಣವು ಸಹಜವಾದ ಚರ್ಮದ ಮೆರಗುತಂದಿದೆ. ತಲೆಯ ಮೇಲೆ ಸೆರಗು ಹೊತ್ತು ಕುಳಿತ ಸ್ತ್ರೀಯು ತುಂಬಾ ಭಾವಪರವಶಳಾಗಿರುವಂತೆ ಚಿತ್ರಿಸಲಾಗಿದೆ. ಹಿನ್ನೆಲೆಯಲ್ಲಿ ಬಿಳಿ ಬಣ್ಣದ ವಸ್ತ್ರವನ್ನು ಹಗ್ಗಕ್ಕೆ ನೇತುಬಿಡಲಾಗಿದೆ. ಮನೆಯ ಮುಂಬಾಗಿಲಲ್ಲಿ ಮಹಿಳೆಯನ್ನು ಚಿತ್ರಿಸುವ ಮೂಲಕ ಚಿಂತನೆಗೆ ಭಿನ್ನ ಆಯಾಮ ದೊರೆಕಿಸಿ ಕೊಡುವ ಪ್ರಯತ್ನ ಇಲ್ಲಿ ಕಂಡುಬರುತ್ತದೆ.

**ಕಾಗೆ : ೧೯೮೮**

ಪಾಟೀಲರ ದೃಷ್ಟಿಯ ಸೃಷ್ಟಿಕ್ರಿಯೆಯ ಹರವು ತುಂಬಾ ವಿಶಿಷ್ಟವಾದುದ್ದು ವಿಶಾಲವೂ ಆಗಿದೆ. ಕಾರಣ ಚಿಕ್ಕ ಚಿಕ್ಕ ಪ್ರಾಣಿ, ಪಕ್ಷಿ ಮತ್ತು ಕ್ರಿಮಿ ಕೀಟಗಳನ್ನು ಕಲಾಕೃತಿಯಾಗಿ ರೂಪಿಸಬಲ್ಲರು ಎಂಬುದಕ್ಕೆ ಈ ಚಿತ್ರ ನಿದರ್ಶನವಾಗಿದೆ. ಈ ಕಲಾಕೃತಿ ಶುಭ ಮತ್ತು ಅಶುಭ ಸಂಕೇತಗಳನ್ನು ಹೇಗೆ ಪ್ರತಿನಿಧಿಸುತ್ತದೆ ಎಂಬುದನ್ನು ಸಂಕೇತಗಳ ಮೂಲಕ ತೋರಿಸಲಾಗಿದೆ. ಪಕ್ಷಿ ಸಂಕುಲದಲ್ಲಿ ಕಾಗೆ ಸಂಪ್ರದಾಯಕವಾಗಿ ಮೂಢನಂಬಿಕೆಯ ಮಧ್ಯ ತನ್ನನ್ನು ಸಿಕ್ಕಿಸಿಕೊಂಡಂತಿದೆ. ಕಪ್ಪು ವರ್ಣದ ಕಾಗೆಯು ಅಶುಭವೆಂದೇ ಕೆಲವರ ಅಭಿಪ್ರಾಯವಾದರೆ ಅದರ ಕೂಗು ಶುಭಕ್ಕೆ ಸಂಕೇತವೆಂಬಂತೆ ವಿಶೇಷತೆಯನ್ನು ಸೂಚಿಸಲಾಗುತ್ತದೆ. ಸುದ್ದಿಯ ಮೂಲಕ್ಕೆ ಕೂಡ ಕಾಗೆಯ ಕೂಗನ್ನು ಸಂಕೇತಿಸಲಾಗಿದೆ. ಮನೆಗೆ ಯಾರಾದರೂ ನೆಂಟರು ಬರುವರೆಂಬ ಸೂಚನೆಯನ್ನು ಕಾಗೆ ನೀಡುತ್ತದೆ ಎನ್ನುತ್ತಾರೆ. ಕಾಗೆಯು ಮನೆಯೆ ಮುಂದೆ

ಕುಳಿತು ಜೋರಾಗಿ ಕೂಗಿದಾಗ ಶುಭವಾಗುತ್ತದೆ ಎನ್ನುತ್ತಾರೆ. ಈ ರೀತಿಯ ಪಾರಂಪರಿಕ ನಂಬಿಕೆಗಳು ಗ್ರಾಮೀಣ ಭಾಗದಲ್ಲಿ ಇಂದಿಗೂ ಉಳಿದುಕೊಂಡಿವೆ. ಕಾಗೆಯಲ್ಲಿ ಕಪ್ಪು ವರ್ಣ ಸಾಮಾನ್ಯವಾದರೂ ಕೆಲವು ಕಡೆಗೆ ಬಿಳಿಕಾಗೆಗಳು ಅಪರೂಪವಾಗಿ ಕಂಡು ಬರುತ್ತವೆ. ಇಲ್ಲಿ ಕಾಗೆಯನ್ನು ಕಪ್ಪು ಬಣ್ಣದಿಂದ ಚಿತ್ರಿಸಲಾಗಿದೆ. ಆದರೆ ಅಲ್ಲಲ್ಲಿ ಕೆಂಪು ವರ್ಣದಿಂದ ಲೇಪಿಸಿದ್ದಾರೆ. ಕಾಗೆಯ ದೇಹ ವಿನ್ಯಾಸವು ಜ್ಯಾಮಿತಿಕ ರೀತಿಯಲ್ಲಿ ಚಿತ್ರಣಗೊಂಡಿದೆ. ಇದು ಕಲಾವಿದರ ಸೃಜನಶೀಲ ಪ್ರವೃತ್ತಿಯನ್ನು ಪ್ರತಿನಿಧಿಸುತ್ತದೆ. ಹಿಂಬದಿಯಲ್ಲಿ ನೀಲಿ ಮತ್ತು ಹಳದಿ ವರ್ಣಗಳಿಂದ ಭೂಮಿಯ ಆಕಾರವನ್ನು ಚಿತ್ರಿಸಲಾಗಿದೆ.

**ಜೆ. ಎಂ. ಎಸ್. ಮಣಿ ಭಾವಚಿತ್ರ : ೧೯೮೪**

ಪಾಟೀಲರು ವಿವಿಧ ಭಾವ ಭಂಗಿಯಲ್ಲಿ ಜನರ ಭಾವಚಿತ್ರಗಳನ್ನು ರಚಿಸಿ ಸಿದ್ಧಹಸ್ತರಾಗಿದ್ದಾರೆ. ಪಾಶ್ಚಿಮಾತ್ಯ ಶೈಲಿಯ ರಚನಾತಂತ್ರವನ್ನು ನೆನಪಿಸುವ ಈ ಭಾವಚಿತ್ರವು ಕರ್ನಾಟಕದ ಖ್ಯಾತ ಕಲಾವಿದರಾದ ಜೆ. ಎಂ. ಎಸ್. ಮಣಿಯವರದಾಗಿದೆ. ಈ ಕಲಾಕೃತಿಯ ಮುಖದಲ್ಲೆಲ್ಲ ಹಳದಿ, ಕೆಂಪು ಹಸಿರು ವರ್ಣಗಳು ಪರಸ್ಪರ ಸಮ್ಮಿಲನಗೊಂಡು ಆಕೃತಿಗೆ ಮೆರಗನ್ನು ತಂದಿವೆ. ತೈಲವರ್ಣದ ಸಂಯೋಜನಾತಂತ್ರವು ಕುಂಚದ ಬಿರುಸಿನ ಬೀಸುಗಳ ಪರಿಣಾಮದಿಂದ ಮೂಡಿಬಂದಂತೆ ಗೋಚರಿಸುತ್ತವೆ. ಕಲಾವಿದರ ಕುರಚಲು ಮೀಸೆ ಹಾಗೂ ಕನ್ನಡಕ, ತಲೆಯ ಮೇಲಿನ ಟೊಪ್ಪಿಗೆ ಎಲ್ಲವು ಕಲಾವಿದರ ಅನುಭವದ ಆಳವನ್ನು ನಿರೂಪಿಸುವಂತೆ ರಚನೆಗೊಂಡಿದೆ. ರೂಪದರ್ಶಿಯ ಮುಖವರ್ಣ ಮತ್ತು ಇಡೀ ಟೊಪ್ಪಿಗೆ ಹಾಗೂ ಧರಿಸಿರುವ ಅಂಗಿಯನ್ನು ಕೂಡ ಹಳದಿ ವರ್ಣದ ನಿರ್ವಹಣೆಯಲ್ಲಿ ಸುಂದರವಾಗಿ ಪೂರ್ಣಗೊಳಿಸಲಾಗಿದೆ. ತೀವ್ರ ಸ್ವರೂಪದ ಬಿರುಸುತನವನ್ನು ಹೊಂದಿದ್ದರೂ ಕೂಡಾ ಆಕೃತಿಗೆ ಯಾವುದೇ ರೀತಿಯ ಭಂಗವಿಲ್ಲ.

**ಭಾವಚಿತ್ರ : ೧೯೮೪**

ಈ ಭಾವಚಿತ್ರವು ಅಪ್ಪಟ ಅಕಾಡೆಮಿಕ್ ಶೈಲಿಯ ನೆಲೆಯಲ್ಲಿರುವುದು. ಮುಖದ ದುಂಡತನಕ್ಕೆ ತಕ್ಕಂತೆ ನಯ ನಾಜೂಕಾಗಿ ಚಲಿಸಿದ ಕುಂಚದ ಬೀಸುಗಳು ಪರಿಣಾಮಕಾರಿಯಾಗಿವೆ. ರೂಪದರ್ಶಿಯ ಮುಖವು ತಿಳಿ ಹಳದಿ ವರ್ಣದಿಂದ ನಿರ್ವಹಿಸಿದ್ದು, ಚರ್ಮದ ಹೊಳಪು ಇಲ್ಲಿನ ಚಿತ್ರದ ಭಾವಕ್ಕೆ ಮೆರಗನ್ನು ತಂದು ಕೊಟ್ಟಿದೆ. ರೂಪದರ್ಶಿಯ ಮಾಟಕ್ಕೆ ತಕ್ಕಂತೆ ತೆಳುವಾದ ವರ್ಣದ ಹಿನ್ನೆಲೆಯನ್ನು ದುಡಿಸಿಕೊಂಡಿದ್ದಾರೆ. ಈ ಕಲಾಕೃತಿಯು ಅರೆಬರೆ ಎನ್ನುವಂತೆ ರಚನೆಯಾಗಿದೆ. ಕಲಾಕೃತಿಯ ಒಟ್ಟಾರೆ ವರ್ಣ ಲೇಪನವು ತೆಳುವಾಗಿದೆ.

**ವ್ಯಕ್ತಿ ಭಾವಚಿತ್ರ : ೧೯೮೫**

ಜಲವರ್ಣದ ಪಾರದರ್ಶಕ ತಂತ್ರವನ್ನು ಅಳವಡಿಸಿದ ಈ ಭಾವಚಿತ್ರದಲ್ಲಿ ವರ್ಣಗಳ ಸಂಯೋಜನೆಯು ಅತ್ಯಂತ ಮನೋಜ್ಞವಾಗಿ ಮೂಡಿಬಂದಿದೆ. ವರ್ಣಗಳು ಒಂದರ ಮೇಲೊಂದರಂತೆ ಲೇಪಿಸಲ್ಪಟ್ಟಿವೆ. ನೀರಿನಲ್ಲಿ ಅದ್ದಿದ ಕುಂಚವು ಮುಖದ ಮೇಲೆಲ್ಲ ಹರಿದಾಡಿದಂತೆ ಲೇಪಿಸಲಾಗಿದೆ ಪ್ರಯೋಗದ ದೃಷ್ಟಿಯಿಂದ ಮಹತ್ವದ ಕೃತಿ ಇದಾಗಿದೆ. ರೂಪದರ್ಶಿಯ ಮುಖದ ಭಾವನೆಗೆ ತಕ್ಕಂತೆ ವೈವಿಧ್ಯಮಯವಾದ ವರ್ಣಗಳನ್ನು ಬಳಸಲಾಗಿದೆ. ಹಳದಿ, ಕೆಂಪು, ನೀಲಿ ವರ್ಣಗಳು ಪ್ರಮುಖವಾಗಿ ಬಳಕೆಯಾಗಿವೆ. ರೂಪದರ್ಶಿಯ ರೂಪ ಲಾವಣ್ಯದ ನೈಜತೆಯನ್ನು ತರುವಂತೆ ತಂತ್ರಗಾರಿಕೆ ಬಳಸಿಕೊಳ್ಳಲಾಗಿದೆ.

**ಭಾವಚಿತ್ರ : ೧೯೮೫**

ವ್ಯಕ್ತಿಯೊಬ್ಬನ ಭಾವಚಿತ್ರವನ್ನು ಎದೆ ಮಟ್ಟದಲ್ಲಿ ಚಿತ್ರಿಸಲಾಗಿದೆ. ಬಹಳ ವೇಗವಾಗಿ ರಚನೆ ಮಾಡಿದ ಈ ಕಲಾಕೃತಿಯಲ್ಲಿ ಕುಂಚದ ಎಳೆತಗಳೇ ಅದರ ಕಲಾತ್ಮಕತೆಯನ್ನು ಹೆಚ್ಚಿಸಿವೆ. ಜಲವರ್ಣ ಮಾಧ್ಯಮದಿಂದ ಪಾರದರ್ಶಕ ವಿಧಾನದಲ್ಲಿ ರಚಿಸಲ್ಪಟ್ಟಿದೆ. ಸಂಯೋಜನಾತಂತ್ರ ನೆರಳು ಬೆಳಕಿನ ಪರಿಣಾಮ ರೂಪದರ್ಶಿಯ ಯಥಾವತ್ತಾದ ರೂಪವಿನ್ಯಾಸ ತಲೆಯ ಮೇಲಿನ ಕೂದಲುಗಳು ನೈಜವಾಗಿವೆ. ಇಂಡಿಯನ್ ಇಂಕ್‌ಗಳಿಂದ ಕಾಗದದ ಮೇಲೆ ಇದು ರಚನೆಯಾಗಿದೆ.

**ಭಾವಚಿತ್ರ : ೧೯೮೫**

ಭಾವಚಿತ್ರಗಳನ್ನು ಹೆಚ್ಚಾಗಿ ವ್ಯಕ್ತಿಗಳನ್ನು ಎದುರಿಗೆ ಕುಳ್ಳಿರಿಸಿಕೊಂಡು ಚಿತ್ರಿಸುವ ಪದ್ಧತಿ ಇದ್ದರೂ ಇಲ್ಲಿ ಪಾಟೀಲರು ಪ್ರಸ್ತುತ ಭಾವಚಿತ್ರವನ್ನು ಸ್ಮರಣೆಯ ಮುಖಾಂತರ ಚಿತ್ರಿಸಿದ್ದಾರೆ. ವರ್ಣಗಳ ಸಂಯೋಜನೆ, ಪಾರದರ್ಶಕ ಹಾಗೂ ವೇಗದ ಚಲನೆ ಕಲಾಕೃತಿಯಲ್ಲಿ ಗಮನ ಸೆಳೆಯುತ್ತದೆ. ಕ್ಷಿಪ್ರಗತಿಯಲ್ಲಿ ಕೇವಲ ಕುಂಚದ ರಭಸದ ಹೊಡೆತಗಳಿಂದ ರೂಪದರ್ಶಿಯ ಮುಖದ ದುಂಡುತನವನ್ನು ರೂಪಿಸಲಾಗಿದೆ. ವ್ಯಕ್ತಿಯ ನೈಜವಾದ ಚರ್ಮದ ವರ್ಣವು ತುಂಬಾ ಪರಿಣಾಮಕಾರಿಯಾಗಿ ಮೂಡಿಬಂದಿದೆ.

**ಆರ್. ಎಂ. ಹಡಪದರವರ ಭಾವಚಿತ್ರ : ೧೯೮೫**

೧೯೮೫ರಲ್ಲಿ ತೈಲವರ್ಣದಿಂದ ರಚಿತಗೊಂಡಂತಹ ಈ ಕೃತಿ ನಾಡಿನ ಖ್ಯಾತ ಕಲಾವಿದರಾದಂತಹ ಆರ್. ಎಂ. ಹಡಪದರವರದ್ದಾಗಿದೆ. ಒಮ್ಮೆ ಕೆನ್ ಕಲಾಶಾಲೆಗೆ ಪಾಟೀಲರು ವಿದ್ಯಾರ್ಥಿಗಳಿಗೆ ಪ್ರಾತ್ಯಕ್ಷಿಕೆ ನೀಡಲು ಹೋಗಿದ್ದ ಸಂದರ್ಭದಲ್ಲಿ ಒಂದು ವಿಶೇಷಕಾದಿತ್ತು. ಇಬ್ಬರು ಪ್ರಸಿದ್ಧ ಕಲಾವಿದರು ಎದುರು ಬದಿರು ಕುಳಿತುಕೊಂಡು ಭಾವಚಿತ್ರ ರಚಿಸಬೇಕಾಗಿತ್ತು.

ಆಗ ಪಾಟೀಲರ ಭಾವಚಿತ್ರವನ್ನು ಹಡಪದವರು ರಚಿಸಿದರೆ, ಹಡಪದರ ಭಾವಚಿತ್ರವನ್ನು ಪಾಟೀಲರು ರಚಿಸಿದರು. ಹೀಗೆ ಒಂದೇ ಸಂದರ್ಭದಲ್ಲಿ ಇಬ್ಬರು ಪ್ರಸಿದ್ಧ ಕಲಾವಿದರ ಭಾವಚಿತ್ರಗಳ ಪ್ರಾತ್ಯಕ್ಷಿಕೆಯನ್ನು ವೀಕ್ಷಿಸುವ ಭಾಗ್ಯ ಅಲ್ಲಿನ ವಿದ್ಯಾರ್ಥಿಗಳಿಗೆ ದೊರೆಯಿತು. ಆ ಸಂದರ್ಭದಲ್ಲಿ ರಚಿತಗೊಂಡಂತಹ ಕೃತಿ ಇದಾಗಿದೆ.

ಇಲ್ಲಿ ಎದುರು ಬದುರು ಕುಳಿತು ಚಿತ್ರಿಸುವಾಗ ವ್ಯಕ್ತಿ ಸ್ಥಿರವಾಗಿ ಕೂಡಲು ಸಾಧ್ಯವಿಲ್ಲ. ಆಗ ಕಲಾವಿದ ಹೆಚ್ಚು ವೇಗವಾಗಿ ಚಿತ್ರಿಸಬೇಕಾಗುತ್ತದೆ. ಈ ಚಿತ್ರದಲ್ಲಿ ವ್ಯಕ್ತಿಯ ಮುಖಕ್ಕಷ್ಟೇ ಮಹತ್ವ ಕೊಡದೇ ಭಾವನೆಗೂ ಮಹತ್ವ ಕೊಟ್ಟಿರುವುದನ್ನು ನಾವು ಗಮನಿಸಬಹುದು. ಓರೆಯಾಗಿರುವ ಮುಖ ತೀಕ್ಷ್ಣವಾಗಿ ಗಮನಿಸುತ್ತಿರುವ ಅವರ ದೃಷ್ಟಿ ಇವೆಲ್ಲವನ್ನು ಸುಂದರವಾಗಿ ಸೆರೆ ಹಿಡಿಯಲಾಗಿದೆ. ಮುಖದಲ್ಲಿ ಕೆಂಪು, ಕಂದು, ಹಳದಿ, ಹಸಿರು, ಬಿಳಿ, ನೀಲಿ ವರ್ಣವನ್ನು ಸೂಕ್ತ ಪ್ರಮಾಣ ಮತ್ತು ದೃಷ್ಟಿಯಿಂದ ಬಳಸಲಾಗಿದ್ದು ಈ ಕೃತಿಯು ವೇಗವಾಗಿ ರಚಿಸಿರುವುದರಿಂದ ಕುಂಚದ ಬಿರುಸಿನ ಹೊಡೆತ ಇಲ್ಲಿ ಕಾಣಬಹುದಾಗಿದೆ.

ನೆರಳು ಬೆಳಕಿನ ವಿಶಿಷ್ಟ ವಿನ್ಯಾಸವನ್ನು ಈ ಚಿತ್ರದಲ್ಲಿ ತೋರಿಸಲಾಗಿದ್ದು ಅವರು ಧರಿಸಿರುವ ನೀಲಿ ಅಂಗಿಯನ್ನು ಕೆಲವೇ ಹೊಡೆತಗಳಿಂದ ಪೂರ್ಣಗೊಳಿಸಿದ್ದನ್ನು ನಾವು ಇಲ್ಲಿ ಕಾಣಬಹುದಾಗಿದೆ ಮತ್ತು ಹಿನ್ನೆಲೆಯಾಗಿಯೂ ಅದೇ ವರ್ಣವನ್ನು ಉಪಯೋಗಿಸಿದ್ದರು ಈ ಚಿತ್ರದಲ್ಲಿ ಅಂತರವನ್ನು ತೋರಿಸಿದ್ದಾರೆ. ಹೀಗೆ ಕಲಾಕೃತಿ ಕಲಾತ್ಮಕವಾಗಿ ಮೂಡಿ ಬಂದಿರುವುದನ್ನು ಕಾಣಬಹುದಾಗಿದೆ.

**ಮಹಿಳೆಯ ಭಾವಚಿತ್ರ : ೧೯೮೫**

ಜಲವರ್ಣ ಮಾಧ್ಯಮದಲ್ಲಿ ರಚನೆಗೊಂಡ ಈ ಭಾವಚಿತ್ರವು ಒಂದು ಪ್ರಯೋಗದ ಕಲಾಕೃತಿಯಾಗಿದೆ. ಅತ್ಯಂತ ಕ್ಷಿಪ್ರಗತಿಯಲ್ಲಿ ರಚಿಸಿದ ಅಕಾಡೆಮಿಕ್ ಸತ್ವವುಳ್ಳ ಭಾವಚಿತ್ರವಿದು. ತಿಳುವಾದ ವರ್ಣದ ಬೀಸುಗಳು ಮುಖದ ವಿವರವನ್ನು ಸೂಚಿಸುತ್ತದೆ. ಒಟ್ಟು ಭಾವಚಿತ್ರ ನೇತ್ರಾನಂದಕರವಾಗಿದೆ. ರೂಪದರ್ಶಿಗೆ, ರೂಪದರ್ಶಿಯ ಮೈಬಣ್ಣಕ್ಕೆ ಅನುಗುಣವಾಗಿ ಹಿನ್ನೆಲೆಯ ವರ್ಣಗಳನ್ನು ವೈವಿಧ್ಯ ರೀತಿಯಲ್ಲಿ ದುಡಿಸಿಕೊಂಡಿದ್ದಾರೆ. ರೂಪದರ್ಶಿಯ ದೇಹ ರಚನೆ ಹಾಗೂ ಉಡುಪಿನಲ್ಲೂ ಅದೇ ವೇಗದ ಬೀಸುಗಳಿವೆ. ಭಾವಚಿತ್ರದ ದುಂಡುತನವನ್ನು ಸ್ಪಷ್ಟವಾಗಿ ತೋರಿಸುವುದು ಈ ಚಿತ್ರದ ವೈಶಿಷ್ಟವಾಗಿದೆ.

**ವ್ಯಕ್ತಿಚಿತ್ರ : ೧೯೮೫**

ಈ ಭಾವಚಿತ್ರವು ವರ್ಣಮಯ ಇಂಡಿಯನ್ ಇಂಕ್‌ನಿಂದ ಪೇಪರ ಮೇಲೆ ರಚಿಸಿದ ಕೃತಿಯಾಗಿದೆ. ಈ ಬಗೆಯ ಚಿತ್ರಕ್ಕಿಂತ ಈ ಚಿತ್ರವು ವಿಭಿನ್ನವಾಗಿ ರಚಿತಗೊಂಡಿದೆ. ಇಲ್ಲಿಯೂ ಕೂಡ ಕುಂಚದ ಬೀಸುಗಳು ವೇಗದ ಗತಿಯನ್ನು ಪಡೆದಿವೆ. ಈ ಕಲಾಕೃತಿಯು ವರ್ಣ ಸಂಯೋಜನಾ ತಂತ್ರದಲ್ಲಿ ಸೀಮಿತ ವರ್ಣಗಾರಿಕೆಯ ನಿರ್ವಹಣೆಯನ್ನು ಕಾಣಬಹುದಾಗಿದೆ. ಮುಖದ ಅರ್ಧಭಾಗವು ನೆರಳಿನಿಂದ ಆವರಿಸಿದ್ದು ಇನ್ನುಳಿದ ಅರ್ಧ ಭಾಗವು ಬೆಳಕಿನಿಂದ ಕೂಡಿದೆ. ನೋಡಲು ರೈತಾಪಿ ಕುಟುಂಬದ ವ್ಯಕ್ತಿಯಂತೆ ಕಾಣುವ ಈ ಚಿತ್ರದ ಭಾವಕ್ಕೆ ಹಸನ್ಮುಖತೆಯನ್ನು ತಂದುಕೊಟ್ಟಿದೆ. ರೂಪದರ್ಶಿಯ ಮಾಟಕ್ಕೆ ತಕ್ಕಂತೆ ತೆಳುವಾದ ವರ್ಣ ಹಿನ್ನೆಲೆಯನ್ನು ದುಡಿಸಿಕೊಂಡಿದ್ದಾರೆ. ರೂಪದರ್ಶಿಗೆ ತಲೆಯ ಮೇಲೆ ಇರುವ ಹಸಿರು ರುಮಾಲು ವಿವರವಾಗಿ ರಚಿಸಲ್ಪಟ್ಟಿದೆ.

**ಯೋಗಾಸನ : ೧೯೮೫**

ಮಾನವನ ಆಂತರಿಕ ಶಕ್ತಿ, ಬಾಹ್ಯ ಆರೋಗ್ಯ, ಸುಗುಣಗಳನ್ನು ವೃದ್ಧಿಸುವಲ್ಲಿ ಯೋಗಾಸನವು ಪ್ರಮುಖಪಾತ್ರವಹಿಸುತ್ತದೆ. ಪ್ರಾಚೀನ ವಿದ್ಯೆಯಾದ ಈ ಯೋಗಾಸನವನ್ನು ಕಲಾಕೃತಿಯಲ್ಲಿ ಬಳಸಿಕೊಂಡಿರುವುದು ಪಾಟೀಲರ ವೈವಿಧ್ಯತೆಯನ್ನು ಪ್ರತಿಬಿಂಬಿಸುತ್ತದೆ. ಯೋಗಸಿದ್ಧಿಯು ಪುರಾಣ, ಇತಿಹಾಸ ಕಾಲದಿಂದಲೂ ಅದರದೇ ಆದ ವಿಶೇಷವಾದ ಚೈತನ್ಯ ಶಕ್ತಿಯನ್ನು ಹೊಂದಿದೆ. ಯೋಗಾಸನ ಶೀರ್ಷಿಕೆಯ ಈ ಕಲಾಕೃತಿಯಲ್ಲಿ ಸ್ತ್ರೀಯೊಬ್ಬಳು ತಲೆ ಕೆಳಗೆ ಮಾಡಿ ಯೋಗಾಸನ ಭಂಗಿಯಲ್ಲಿ ಇರುವಂತೆ ಚಿತ್ರಿಸಲಾಗಿದೆ. ಚರ್ಮದ ವರ್ಣವು ನೀಲಿವರ್ಣದಲ್ಲಿ ಬೆಳಕಿನ ಸೂಚಕವಾಗಿ ಮೂಡಿಬಂದಿದೆ. ಅಲ್ಲಲ್ಲಿ ಬಿಳಿಯ ಹಾಳೆಯನ್ನು ಹಾಗೆ ಬಿಟ್ಟಿರುವುದು ಚಿತ್ರಕ್ಕೆ ಇನ್ನಷ್ಟು ಮೆರಗುತಂದಿದೆ. ನೇರವಾದ ಕುಂಚದ ಎಳೆತಗಳು ವೇಗದ ಗತಿಯನ್ನು ಪಡೆದುಕೊಂಡಿವೆ. ಹಿಂಬದಿಯಲ್ಲಿ ನೀಲಿ ಮತ್ತು ಹಳದಿ ವರ್ಣದ ಲೇಪನವು ದಟ್ಟವಾಗಿ ಲೇಪಿಸಲ್ಪಟ್ಟಿದೆ. ತೈಲವರ್ಣದಿಂದ ರಚಿಸಿದ ಕೃತಿ ಇದಾಗಿದೆ.

**ಮಹಿಳೆ : ೧೯೮೫**

ಈ ಕಲಾಕೃತಿಯನ್ನು ಅಮೂರ್ತ ಶೈಲಿಯಲ್ಲಿ ರಚಿಸಲಾಗಿದೆ. ಅಮೂರ್ತ ಶೈಲಿಯ ಕಲಾಕೃತಿಗಳು ವ್ಯಕ್ತಿಯ ಆಶಯಕ್ಕೆ ವಿಶೇಷವಾದ ಸೃಜನಶೀಲ ಆಯಾಮಗಳನ್ನು ತರುವ ಮೂಲಕ ನೋಡುಗನಲ್ಲಿ ವೈವಿಧ್ಯಮಯ ಕಲ್ಪನೆಗಳನ್ನು ಹುಟ್ಟಿಸುತ್ತವೆ. ಚಿತ್ರದ ದೃಶ್ಯಾನುಭವವನ್ನು ವಿಭಿನ್ನ ಗ್ರಹಿಕೆಗಳ ಮೂಲಕ ಆಸ್ವಾದಿಸುವಲ್ಲಿ ಇಂತಹ ಕಲಾಕೃತಿಗಳು

ಮಹತ್ವದ ಪಾತ್ರವಹಿಸುತ್ತವೆ. ಪ್ರಸ್ತುತ ಚಿತ್ರದಲ್ಲಿ ಮಹಿಳೆಯನ್ನು ಈ ಬಗೆಯ ಆಧುನಿಕ ಮನೋಭೂಮಿಕೆಯ ಹಿನ್ನೆಲೆಯಲ್ಲಿ ರಚನೆ ಮಾಡಲಾಗಿದೆ. ಇಲ್ಲಿ ಮಹಿಳೆಯು ಅರೆಬರೆಯಾಗಿ ಬಟ್ಟೆ ತೊಟ್ಟುಕೊಂಡಂತೆ ಚಿತ್ರಿಸಲಾಗಿದೆ. ಓರೆನೋಟ ಬೀರುತ್ತಿರುವ ಮಹಿಳೆಯು ನೀಲಿ ಉಡುಪುಗಳನ್ನು ಧರಿಸಿದ್ದಾಳೆ. ದೇಹವು ತೆಳುವಾಗಿದೆ. ಹಲವಾರು ಬಗೆಯ ಭಾವನೆಗಳು ಇಲ್ಲಿ ಅಭಿವ್ಯಕ್ತಗೊಳ್ಳುತ್ತವೆ. ಸ್ತ್ರೀರೂಪ, ಆಕೆಯ ಅಂಗಾಂಗಳಿಗೆ ಭಂಗ ಬರದಂತೆ ಆಧುನಿಕವಾಗಿರುವ ಅಮೂರ್ತರೂಪ ನೀಡಲಾಗಿದೆ. ಹಿಂಬದಿಯಲ್ಲಿ ಕೆಂಪು ಮತ್ತು ಕಂದು ವರ್ಣಗಳ ಸಂಯೋಜನೆಯು ಪ್ರಚೋದಿಸುವಂತೆ ಕಂಡು ಬರುತ್ತದೆ. ಅಮೂರ್ತ ಕೃತಿಯು ಮೂರ್ತತೆಯಡೆಗೆ ಪರಿವರ್ತನೆಗೊಳ್ಳುತ್ತಿರುವ ಶೈಲಿಯು ಇಲ್ಲಿ ಕಂಡು ಬರುತ್ತದೆ.

**ಗೃಹಿಣಿ :** ೧೯೮೫

ಈ ಚಿತ್ರದಲ್ಲಿ ಗೃಹಿಣಿಯೊಬ್ಬಳು ಮನೆಯಲ್ಲಿ ಏನೋ ಯೋಚಿಸುವಂತೆ ರಚನೆ ಮಾಡಲಾಗಿದೆ. ನಗ್ನಾಕಾರದ ಸ್ತ್ರೀದೇಹವು ರೇಖೆಗಳ ಜೀವಂತಿಕೆಯನ್ನು ನಿರೂಪಿಸುವಂತಿದೆ. ಅಂಗರಚನಾಶಾಸ್ತ್ರಕ್ಕೆ ಪೂರಕವಾಗಿ ಹಾಗೂ ಆಕೆಯ ಭಾವಕ್ಕೆ ತಕ್ಕಂತೆ ರೇಖೆಗಳು ಚಲಿಸಿದಂತೆ ಕಂಡು ಬರುತ್ತವೆ. ಕುಳಿತಿರುವ ಮಹಿಳೆ ಸಂಪ್ರದಾಯಕ ಹಿನ್ನೆಲೆಯ ಉಡುಪುಗಳನ್ನು ಧರಿಸಿದ್ದಾಳೆ. ಮನೆಯ ಒಳಾಂಗಣವನ್ನು ಪ್ರತಿಬಿಂಬಿಸುವಂತೆ ಹಿಂಭಾಗವನ್ನು ಚಿತ್ರಿಸಲಾಗಿದೆ. ರೇಖಾ ಪ್ರಧಾನವಾದ ಈ ಕೃತಿಯು ಜೀವಂತಿಕೆ ಸ್ವರೂಪವನ್ನು ಪಡೆದುಕೊಂಡಿದೆ.

**ಭಾವಚಿತ್ರ :** ೧೯೮೫

ಗ್ರಾಮೀಣರು ಆಧುನಿಕತೆಗೆ ಮಾರು ಹೋಗುತ್ತಿರುವ ಸಂಕೇತವನ್ನು ಈ ಭಾವಚಿತ್ರವು ಸಂಕೇತಿಸುತ್ತದೆ. ಇಲ್ಲಿ ಗ್ರಾಮೀಣ ಮಹಿಳೆಯೊಬ್ಬಳು ಆಧುನಿಕ ವೇಷ ಭೂಷಣಗಳಲ್ಲಿರುವಂತೆ ಚಿತ್ರಿಸಲಾಗಿದೆ. ಇದೊಂದು ಕಾಲ್ಪನಿಕ ಭಾವಚಿತ್ರವಾಗಿದೆ. ಪಾಟೀಲರು ಅನೇಕ ಭಾವಚಿತ್ರಗಳನ್ನು ಕಲ್ಪನೆಯ ಹಿನ್ನೆಲೆಯಲ್ಲಿ ರಚಿಸಿರುವುದು ಕಂಡು ಬರುತ್ತದೆ. ಅದರಲ್ಲಿ ಮಹಿಳೆಯರು, ಪುರುಷರು, ಮಕ್ಕಳು ಹೀಗೆ ವೈವಿಧ್ಯತೆ ಇದೆ. ಈ ಕಲಾಕೃತಿಯಲ್ಲಿರುವ ಮಹಿಳೆ ಗ್ರಾಮೀಣ ಮಹಿಳೆಯಂತೆ ಕಂಡರೂ ಕೂಡ ಆಧುನಿಕವಾದ ಹೇರಕಟ್ ಇದೆ. ತುಟಿಯ ಮೇಲೆ ಲಿಫ್‌ಸ್ಟಿಕ್, ಮುಖಕ್ಕೆ ಸ್ನೋ, ಪೌಡರ ಹಚ್ಚಿರುವಂತೆ ಕಂಡು ಬರುತ್ತಿದೆ. ಹಣೆಯಲ್ಲಿ ಸಂಪ್ರದಾಯಿಕ ಅಗಲವಾದ ಕುಂಕುಮವನ್ನು ಹಚ್ಚಿದ್ದಾಳೆ. ಜಲವರ್ಣ ಮಾಧ್ಯಮದ ಈ ಚಿತ್ರದಲ್ಲಿ ನೆರಳು ಬೆಳಕನ್ನು ತೋರಿಸುವಂತೆ ತಿಳಿ ವರ್ಣದ ಛಾಯೆಯನ್ನು ಮೂಡಿಸಲಾಗಿದೆ.

**ಸ್ಥಿರಚಿತ್ರ : ೧೯೮೫**

ಪಾಟೀಲರು ಭಾವಚಿತ್ರ, ವ್ಯಕ್ತಿಚಿತ್ರ, ಸಂಯೋಜನಾ ಚಿತ್ರಗಳನ್ನು ಕಾಲ್ಪನಿಕವಾಗಿ ರಚಿಸಿದಂತೆ ಕೆಲವು ಸಂದರ್ಭದಲ್ಲಿ ಸ್ಥಿರಚಿತ್ರಗಳನ್ನು ಸಹಿತ ರಚಿಸಿದ್ದಾರೆ. ಅಂತಹ ಕಾಲ್ಪನಿಕ ಸ್ಥಿರಚಿತ್ರ ಇದಾಗಿದೆ. ಇಲ್ಲಿ ಮಾನವ ನಿರ್ಮಿತ ಮತ್ತು ಪ್ರಕೃತಿ ನಿರ್ಮಿತ ವಸ್ತುಗಳನ್ನು ಸಂಯೋಜನೆಗೊಳಿಸಿಕೊಂಡು ಚಿತ್ರಿಸಲಾಗಿದೆ. ಕಾಗದದ ಮೇಲೆ ಜಲವರ್ಣದಿಂದ ಜಾರುವಿಧಾನದಲ್ಲಿ (ಸ್ಪ್ರೆಡ್ ಮೆಥೆಡ್) ರಚನೆ ಮಾಡಲಾಗಿದೆ.

ಇದೊಂದು ಸೃಜನಶೀಲ ಕಲಾಕೃತಿಯಾಗಿದ್ದು ಅರ್ಥಸಾಧ್ಯತೆಗಳನ್ನು ಹೊರಹಾಕುವ ಗುಣಾತ್ಮಕ ಅಂಶಗಳನ್ನು ಇಲ್ಲಿನ ಆಕೃತಿಗಳಲ್ಲಿ ಕಾಣಬಹುದಾಗಿದೆ. ಸ್ಥಿರಚಿತ್ರಕ್ಕೆ ನೈಜತೆಯನ್ನು ಮೈಗೂಡಿಸಿಕೊಳ್ಳಲು ಪ್ರಯತ್ನಿಸಲಾಗಿದೆ. ಲೇಪಿಸಿದ ಬಣ್ಣಗಳಲ್ಲಿ ಹೊಂದಾಣಿಕೆಯಿದ್ದು ಅದರ ಮೇಲೆ ಬೆಳಕು ಬಿದ್ದಹಾಗೆ ಕಂಡು ಬರುತ್ತದೆ. ಸುತ್ತಲೂ ಹೂವುಗಳ ರಾಶಿಬಿದ್ದಿರುವಂತೆ ವರ್ಣಗಳ ಚಲ್ಲಾಡುವಿಕೆಯಿಂದ ಬಿಂಬಿಸುವ ಪ್ರಯತ್ನ ಕಂಡು ಬರುತ್ತದೆ.

**ಹಳ್ಳಿಯ ಮನೆಗಳು : ೧೯೮೬**

ಅಮೂರ್ತ ಕಲೆಯಲ್ಲಿ ಮನಸೆಳೆಯುವ ಚಿಂತನಾಶೀಲ ಆಕಾರಗಳನ್ನು ಸೃಷ್ಠಿಸುವಲ್ಲಿ ಪಾಟೀಲರು ವಿಶೇಷ ಪ್ರತಿಭೆ ಹೊಂದಿದವರು. ಈ ಹಿನ್ನೆಲೆಯಲ್ಲಿ ಹಳ್ಳಿಯ ಪರಿಸರವನ್ನು ಅಮೂರ್ತವಾಗಿ ಇಲ್ಲಿ ಚಿತ್ರಿಸಿದ್ದಾರೆ. ಹಳ್ಳಿಯ ಮನೆಯೊಂದರ ನೆನಪನ್ನು ಅಮೂರ್ತತೆಯ ಆಕಾರಗಳಿಂದ ಪರಿಣಾಮಕಾರಿಯಾಗಿ ಚಿತ್ರಿಸಿದ್ದಾರೆ. ಹಳ್ಳಿ ಮನೆಯ ಕಿಡಿಕಿ, ಬಾಗಿಲಿನ ಭಾವನೆಯನ್ನು ಕಲ್ಪಿಸುವ ವಿವಿಧ ಅರ್ಥ ಸಾಧ್ಯತೆಯನ್ನು ಸೃಷ್ಠಿಸುವ ಆಕಾರಗಳನ್ನು ರಚಿಸಿದ್ದಾರೆ. ದಟ್ಟ ತಿಳುವರ್ಣದ ಬೀಸುಗಳಿರುವ ಈ ಚಿತ್ರ ಮತ್ತೆ ಮತ್ತೆ ನೋಡಬೇಕು ಎಂಬ ಆಸೆಯನ್ನು ಹುಟ್ಟಿಸುತ್ತದೆ. ಸಂಯೋಜನೆಯ ದೃಷ್ಟಿಯಿಂದಲೂ ಈ ಕೃತಿ ಗಮನಾರ್ಹವೆನಿಸುತ್ತದೆ.

**ಪ್ರಕೃತಿ ಮತ್ತು ಸ್ತ್ರೀ : ೧೯೮೬**

ಪ್ರಕೃತಿಯ ಫಲವಂತಿಕೆಯ ಅಂಶವನ್ನು ಸ್ತ್ರೀಗೆ ಹೋಲಿಸಿ ಹಲವಾರು ಕಲಾಕೃತಿಗಳನ್ನು ಪಾಟೀಲರು ರಚಿಸಿದ್ದು, ಅಂತಹ ಕೃತಿಗಳಲ್ಲಿ ಇದೂ ಸಹಿತ ಒಂದಾಗಿದೆ. ಪ್ರಸ್ತುತ ಕಲಾಕೃತಿಯಲ್ಲಿ ಜಲವರ್ಣಗಳನ್ನು ವಿಶಿಷ್ಟ ರೀತಿಯಲ್ಲಿ ಬಳಸಿರುವ ಕಲಾವಿದರು. ಇಲ್ಲಿನ ಜಲವರ್ಣದ ಕೃತಿಯಲ್ಲಿ ಸ್ತ್ರೀಯನ್ನು ಪ್ರಕೃತಿಗೆ ಹೋಲಿಸಿ ಚಿತ್ರಿಸಿದ್ದಾರೆ. ಹಿಂದಿನ ಜಲವರ್ಣ ಕೃತಿಗಳಿಗಿಂತ ಈ ಚಿತ್ರವು ವಿಭಿನ್ನ ನೆಲೆಯಲ್ಲಿ ರಚನೆಗೊಂಡಿದೆ. ಈ ಚಿತ್ರದಲ್ಲಿ ಪ್ರಕೃತಿಯ ಮಧ್ಯದಲ್ಲಿ ಸ್ತ್ರೀಯೊಬ್ಬಳು ನಗ್ನಾಕಾರವಾಗಿ ಮಲಗಿರುವಂತೆ ಚಿತ್ರಿಸಲಾಗಿದೆ.

ಸ್ತ್ರೀಯ ರೂಪವು ಅಸ್ಪಷ್ಟವಾಗಿರುವಂತಿದೆ. ಸುತ್ತಲೂ ಸ್ಪ್ರೇಡ್ ಮೆಥೆಡ್‌ನ ವರ್ಣ ಸಂಯೋಜನೆ ಇದೆ. ಬಳಸಿರುವ ದಟ್ಟವರ್ಣಗಳು ಪ್ರಕೃತಿಯನ್ನು ಸ್ಪಷ್ಟತೆಯಿಂದ ಗುರುತಿಸುವಲ್ಲಿ ಸಹಕಾರಿಯಾಗಿವೆ. ಕಲಾವಿದರು ಅಭಿವ್ಯಕ್ತಿ ಸ್ವಾತಂತ್ರ್ಯಕ್ಕೆ ಮತ್ತು ಕಲ್ಪನೆಗೆ ಸೃಹನಶೀಲ ಆಕೃತಿಯಿಂದ ಮೆರಗು ತಂದಿದ್ದಾರೆ. ಮಧ್ಯದಲ್ಲಿರುವ ಸ್ತ್ರೀಯ ದೇಹ ಆಕರ್ಷಕ ಭಾವಭಂಗಿಯನ್ನು ಪ್ರದರ್ಶಿಸುವಂತೆ ಭಾಸವಾಗುತ್ತಿದೆ. ಶಿರವು ಮಸುಕುಗೊಂಡಿದೆ. ಕಲ್ಪನೆಗೆ ಮಹತ್ವಕೊಡುವ ಈ ಕೃತಿ ವೀಕ್ಷಕನ ಅಂತರಂಗವನ್ನು ತಟ್ಟುವಂತಿದೆ.

**ಶೃಂಗರಿಸಿಕೊಳ್ಳುತ್ತಿರುವ ಮಹಿಳೆ : ೧೯೮೬**

ಈ ಕಲಾಕೃತಿಯು ಅಕ್ರಾಲಿಕ್ ಮಾಧ್ಯಮದ ಸಂಯೋಜನೆಯಾಗಿದ್ದು ಸ್ತ್ರೀಯೊಬ್ಬಳು ಶೃಂಗರಿಸಿಕೊಳ್ಳುತ್ತಿರುವ ದೃಶ್ಯವಾಗಿದೆ. ಆಕೃತಿಯಲ್ಲಿ ಬಿಳಿಯ ವರ್ಣದ ಸ್ಪಷ್ಟಕಲ್ಪನೆಯ ನಿಲುವನ್ನು ನಿರೂಪಿಸಲಾಗಿದೆ. ಮನೋಹರವಾದ ದೇಹಾಲಂಕಾರ ಹೊಂದಿದ ಸ್ತ್ರೀಯು ಶೃಂಗರಿಸಿಕೊಳ್ಳುತ್ತಲಿದ್ದಾಳೆ. ಹೆಣ್ಣು ಅಲಂಕಾರ ಪ್ರೀಯಳು. ದಿನನಿತ್ಯ ಕೆಲಸ ಕಾರ್ಯಕ್ಕೆ ಎಷ್ಟು ಪ್ರಾಮುಖ್ಯತೆ ಕೊಡುತ್ತಾಳೊ ಅಷ್ಟೇ ಅಲಂಕಾರಕ್ಕೂ ಕೂಡ ಮಹತ್ವವನ್ನು ನೀಡುವಳೆಂಬುದು ಸರ್ವೆ ಸಾಮಾನ್ಯ.

ಈ ಕಲಾಕೃತಿಯಲ್ಲಿ ಮಹಿಳೆ ಕೂದಲು ಬಾಚಿಕೊಂಡಿರುವುದು, ನೀಟಾಗಿ ವಸ್ತ್ರಹಾಕಿಕೊಂಡಿರುವುದು, ಅಂಗಾಂಗಗಳಿಗೆ ಪೌಡರ್ ಸ್ನೋ ಹೀಗೆ ಆಧುನಿಕ ರೀತಿಯ ಶೃಂಗಾರವನ್ನು ಮಾಡಿಕೊಳ್ಳುತ್ತಲಿರುವುದು ಕಂಡುಬರುತ್ತದೆ. ಪಾಟೀಲರಿಗೆ ಸ್ತ್ರೀರೂಪ ಹಲವು ನಿಟ್ಟಿನಲ್ಲಿ ಪ್ರಯೋಗದ ವಸ್ತುವಾಗಿದೆ. ಹಾಗೇ ಪ್ರೀತಿ, ಪ್ರೇಮ, ಪ್ರಣಯಗಳು ಇಂದಿಗೂ ಒಡಮೂಡುತ್ತಲೇ ಇವೆ ಪ್ರಸ್ತುತ ಚಿತ್ರವು ಮಹಿಳೆಯ ಕುರಿತಾಗಿರುವುದು ಇಲ್ಲಿ ಗಮನಾರ್ಹವಾಗಿದೆ.

**ಮಹಿಳೆ ಮತ್ತು ರಾತ್ರಿ : ೧೯೮೬**

ಪ್ರಸ್ತುತ ಚಿತ್ರದಲ್ಲಿ ಮಹಿಳೆಯೊಬ್ಬಳು ರಾತ್ರಿ ಹೊತ್ತಿನಲ್ಲಿ ಏಕಾಂತವಾಗಿ ವಿಚಾರಿಸುತ್ತ ಕುಳಿತಿದ್ದಾಳೆ. ಮನೆಯ ಒಳಾಂಗಣದಲ್ಲಿ ಕುಳಿತ ಮಹಿಳೆಯ ಆಕೃತಿಯನ್ನು ಸ್ಪಷ್ಟವಾಗಿ ಚಿತ್ರಿಸಲಾಗಿದೆ. ಹಿನ್ನೆಲೆಯಲ್ಲಿ ಮನೆಯ ಸುತ್ತಲಿನ ಗೋಡೆಗಳಿದ್ದು ಈ ಹಿಂದಿನಂತೆ ಸಾಂಪ್ರದಾಯಕ ಶೈಲಿಯ ಉಡುಪುಗಳು ಭೂಷಣಗಳು ಪುನರಾವರ್ತನೆಯಾಗಿವೆ. ಪಾಟೀಲರ ಎಂದಿನ ನೀಲಿವರ್ಣದ ವೈವಿಧ್ಯಮಯ ಛಾಯೆಗಳು ಇಲ್ಲಿನ ಕಲಾಕೃತಿಯ ಒಪ್ಪಂದಕ್ಕೆ ಪೂರಕವಾಗಿದೆ. ಅವರ ಕೆಲವು ಕೃತಿಗಳಲ್ಲಿ ಇರುವಂತೆ ಒಂದೇ ಆಕೃತಿಯು ಚಿತ್ರದ ಉದ್ದೇಶಕ್ಕೆ ತಕ್ಕಂತೆ ರೂಪುಗೊಂಡಿದೆ.

ಅದರಲ್ಲಿ ಸ್ತ್ರೀಯ ಕುರಿತು ಇರುವ ಚಿತ್ರಗಳಲ್ಲಿ ಏಕಾಂತದ ಸೃಷ್ಟಿಗೆ ಒಂದೆ ಆಕೃತಿಯನ್ನು ಬಳಸಿಕೊಂಡಿರುವುದು ಹೆಚ್ಚಾಗಿ ಕಂಡುಬರುತ್ತದೆ. ಚಿತ್ರದಲ್ಲಿ ರಾತ್ರಿಯ ಕಲ್ಪನೆಯನ್ನು ಮೂಡಿಸುವಂತೆ ಮಂದ ಬೆಳಕನ್ನು ತೋರಿಸಲು ನೀಲಿ, ಕೆಂಪು, ಕಪ್ಪು ವರ್ಣಗಳನ್ನು ಆಕೃತಿಗೆ ಬಳಸಲಾಗಿದೆ. ತೈಲವರ್ಣದ ಈ ಕೃತಿಯು ಭಾವನಾ ಲೋಕದಲ್ಲಿ ಮಿಂದಂತಿದೆ. ಹಿನ್ನಲೆಯಲ್ಲಿ ಬಿಳಿಯ ಪಾರಿವಾಳವನ್ನು ಸಾಂಕೇತಿಕವಾಗಿ ಬಳಸಿಕೊಂಡಿರುವುದು ಕಂಡು ಬರುತ್ತಿದೆ. ಬಳಸಿದ ವರ್ಣಗಳ ವೈವಿಧ್ಯತೆಯು ಈ ಕಲಾಕೃತಿಯನ್ನು ಪರಿಣಾಮಕಾರಿಯಾಗಿ ಮಾಡಿದೆ.

**ಸ್ತ್ರೀ : ೧೯೮೬**

ಪಾಟೀಲರು ಸಂಪ್ರದಾಯಕ ಶೈಲಿಯನ್ನು ಅಧುನಿಕ ಭೂಮಿಕೆಯಲ್ಲಿ ವ್ಯಕ್ತಪಡಿಸಲು ಗ್ರಾಮೀಣ ಸ್ತ್ರೀಯರನ್ನು ಆಯ್ದುಕೊಂಡಿದ್ದಾರೆ. ಅಲ್ಲದೆ ಸ್ತ್ರೀಯ ವಿವಿಧ ಭಾವಭಂಗಿಯ ಚಿತ್ರಗಳನ್ನು ನೋಡಿದರೆ ಈ ಬಗೆಯ ನಿಲುವುಗಳಿರುವುದು ಸ್ಪಷ್ಟವಾಗುತ್ತದೆ. ಪ್ರಸ್ತುತ ಕಲಾಕೃತಿಯಲ್ಲಿ ಮಹಿಳೆಯೊಬ್ಬಳು ವಿಚಾರಮಗ್ನಳಾಗಿ ಕುಳಿತಿದ್ದಾಳೆ. ಹಿಂದಿನ ಎಲ್ಲ ಚಿತ್ರಗಳಂತೆ ಸಾಂಪ್ರದಾಯಿಕ ವೇಷಭೂಷಣಗಳಿವೆ. ಅಕ್ರಾಲಿಕ್ ಮಾಧ್ಯಮದಲ್ಲಿ ರಚನೆಗೊಂಡಿದೆ.

ಸ್ತ್ರೀ ಕುಳಿತಿರುವ ಭಂಗಿಯು ನೋಡಲು ಆಕರ್ಷಕವಾಗಿದೆ, ಚಿತ್ರರಚನೆಯನ್ನು ಸೌಮ್ಯತೆಯಡೆಗೆ ಕರೆದೊಯ್ಯುವಂತೆ ಅನಾವರಣಗೊಂಡ ವರ್ಣಗಳು, ತಿಳಿ ಬಿಳುಪಿನ ವಸ್ತ್ರಗಳು, ಚಿತ್ರಕೃತಿಗೆ ಮೆರಗು ತಂದಿವೆ. ಒಟ್ಟಾರೆ ಕಲಾಕೃತಿಯಲ್ಲಿನ ವರ್ಣಗಳು ಸ್ವತಂತ್ರ ಅರ್ಥಸಾಧ್ಯತೆಗಳನ್ನು ವ್ಯಕ್ತಪಡಿಸುವಂತೆ ಕಂಡುಬರುತ್ತವೆ.

**ಆಡು ಕಾಯುವ ಮಹಿಳೆ : ೧೯೮೭**

ಗ್ರಾಮೀಣ ಬದುಕಿನಲ್ಲಿ ಪುರುಷರಂತೆ ಮಹಿಳೆಯರು ಸಹಿತ ವಿವಿಧ ಕೆಲಸ ಕಾರ್ಯಗಳನ್ನು ನಿರ್ವಹಿಸುತ್ತಾರೆ. ಒಕ್ಕಲುತನದಂತಹ ಕಠಿಣ ಕೆಲಸಗಳಿಂದ ಹಿಡಿದು ದನಕಾಯುವುದು, ಕುರಿ ಮತ್ತು ಆಡುಗಳನ್ನು ಕಾಯುವ ಕೆಲಸವನ್ನು ಮಹಿಳೆಯರೂ ನಿರ್ವಹಿಸುತ್ತಾರೆ. ಈ ಚಿತ್ರದಲ್ಲಿ ಮಹಿಳೆಯೊಬ್ಬಳು ಆಡುಗಳನ್ನು ಕಾಯುತ್ತಿರುವ ದೃಶ್ಯವನ್ನು ಚಿತ್ರಿಸಲಾಗಿದೆ. ಆಧುನಿಕ ಶೈಲಿಯಲ್ಲಿರುವ ಈ ಕೃತಿ ಸಾಂಪ್ರದಾಯಿಕ ಅಂಶಗಳನ್ನು ಪ್ರತಿಬಿಂಬಿಸುವಲ್ಲಿ ಸಫಲವಾಗಿದೆ. ಹಳ್ಳಿಯ ವೇಷಭೂಷಣಗಳು, ಮಹಿಳೆಯ ಭಾವನಾತ್ಮಕ ನಿಲುವುಗಳು ಈ ಕೃತಿಯಲ್ಲಿ ವ್ಯಕ್ತಗೊಂಡಿವೆ. ಮಹಿಳೆಯು ಉದ್ದನಾದ ಬಡಿಗೆಯನ್ನು ಹಿಡಿದುಕೊಂಡು ಆಡುಕಾಯುವ ಕೆಲಸದಲ್ಲಿ ನಿರತಳಾಗಿದ್ದಾಳೆ.

ಮೋಹಕವಾದ ಪ್ರಕೃತಿ ದೃಶ್ಯವನ್ನು ಕಲಾವಿದರು ಇಲ್ಲಿ ಸಂಯೋಜಿಸಿದ್ದಾರೆ. ಮಹಿಳೆಯು ದಟ್ಟಕಂದು ವರ್ಣದ ಮೈಬಣ್ಣ ತಿಳುವರ್ಣದ ಉಡುಗಳು, ಹಣೆಯ ಮೇಲಿನ ಕುಂಕುಮ, ಉದ್ದನಾದ ಮೂಗು ಮಹಿಳೆಯ ಅಂದವನ್ನು ಹೆಚ್ಚಿಸಿವೆ. ಆಡು ಕಾಯುವ ಕಾಯಕದಲ್ಲಿ ನಿರತಳಾದ ಮಹಿಳೆ ಬಡಿಗೆಯನ್ನು ಹೆಲಗಮೇಲೆ ಹಾಕಿಕೊಂಡಿದ್ದಾಳೆ. ನಿಸರ್ಗ ಸೊಬಗಿನ ಹುಲ್ಲುಗಾವಲುನಲ್ಲಿ ಮೇಯುತ್ತಿರುವ ಆಡುಗಳು ಸ್ವಚ್ಛಂದವಾಗಿ ವಿಹರಿಸುತ್ತಿವೆ. ಇದಕ್ಕೆ ಹಿನ್ನೆಲೆಯಾಗಿ ದಟ್ಟ ಹಸಿರು ವರ್ಣಲೇಪನ ಮಾಡಿ ಕಾಡಿನ ದಟ್ಟತೆಯನ್ನು ಪ್ರಕೃತಿ ಸಿರಿಯನ್ನು ಹೆಚ್ಚಿಸುವ ಪ್ರಯತ್ನ ಮಾಡಿರುವುದು ಕಂಡುಬರುತ್ತದೆ.

**ಶಾಮಲಾ ಭಾವೆ ಅವರ ತಂದೆಯ ಚಿತ್ರ** : ೧೯೮೭

ಶ್ಯಾಮಲಾಜಿ ಭಾವೆ ಅವರ ತಂದೆಯು ಭಾವಚಿತ್ರವನ್ನು ಪಾಟೀಲರು ತೈಲವರ್ಣದಲ್ಲಿ ರಚನೆ ಮಾಡಿದ್ದಾರೆ. ರೂಪದರ್ಶಿಯಾಗಿರುವ ಭಾವೆಯವರ ತಂದೆಯವರು ಹಳೆಯ ಕಾಲದ ವೇಷಭೂಷಣಗಳಿಂದ ಚಿತ್ರಿತಗೊಂಡಿದ್ದಾರೆ. ಕರಿಯ ಕೋಟು, ರಟ್ಟಿನ ಟೊಪ್ಪಿಗೆ ಇವು ಸಾಮಾನ್ಯವಾಗಿ ಸ್ಥಿತಿವಂತರ ವಸ್ತ್ರವಿನ್ಯಾಸಗಳಾಗಿದ್ದವು.

ಈ ಹಿನ್ನೆಲೆಯಲ್ಲಿ ಭಾವೆಯವರ ಚಿತ್ರದ ಮೂಲಕ ಪಾಟೀಲರು ಈ ಪರಂಪರೆಯನ್ನು ಮುಂದಿನ ಜನಾಂಗಕ್ಕೆ ಉಳಿಸಿ ಕೊಡುವ ಪ್ರಯತ್ನ ಮಾಡಿದ್ದಾರೆ. ಈ ಚಿತ್ರದಲ್ಲಿ ರೂಪದರ್ಶಿಯ ವಯೋಮಾನದ ಕಲ್ಪನೆ, ಭಾವತೀವ್ರತೆ, ಬಣ್ಣಲೇಪನ ಮತ್ತು ನೆರಳು ಬೆಳಕಿನ ಪರಿಣಾಮಗಳು ಉತ್ಕೃಷ್ಟವಾಗಿ ಮೂಡಿಬಂದಿದೆ.

**ಮುಗಿಯದ ಮಾತು** : ೧೯೮೭

ಸ್ತ್ರೀಯರು ಮನೆಯ ದಿನನಿತ್ಯದ ಕೆಲಸಕಾರ್ಯಗಳು ಮುಗಿದ ನಂತರ ಯಾವುದಾದರೂ ವಿಷಯದ ಬಗ್ಗೆ ಅಥವಾ ವಿಷಯಾತೀತವಾಗಿ ಮಾತನಾಡುವುದು ಸಾಮಾನ್ಯ ಸಂಗತಿ ಇಂತಹ ಸರಳವಾದ ಸಂಗತಿಗಳು ಸಹಿತ ಪಾಟೀಲರು ಚಿತ್ರರಚನೆಯ ವಿಷಯ ವ್ಯಾಪ್ತಿಗೆ ಅಳವಡಿಸಿದ್ದು, ಅವರ ಅವಲೋಕನದ ಪ್ರಬುದ್ಧತೆಯನ್ನು ಬಿಂಬಿಸುತ್ತದೆ.

ಈ ಚಿತ್ರದಲ್ಲಿ ಇಬ್ಬರು ಮಹಿಳೆಯರು ಯಾವುದೇ ವಿಷಯದ ಬಗ್ಗೆ ಮಾತನಾಡುತ್ತಲ್ಲಿದ್ದಾರೆ. ರೇಖಾ ಪ್ರಧಾನವಾದ ಈ ಕೃತಿಯಲ್ಲಿ ಚಲನಾತ್ಮಕ ವಿನ್ಯಾಸವಿದೆ. ಸ್ತ್ರೀಯರು ನಗ್ನವಾಗಿದ್ದು ಅವರ ನಗ್ನರೂಪದ ಅಂಗರಚನೆಗೆ ಪೂರಕವಾಗಿ ರೇಖೆಗಳಲ್ಲಿ ಚೈತನ್ಯವನ್ನು ತುಂಬಿದ್ದಾರೆ. ಚಿತ್ರದ ವಿವರವೆಲ್ಲವನ್ನು ತುಂಬಾ ಸ್ಪಷ್ಟವಾಗಿ ರೇಖೆಯ ಮೂಲಕ ಚಿತ್ರಿಸಿದ್ದಾರೆ.

**ಜೋಕಾಲಿಯಲ್ಲಿ ಕುಳಿತ ಸ್ತ್ರೀ : ೧೯೮೭**

ಈ ರೇಖಾ ಚಿತ್ರದಲ್ಲಿ ಮಹಿಳೆ ಜೋಕಾಲಿಯಾಡುತ್ತಿದ್ದಾಳೆ. ಒಂದು ಬದಿಯ ಮುಖದ ನೋಟವನ್ನು ಮಾತ್ರ ಇಲ್ಲಿ ಚಿತ್ರಿಸಲಾಗಿದೆ ಜೋಕಾಲಿಯಲ್ಲಿ ಕುಳಿತುಕೊಂಡು ಹಾಯಾಗಿ ತೂಗಿಕೊಳ್ಳುತ್ತಿರುವ ಮಹಿಳೆಯ ಭಾವ ಭಂಗಿಗಳು ತುಂಬಾ ಆಕರ್ಷಕವಾಗಿ ಮೂಡಿ ಬಂದಿವೆ. ದೇಹದ ರೇಖಾ ವಿನ್ಯಾಸವು ಚಲನೆಯನ್ನು ಪಡೆದುದಲ್ಲದೆ ರೂಪ ಲಾವಣ್ಯದ ಸೊಬಗನ್ನು ನೀಡುತ್ತದೆ. ರಭಸವಾದ ರೇಖೆಗಳು ಎಲ್ಲಯೂ ತನ್ನ ಚಲನೆಯ ಸತ್ವವನ್ನು ಕಳೆದುಕೊಂಡಿಲ್ಲ. ಅಂಗ ರಚನಾ ಶಾಸ್ತ್ರಕ್ಕೆ ತಕ್ಕಂತೆ ಮಹಿಳೆಯ ಆಕಾರವನ್ನು ಚಿತ್ರಿಸಲಾಗಿದೆ.

**ಜಲವರ್ಣ ನಿಸರ್ಗ ಚಿತ್ರಗಳು : ೧೯೮೭**

ಸಮುದ್ರ ಕರಾವಳಿ ತೀರಪ್ರದೇಶದ ನೆನಪನ್ನು ಮಾಡಿಕೊಡುವ ಈ ನಿಸರ್ಗ ಚಿತ್ರಗಳನ್ನು ಪಾಟೀಲರು ಕಾಲ್ಪನಿಕವಾಗಿ ರಚನೆ ಮಾಡಿದ್ದಾರೆ. ಕಡಲ ಅಲೆಗಳ ಅಬ್ಬರ, ಚಲನೆ, ಸೌಂದರ್ಯ ಇವುಗಳನ್ನು ಪರಿಣಾಮಕಾರಿಯಾಗಿ ಚಿತ್ರಿಸಿದ್ದಾರೆ. ಜಲವರ್ಣದಲ್ಲಿ ಅರಳಿನಿಂತ ಕೃತಿ ಇದಾಗಿವೆ. ಆಕಾಶ, ಸಮುದ್ರಗಳು ಒಂದಾದಂತೆ ಕಾಣುವ ಹಾಗೆ ಸಂಯೋಜನಾ ತಂತ್ರರೂಪಿಸಿದ್ದಾರೆ. ಕ್ಷಿಪ್ರಗತಿಯಲ್ಲಿ ಸಾಗಿದ ಕುಂಚದ ಬೀಸುಗಳು ಕೆಲ ಅಲೆಗಳ ರಭಸವನ್ನು ಪ್ರತಿನಿಧಿಸುತ್ತವೆ. ಕ್ಷಣಾರ್ಧದಲ್ಲಿ ರಚನೆಗೊಂಡ ಈ ಚಿತ್ರವು ಕಲಾವಿದರ ಅನುಭವವನ್ನು ಕಟ್ಟಿಕೊಡುತ್ತದೆ. ಸಮುದ್ರದಡದಲ್ಲಿ ಸಾಗುತ್ತಿರುವ ಡೋಣಿಗಳು, ತಿಳಿನೀಲಿ ವರ್ಣದಿಂದ ಆಕೃತಿಯನನು ಅದರ ಪ್ರತಿಬಿಂಬವನ್ನು ನೀರಿನಲ್ಲಿ ತೋರಿಸಲಾಗಿದೆ ಸುಂದರ, ಸಮುದ್ರದಡ ಡೋಣಿಗಳು, ಚಿಕ್ಕ ಆಕಾರದ ಮನುಷ್ಯರು ಇವೆಲ್ಲ ಗಮನ ಸೆಳೆಯುವಂತೆ ರಚನೆಯಾಗಿವೆ.

**ಜಲವರ್ಣದ ನಿಸರ್ಗಚಿತ್ರ : ೧೯೮೭**

ಸುಂದರ ಕಡಲ ತೀರದ ಪ್ರೇರಣೆಯಿಂದ ಮೂಡಿ ಬಂದ ಕ್ಷಿಪ್ರಗತಿಯ ನಿಸರ್ಗಚಿತ್ರ ಇದಾಗಿದೆ. ಹಿಂದಿನ ಚಿತ್ರದಂತೆ ಇದು ಸಹಿತ ಕಾಲ್ಪನಿಕವಾಗಿದೆ. ವಿವಿಧ ಬಗೆಯ ವರ್ಣಗಳಿಂದ ಮೂಡಿರುವ ಕಲಾಕೃತಿ ಇದಾಗಿದೆ. ಕಡಲ ತೀರದ ಪ್ರಾಕೃತಿಕ ಸೌಂದರ್ಯವು ಮೈದಳೆದು ನಿಂತಂತೆ ಭಾಸವಾಗುತ್ತದೆ. ಬಳಸಿರುವ ವರ್ಣಗಳಲ್ಲಿ ನೆರಳು ಬೆಳಕಿನ ಪರಿಣಾಮವು ಮತ್ತು ದಟ್ಟತೆಯ ದಿಟ್ಟತನ ಎದ್ದು ಕಾಣುತ್ತದೆ.

ಕೆಲವು ವರ್ಣದಟ್ಟತೆಯಿಂದ ಕೂಡಿದ್ದರೆ, ಇನ್ನು ಕೆಲವು ಕಡೆ ತೆಳುವಾಗಿ ಲೇಪನ ಮಾಡಲಾಗಿದೆ. ವರ್ಣಗಳ ಸಂಯೋಜನೆಯಲ್ಲಿ ಯಥಾದರ್ಶನದ ಅರಿವು ಉಂಟಾಗುವಂತೆ ರೂಪಿಸಲಾಗಿದೆ. ಸ್ಪಷ್ಟವಾಗಿ ಕಾಣುವ ಡೋಣಿಗಳು ಹಿಂದಕ್ಕೆ ಸರಿದಂತೆ ಮಸುಕಾದಂತೆ ವಾತಾವರಣವನ್ನು ಸೃಷ್ಟಿಸಲಾಗಿದೆ. ಇದು ದೂರದ ಭ್ರಮೆಯನ್ನು ಕಲಾಕೃತಿಯಲ್ಲಿ

ಸೃಷ್ಟಿಸುತ್ತದೆ. ಆಕಾಶ ಕಡಲು ಒಂದೊಕ್ಕೊಂದು ದಿಗಂತದ ಅಂಚಿನಲ್ಲಿ ಕೂಡಿಕೊಂಡಿರುವಂತೆ ಭಾಸವಾಗುತ್ತದೆ. ಕೇವಲ ಕುಂಚದ ಎಳೆತಗಳಿಂದಲೇ ಈ ರೀತಿಯ ಪರಿಣಾಮವನ್ನು ಉಂಟು ಮಾಡಲಾಗಿದೆ.

**ಜಲವರ್ಣ ನಿಸರ್ಗಚಿತ್ರ : ೧೯೮೮**

ಹಿಂದಿನ ಚಿತ್ರಗಳಂತೆ ಈ ಚಿತ್ರವು ಕೂಡ ಕಡಲತೀರದ ದೃಶ್ಯಾನುಭವವನ್ನು ಕೊಡುವ ಕೃತಿಯಾಗಿದೆ. ಕಲಾವಿದರು ಜಲವರ್ಣದಲ್ಲಿ ಇಲ್ಲಿಯೂ ಕೂಡ ಪುನರಾವರ್ತಿತ ದೃಶ್ಯಗಳನ್ನು ರಚನೆ ಮಾಡಿದ್ದಾರೆ. ಪ್ರಕೃತಿಯ ಸೊಗಡನ್ನು ಸವಿಯು ನಿಟ್ಟಿನಲ್ಲಿ ಕ್ಷಣಾರ್ಧದಲ್ಲಿ ಸ್ಮೃತಿಪಟಲದಲ್ಲಿ ಮೂಡಿಬಂದ ಕಡಲ ಕಲ್ಪನೆ ಇದಾಗಿದೆ. ಚಿತ್ರದಲ್ಲಿ ನೀಲಿವರ್ಣದ ಸಂಯೋಜನೆಯು ಸ್ಪ್ರೆಡ್ ಮೆಥೆಡ್‌ದ ತಂಂತ್ರದಿಂದ ರಚನೆಯಾಗಿದೆ.

ಒದ್ದೆಯಾದ ಹಾಳೆಯಲ್ಲಿ ಕ್ಷಿಪ್ರಗತಿಯಲ್ಲಿ ವರ್ಣ ಬಳಸಿ ರಚಿಸಿರುವ ಕಲಾಕೃತಿ ಇದಾಗಿದೆ. ಅನಂತಾಕಾಶವು ಪರಿಣಾಮಕಾರಿಯಾಗಿ ಅನಾವರಣಗೊಂಡಿವೆ. ಚಿತ್ರದ ಮುಂಭಾಗದಲ್ಲಿ ಸಮುದ್ರ ದಡಕ್ಕೆ ತೇಲಿಬಂದು ಅಪ್ಪಳಿಸುವ ತೆರೆಗಳು ದೂರದಲ್ಲಿ ದೋಣಿಗಳು ಇಲ್ಲಿಯೂ ಕಂಡು ಬರುತ್ತವೆ. ವಾತಾವರಣದ ಯಥಾದರ್ಶನ ಸಿದ್ಧಾಂತವು ಇಲ್ಲಿ ಗೋಚರಿಸುತ್ತದೆ.

**ಜಲವರ್ಣದಲ್ಲಿ ನಡುಗಡ್ಡೆ ದೃಶ್ಯ : ೧೯೮೮**

ಸಮುದ್ರವನ್ನು ಪ್ರತಿಬಿಂಬಿಸುವ ಮತ್ತೊಂದು ಕಾಲ್ಪನಿಕ ಚಿತ್ರ ಇದಾಗಿದೆ. ಇಲ್ಲಿ ಸಮುದ್ರದ ಮಧ್ಯದಲ್ಲಿ ನಡುಗಡೆಯನ್ನು ರಚಿಸಲಾಗಿದೆ. ಇವೆಲ್ಲ ಜಲವರ್ಣದ ಜಾರುವಿಧಾನದಲ್ಲಿ ರಚನೆಯಾಗಿವೆ. ನೀಲವರ್ಣಗಳನ್ನು ಸಮರ್ಥವಾಗಿ ಬಳಸಿರುವುದು ಇಲ್ಲಿಯ ವಿಶಿಷ್ಟತೆಯಾಗಿದೆ. ಕಡಲ ಅಲೆಗಳು ಶಾಂತವಾಗಿ ಚಲಿಸಿ ದಡದಲ್ಲಿ ಲೀನವಾಗುವ ಸುಂದರ ವಿನ್ಯಾಸ ಇಲ್ಲಿದೆ. ಕುಂಚದ ಎಳೆತಗಳು, ಬಣ್ಣದ ಹರಿದಾಡುವಿಕೆಯಿಂದಲೇ ಈ ರೀತಿಯ ಪರಿಣಾಮವನ್ನು ಕಲಾವಿದರು ತಂದಿದ್ದಾರೆ.

**ಮೋಡಗಳು : ೧೯೮೮**

ಜಲವರ್ಣದಲ್ಲಿ ಸಮುದ್ರ ದೃಶ್ಯಗಳನ್ನು ರಚನೆ ಮಾಡಿದಂತೆ ಮಳೆಗಾಲದ ಪರಿಸರವನ್ನು ಸಹಿತ ಪಾಟೀಲರು ಚಿತ್ರಿಸಿದ್ದಾರೆ. ಪ್ರಸ್ತುತ ಚಿತ್ರದಲ್ಲಿ ಮಳೆಗಾಲದ ಭ್ರಮೆಯನ್ನು ಮೂಡಿಸುವ ಕಲ್ಪನಾ ಚಿತ್ರವನ್ನು ಬಿಂಬಿಸಿದ್ದಾರೆ. ಮೋಡಗಳು ಮುಸುಕಿ ವಾತಾವರಣವು ಆಕಾಶ ಭೂಮಿಯೊಂದಾದಂತೆ ಕಂಡು ಬರುವ ದೃಶ್ಯ ಇದಾಗಿದೆ. ಕಲಾವಿದರು ಜಲವರ್ಣದಲ್ಲಿ ವರ್ಣ ಸಂಯೋಜನೆಯ ಮೋಡಿಯನ್ನು ಮನೋಜ್ಞವಾಗಿ ಬಳಸಿಕೊಂಡಿದ್ದಾರೆ.

ನೀಲಿವರ್ಣದ ಆಕಾಶವು ಹಳದಿ ಕಂದು ವರ್ಣದ ಸಂಯೋಜನೆಯಿಂದ ಮೋಡಗಳ ರೂಪ ಪಡೆದುಕೊಂಡಿದೆ. ಮಳೆಗಾಲದ ಮೋಡಗಳ ನೋಟ ಮತ್ತು ಆಟಗಳನ್ನು ನೋಡಿ ಕವಿಗಳು ವರ್ಣಿಸುವಂತೆ ಕಲಾವಿದರೂ ಚಿತ್ರ ಮೂಲಕ ಇಲ್ಲಿ ಅಭಿವ್ಯಕ್ತಿಸಿದ್ದಾರೆ. ಕ್ಷಿಪ್ರಗತಿಯ ಕುಂಚದ ಬೀಸುಗಳು ಕಲಾಕೃತಿಗೆ ವೇಗವನ್ನು ತಂದುಕೊಟ್ಟಿವೆ. ಮಿಂಚೊಂದು ಸುಳಿದಾಗ ಮೋಡಗಳೆಲ್ಲ ಚದುರಿ ಮಳೆ ಸುರಿಸಲು ಅಣಿಯಾಗಿರುವಂತೆ ಭಾಸವಾಗುತ್ತದೆ. ಪ್ರಯೋಗಶೀಲ ಕಲಾಕೃತಿ ಇದಾಗಿದೆ.

**ಮಲಗಿರುವ ಸ್ತ್ರೀ : ೧೯೮೮**

ಪಾಟೀಲರು ತಮ್ಮ ಕಲಾಕೃತಿಗಳಲ್ಲಿ ಹೆಚ್ಚಾಗಿ ಸ್ತ್ರೀಯನ್ನು ಬಳಸಿರುವುದು ಸಾಮಾನ್ಯ ಅದರಲ್ಲೂ ನಗ್ನಾಕಾರದ ಸ್ತ್ರೀಯನ್ನು ಸಾಂಕೇತಿಕವಾಗಿ ಬಿಂಬಿಸುವುದು ಇವರ ಶೈಲಿಯಾಗಿದೆ. ಹಾಗಾಗಿ ನಗ್ನಾಕಾರದ ಸ್ತ್ರೀಯ ಭಾವ ಭಂಗಿಗಳನ್ನು ವಿಶಿಷ್ಟ ರೀತಿಯಲ್ಲಿ ಬಳಸಿಕೊಂಡಿದ್ದಾರೆ. ಪ್ರಸ್ತುತ ಚಿತ್ರದಲ್ಲಿ ಮನೆಯಲ್ಲಿ ನಗ್ನಾಕಾರಕ ಸ್ತ್ರಿಯೊಬ್ಬಳು ಮಲಗಿರುವ ದೃಶ್ಯವಿದೆ. ಒಬ್ಬೊಂಟಿಯಾಗಿ ಮಲಗಿರುವ ಸ್ತ್ರೀಯು ಗಾಢನಿದ್ರೆಯಲ್ಲಿರುವಂತೆ ತೋರುತ್ತದೆ.

ಪಕ್ಕದಲ್ಲಿ ಒಂದು ತಲೆದಿಂಬಿನಾಕಾರದ ರೇಖಾ ವಿನ್ಯಾಸವಿದ್ದು ಹಾಸಿಗೆಯ ರೂಪಕ್ಕೆ ತಕ್ಕಂತೆ ರೇಖೆಗಳನ್ನು ಎಳೆಯಲಾಗಿದೆ. ರೂಪ ಲಾವಣ್ಯ ಮೀರಿದಂತಿದ್ದ ಈ ಕೃತಿಯ ರೇಖೆಗಳಲ್ಲಿ ಜೀವಂತಿಕೆಯ ಭಾವ ತುಂಬಿದೆ. ಕ್ಷಿಪ್ರಗತಿಯಲ್ಲಿ ಸಾಗಿರುವ ರೇಖೆಗಳು ಚಲನೆಯನ್ನು ಹೊಂದಿವೆ. ಕಲಾವಿದರ ಪ್ರಯೋಗಶೀಲ ಬೆಳವಣಿಗೆ ಇಂತಹ ಚಿತ್ರಗಳಲ್ಲಿ ಕಂಡು ಬರುತ್ತದೆ.

**ನೃತ್ಯಗಾರ್ತಿ : ೧೯೮೮**

ನೃತ್ಯವು ಲಲಿತಕಲೆಯ ಒಂದು ಅಂಗ. ಲಲಿತಕಲೆಯ ಇನ್ನೊಂದು ಅಂಗವಾದ ಚಿತ್ರಕಲೆಯ ಮೂಲಕ ನೃತ್ಯವನ್ನು ಅಭಿವ್ಯಕ್ತಿಸಿರುವ ಕಲಾಕೃತಿ ಇದಾಗಿದೆ. ನೃತ್ಯವು ಸಂಪ್ರದಾಯಕವಾಗಿ ಜನಾಂಗದಿಂದ ಜನಾಂಗಕ್ಕೆ ಬೆಳೆದು ಬಂದಿರುವಂತ ಕಲೆಯಾಗಿದೆ. ನೃತ್ಯವು ಮನೋರಂಜನೆಯನ್ನು ಕೂಡ ಒದಗಿಸುತ್ತದೆ. ಕಾಗದದ ಮೇಲೆ ಡ್ರೈಪೇಸ್ಟಲ್‌ನಿಂದ ರಚನೆಗೊಂಡ ಈ ಕೃತಿಯು ಭರತನಾಟ್ಯದ ಭಂಗಿಗಳನ್ನು ಪ್ರತಿನಿಧಿಸುತ್ತದೆ. ಸಂಪ್ರದಾಯಿಕ ಉಡುಗೆಗಳಲ್ಲಿರುವ ಸ್ತ್ರೀಯು ಭಾವ ಲಾವಣ್ಯಕ್ಕೆ ಮೆರಗು ತರುವಂತೆ ನರ್ತನೆಯಲ್ಲಿ ತೊಡಗಿದ್ದಾಳೆ. ಸ್ತ್ರೀಯ ನೃತ್ಯ ಭಂಗಿಯು ಆಕರ್ಷಕವಾಗಿದೆ. ಮೈಮರೆತು ನರ್ತಿಸುವ ನೃತ್ಯಗಾರ್ತಿಯು ರೇಖಾಪ್ರಧಾನವಾಗಿ ಸ್ಪಷ್ಟತೆಯಿಂದ ಕೂಡಿರುವಂತೆ ಚಿತ್ರಿಸಲಾಗಿದೆ. ಈ ಕೃತಿಯಲ್ಲಿ ನಾಟ್ಯಶಾಸ್ತ್ರದ ವಿವಿಧ ಭಂಗಿಗಳು ಭಾವನೆಗಳು ಚಲನೆಯ ಮೂಲಕ ವ್ಯಕ್ತಗೊಂಡಿವೆ. ಈ ಲಕ್ಷಣ ಬಾದಾಮಿಯ ನಟರಾಜನ ಶಿಲ್ಪವನ್ನು ನೆನಪಿಸುವಂತಿದೆ.

**ನಮ್ಮ ಮನೆಯ ಬಾಗಿಲು : ೧೯೮೮**

ಹಳ್ಳಿ ಪರಿಸರವು ಸಂಸ್ಕೃತಿಯ ಮೂಲಕ್ಕೆ ಹೆಸರಾಗಿದೆ. ಭಾರತ ಬಹುತೇಕವಾಗಿ ಹಳ್ಳಿಗಳಿಂದ ಕೂಡಿದ ದೇಶವಾಗಿದೆ. ರೈತನ ಬೆನ್ನೆಲುಬು ಹಳ್ಳಿ ಎಂಬಂತೆ ಸಂಪ್ರದಾಯಕ್ಕೆ ಹಳ್ಳಿ ಹೆಸರುವಾಸಿಯಾಗಿದೆ. ಪ್ರಕೃತಿ ಸೊಬಗನ್ನು ಸವಿಯ ಬೇಕಾದರೆ ಹಳ್ಳಿಯಲ್ಲಿ ಮಾತ್ರ ಸಾಧ್ಯ ಕಲಾವಿದರು ಹೆಚ್ಚಾಗಿ ಹಳ್ಳಿಯ ಗ್ರಾಮೀಣ ಪ್ರದೇಶದ ಚಿತ್ರಗಳಿಂದಲೇ ಪ್ರಖ್ಯಾತರಾಗಿದ್ದಾರೆ. ಈ ಚಿತ್ರದಲ್ಲಿ ನೇರ ಹಸಿರು ನೀಲವರ್ಣದ ಸಂಯೋಜನೆಯಲ್ಲಿ ಹಳ್ಳಿಯ ಪರಿಸರವನ್ನು ಚಿತ್ರಿಸಲಾಗಿದೆ. ಹಳ್ಳಿಯ ಮನೆಗಳು, ಬಾಗಿಲು, ಕಿಡಿಕಿ ಅಮೂರ್ತವಾದ ಮಸುಕಾದ ಅರೆಬರೆ ಎಂಬಂತಹ ಕುಂಚದ ಎಳೆತಗಳಿಂದ ಪೂರ್ಣಗೊಳಿಸಲಾಗಿದೆ. ವರ್ಣಗಳ ಸಂಯೋಜನೆಯು ಪರಿಣಾಮಕಾರಿಯಾಗಿದ್ದು, ನೆರಳು ಬೆಳಕುಗಳ ವಿನ್ಯಾದಿಂದ ಕೂಡಿದೆ. ಪಾರದರ್ಶಕ ವರ್ಣತಂತ್ರ ಇಲ್ಲಿದೆ.

**ಓಡುತ್ತಿರುವ ಕುದುರೆ : ೧೯೮೮**

ಕುದುರೆಯನ್ನು ಚಿತ್ರಗಳಲ್ಲಿ ಸಾಂಕೇತಿಕವಾಗಿ ಬಳಸಿಕೊಳ್ಳುವಲ್ಲಿ ಹುಸೇನ ಹೆಸರುವಾಸಿ. ಈ ಹಿನ್ನೆಲೆಯಲ್ಲಿ ಪಾಟೀಲರೂ ಕೆಲವು ಕಡೆಗೆ ಕುದುರೆ ಬಳಸಿದ್ದು ಕಂಡು ಬರುತ್ತದೆ. ಈ ಚಿತ್ರದಲ್ಲಿ ಮುಂಜಾನೆ ಹಿಮಪಾತದ ಮೈಕೊರೆಯುವ ಚಳಿಯಲ್ಲಿ ಅಮೂರ್ತ ರೂಪದ ಹಿಮಪಾತವನ್ನು ಹಸಿರು ಮತ್ತು ನೀಲಿವರ್ಣದ ಮಸುಕಾದ ವರ್ಣಗಳ ಹಿನ್ನೆಲೆಯಲ್ಲಿ ರಚಿಸಿದ್ದಾರೆ. ಕಲ್ಪನೆಯ ಸ್ತಿರಗಳ ವಿಕಾಸವಾದಂತೆ ಆಕೃತಿ ಹಿನ್ನೆಲೆಯಾಗಿ ಕುಂಚದ ಅರೆಬರೆ ಹೊಡೆತಗಳು ಹಿಮಪಾತದ ಮಸುಕನ್ನು ಭೇದಿಸಿ ಕುದುರೆಯು ರಭಸವಾಗಿ ಓಡುತ್ತಿರುವಹಾಗೆ ಅಸ್ಪಷ್ಟವಾದ ಆಕೃತಿಯನ್ನು ಚಿತ್ರಿಸಲಾಗಿದೆ. ಕುದುರೆಯ ಮೈಬಣ್ಣವು ನೀಲಿ ಮತ್ತು ಕಪ್ಪು ವರ್ಣಗಳಿಂದ ಚೌಕಾಕಾರದ ಜ್ಯಾಮಿತಿಕ ಆಕಾರದಲ್ಲಿ ಮೂಡಿಬಂದಿದೆ. ಹಿಂಬದಿಯಲ್ಲಿ ಬಿಳಿಯ ಹಾಳೆಯನ್ನು ಹಾಗೆಯೇ ಉಳಿಸಿಕೊಳ್ಳಲಾಗಿದೆ. ಇದರಿಂದ ಬೆಳಕು ಬಿದ್ದಿರುವಂತೆ ಕಂಡು ಬರುತ್ತದೆ. ಒಟ್ಟಾರೆ ಚಿತ್ರವು ಭಾವನಾ ಲಹರಿಯಲ್ಲಿ ವಿಹರಿಸಿದಂತೆ ಭಾಸವಾಗುತ್ತದೆ.

**ಮಾತು : ೧೯೮೮**

ಮಾನವನ ದಿನ ನಿತ್ಯದ ಜೀವನ ವಹಿವಾಟಿಗೆ ಮಾತು ಅತ್ಯವಶ್ಯಕ. ವ್ಯಕ್ತಿಯ ಸರ್ವತೋಮುಖ ಅಭಿವೃದ್ಧಿಯು ವೃದ್ಧಿಯಾಗಬೇಕಾದರು ಪರಸ್ಪರ ಸಂವಹನಕ್ಕೆ ಮಾತು ಮುಖ್ಯ. ಆಕೃತಿಯಲ್ಲಿ ಸ್ತ್ರೀಯರಿಬ್ಬರು ನಗ್ನಾಕಾರದಲ್ಲಿ ಮಾತನಾಡುತ್ತಿರುವಂತೆ ಚಿತ್ರಿಸಲಾಗಿದೆ. ಅಕ್ರಾಲಿಕ್ ವರ್ಣದ ಕುಂಚದ ರಭಸದ ಬೀಸುಗಳು ಚಿತ್ರಕ್ಕೆ ಚಲನೆಯನ್ನು ತಂದೊಡ್ಡಿವೆ. ಹಳ್ಳಿ ಪರಿಸರದ ಮನೆಯ ಮುಂದೆ ಕುಳಿತಿರುವ ಸ್ತ್ರೀಯರಿಬ್ಬರೂ ಮಾತಿನಲ್ಲಿ ಲೀನವಾದಂತಿದೆ.

ಆಕೃತಿಗೆ ನೇರ ವರ್ಣಗಳು ಜೀವಂತಿಕೆಯನ್ನು ತುಂಬಿವೆ. ಚಿತ್ರಕ್ಕೆ ಹೊಂದಾಣಿಕೆಯಾಗುವಂತೆ ವರ್ಣಗಳು ಒಂದನ್ನೊಂದು ಸಂಯೋಜನೆಗೊಂಡು ಸಂಪ್ರದಾಯಿಕ ಸೊಗಡನ್ನು ಉಂಟುಮಾಡಿವೆ. ಆಕೃತಿಯ ಭಾವ ಲಾವಣ್ಯಕ್ಕೆ ಧಕ್ಕೆ ಬರದಂತೆ ಕುಂಚಗಳ ಚಲನೆಯು ಹರಿದಾಡಿದೆ. ಗ್ರಾಮೀಣ ಪರಿಸರಕ್ಕೆ ಸಂವಾದಿ ಎಂಬಂತೆ ಹಿಂಬದಿಯಲ್ಲಿ ಹಳದಿ ಪಟ್ಟಿಕೆಯ ದೊಡ್ಡ ನಕ್ಷಾ ವಿನ್ಯಾಸವಿದೆ.

**ಅಶುಭ : ೧೯೬೯**

ಗ್ರಾಮೀಣ ಭಾಗದಲ್ಲಿ ಪ್ರತಿ ವಿಷಯಕ್ಕೆ ಒಂದು ಕಲ್ಪನೆಯ ನಂಬಿಕೆಯ ಸಂಕೇತವನ್ನು ಸೂಚಿಸಲಾಗುತ್ತದೆ. ಧಾರ್ಮಿಕ ಸಂಪ್ರದಾಯದಲ್ಲಿ ಜನರು ಶುಭ ಅಶುಭಕ್ಕೆ ತಕ್ಕಂತೆ ಸಂಕೇತಗಳನ್ನು ಸೂಚಿಸುತ್ತಾರೆ. ಈ ಚಿತ್ರದಲ್ಲಿ ಒಂದು ಅಶುಭದ ಹಿನ್ನೆಲೆಯನ್ನು ಸೂಚಿಸಲಾಗಿದೆ. ಕಲಾಕೃತಿಯ ಮಧ್ಯದಲ್ಲಿ ಇರುವ ಆಕೃತಿ ಚಿಂತನಾಶೀಲ ಮನೋಭಾವದಿಂದ ಕೂಡಿದಂತಿದೆ. ಅದರ ಎಡಬಲಗಳಲ್ಲಿ ಶುಭ ಹಾಗೂ ಅಶುಭ ಸಂಕೇತಗಳನ್ನು ಚಿತ್ರಿಸಲಾಗಿದೆ. ಒಟ್ಟಾರೆ ಚಿತ್ರವು ಕಪ್ಪು ವರ್ಣದ ಹಿನ್ನೆಲೆಯಿಂದ ಒಡಗೂಡಿ ಕೆಂಪು ವರ್ಣದ ಬಳಕೆಯಲ್ಲಿ ಪೂರ್ಣಗೊಂಡಿದೆ. ನೀಲಿವರ್ಣವೂ ಇಲ್ಲಿದೆ. ಸ್ತ್ರೀಯಂತೆ ಕಂಡು ಬರುವ ಆಕಾರವು ಕೇಶವಿನ್ಯಾಸ ಹೊಂದಿದೆ. ಲಂಗ, ಇತರೆ ವಸ್ತ್ರಗಳನ್ನು ಧರಿಸಿದೆ. ಆಕೃತಿಯ ಮುಖದಲ್ಲಿ ಕಪ್ಪು ಛಾಯೆ ಹೊರಸುವಂತೆ ಮಾಡಲಾಗಿದೆ.

**ಗೋಳಗುಮ್ಮಟ : ೧೯೬೯**

ಆದಿಲ್‌ಶಾಹಿ ಸುಲ್ತಾನರು ಬಿಜಾಪೂರದಲ್ಲಿ ಹಲವಾರು ಪ್ರಮುಖ ವಾಸ್ತುಶಿಲ್ಪ ಕೃತಿಗಳನ್ನು ನಿರ್ಮಿಸಿದ್ದಾರೆ. ಇವುಗಳಲ್ಲಿ ಗೋಳಗುಮ್ಮಟವು ವಿಶ್ವಪ್ರಸಿದ್ಧವಾಗಿದೆ. ಅದರ ರೂಪವಿನ್ಯಾಸವನ್ನು ಪಾಟೀಲರು ಈ ಕಲಾಕೃತಿಯಲ್ಲಿ ಬಿಂಬಿಸಿದ್ದಾರೆ. ಗೋಳಗುಮ್ಮಟ ವಾಸ್ತುಶಿಲ್ಪ ದೃಷ್ಟಿಯಿಂದ ಇತಿಹಾಸದ ಪುಟದಲ್ಲಿ ವಿಶೇಷಸ್ಥಾನ ಪಡೆದುಕೊಂಡಿದೆ. ಗೋಳಗುಮ್ಮಟದ ಚಿತ್ರರಚನೆ ಮಾಡಿ ಅದರ ಹಿಂದೆ ಪೂರಕ ವಾತಾವರಣದ ಹಿನ್ನೆಲೆ ರಚಿಸಿದ್ದಾರೆ. ವರ್ಣಗಳನ್ನು ವಿವಿಧ ಹಂತ ಮತ್ತು ಛಾಯೆಗಳಲ್ಲಿ ಪರಿವರ್ತಿಸಿ ಲೇಪಿಸಿರುವುದು ಐತಿಹಾಸಿಕ ಸ್ಮಾರಕಗಳು ಇಂದು ಆಕರ್ಷಕವಾಗಿದೆ. ಇದು ಕಲಾವಿದರ ವರ್ಣಕೌಶಲ್ಯವನ್ನು ತಿಳಿಸುತ್ತದೆ. ಜಗತ್ತಿನಾದ್ಯಂತ ಆದರೆ ಹೆಚ್ಚಿನ ಸ್ಮಾರಕಗಳು ನಶಿಸುತ್ತಲಿರುವುದು ದುರದೃಷ್ಟಕರವಾಗಿದೆ. ಪ್ರಸ್ತುತ ಅಂತಹ ಪ್ರಮುಖ ಸ್ಮಾರಕಗಳ ಕಲಾಕೃತಿಯನ್ನು ರಚಿಸಿ ಕಾಯ್ದಿಸಿರುವುದು ಪರಂಪರೆಯ ಉಳಿಕೆಯ ಹಿನ್ನೆಲೆಯಲ್ಲಿ ಗಮನಾರ್ಹ ಸಂಗತಿಯಾಗಿದೆ. ಈ ಕಲಾಕೃತಿ ಪ್ರಖರವಾದ ವರ್ಣಗಳಿಂದ ಪೂರ್ಣಗೊಂಡಿದ್ದು, ನೈಜವಾದ ವಾಸ್ತುಶಿಲ್ಪವನ್ನು ನೆನಪಿಸುತ್ತದೆ. ರೇಖೆ ಮತ್ತು ವರ್ಣ ಲೇಪನ ವಿಧಾನಗಳು ಸಾಮಾರಸ್ಯದಿಂದ ಕೂಡಿವೆ.

**ನೋಟ (ಕೋಳಿ ಮತ್ತು ಮಹಿಳೆ) : ೧೯೭೯**

ಪಾಟೀಲರು ತಮ್ಮ ಹೆಚ್ಚಿನ ಚಿತ್ರಗಳಲ್ಲಿ ಸ್ತ್ರೀಯರ ನಗ್ನಾಕಾರಗಳು ಮತ್ತು ಕಾಮ ಸಣಸಂಬಂಧಿ ಕ್ರಿಯೆಗಳನ್ನು ಅಭಿವ್ಯಕ್ತಿಸಿರುವುದು ಕಂಡು ಬರುತ್ತದೆ. ಅಲ್ಲದೆ ಸಂಕೇತಗಳಿಗಾಗಿ ವಿವಿಧ ಹಕ್ಕಿ, ಕೋಳಿ, ಪಾರಿವಾಳಗಳನ್ನು ಬಳಸಿಕೊಂಡು ಆಕೃತಿಗೆ ವಿಶೇಷವಾದ ಅರ್ಥವಂತಿಕೆಗಳನ್ನು ತಂದುಕೊಡುವಲ್ಲಿ ಯಶಸ್ವಿಯಾಗಿದ್ದಾರೆ. ಈ ಚಿತ್ರದಲ್ಲಿ ಮಹಿಳೆಯೊಬ್ಬಳು ಕೋಳಿಗಳ ಸಮೂಹವನ್ನು ತದೇಕ ಚಿತ್ತದಿಂದ ನೋಡುತ್ತ ಕುಳಿತಿದ್ದಾಳೆ. ಹಾಗಾಗಿಯೇ ಈ ಕೃತಿಗೆ 'ನೋಟ' ಎಂಬ ಶಿರ್ಷಿಕೆ ಕೊಡಲಾಗಿದೆ. ಮಹಿಳೆಯು ಕುಳಿತು ಪರಸ್ಪರ ಮಹಿಳೆಯು ಎದುರಿಗಿರುವ ಕೋಳಿಗಳು ಕಾಳುಗಳಿಗಾಗಿ ಮಹಿಳೆಯನ್ನು ನೋಡುತ್ತಲಿವೆ.

ಕೋಳಿಗಳನ್ನು ನೋಡುತ್ತಿರುವಂತೆ ಅವಳ ಎದುರು ನೋಟಕ್ಕೆ ಪ್ರತೀಕವಾಗಿ ಕೋಳಿಗಳು ಆಕೆಯನ್ನು ಮಹಿಳೆಯ ವೇಷಭೂಷಣ, ಭಾವ ಭಂಗಿಯು ಸಂಪ್ರದಾಯಕ ಹಿನ್ನಲೆಯನ್ನೊಳಗೊಂಡಂತೆ ಕಂಡು ಬರುತ್ತದೆ. ಹಿಂಬದಿಯಲ್ಲಿ ಗ್ರಾಮೀಣ ಪರಿಸರವನ್ನು ತುಂಬಾ ಸ್ಪಷ್ಟವಾಗಿ ಕುಂಚದ ಬೀಸುಗಳಿಂದ ರಚಿಸಲಾಗಿದೆ. ಒಟ್ಟಾರೆ ಚಿತ್ರದ ತಂತ್ರಗಾರಿಕೆ ರಚನಾಶೈಲಿಯನ್ನು ಗಮನಿಸಿದಾಗ ಆಧುನಿಕತೆ ಮತ್ತು ಅಕಾಡಮಿಕ್ ಶೈಲಿಗಳ ಸಮ್ಮಿಶ್ರಣಗಳು ಕಂಡು ಬರುತ್ತವೆ. ಇದು ಸೃಜನಶೀಲತೆಯ ಪ್ರಯೋಗದ ಕೃತಿಯಾಗಿದೆ.

**ವಿಚಾರ (ಪಾರಿವಾಳ ಮತ್ತು ಮಹಿಳೆ) : ೧೯೭೯**

ಈ ಸೃಜನಶೀಲ ಕಲಾಕೃತಿಯು ಆಕ್ರಾಲಿಕ್ ಮಾಧ್ಯಮದಿಂದ ರಚನೆಗೊಂಡಿದ್ದು ವಿಚಾರ ಮಗ್ನಳಾದ ಮಹಿಳೆಯೊಬ್ಬಳು ಪಾರಿವಾಳದೊಂದಿಗೆ ಚಿತ್ರಿತಳಾಗಿದ್ದಾಳೆ. ಮಹಿಳೆ ಪಾರಿವಾಳದೊಂದಿಗೆ ಕುಶಲ ಸಂಭಾಷಣೆಯಲ್ಲಿ ತೊಡಗಿರುವಂತೆ ರಚಿಸಲಾಗಿದೆ. ಮಹಿಳೆಯ ದೇಹವು ಆಧುನಿಕ ಶೈಲಿಯಲ್ಲಿದ್ದು ದಟ್ಟ ಕಂದು ಬಣ್ಣದ ರಭಸದ ಎಳೆತಗಳಿಂದ ಪೂರೈಸಲಾಗಿದೆ. ಮುಖ ಭಾವಕ್ಕೆ ಪೂರಕವಾಗಿರುವಂತೆ ವರ್ಣವಿನ್ಯಾಸ ಮಾಡಲಾಗಿದೆ. ಇಲ್ಲಿ ಸ್ತ್ರೀಯ ಶೃಂಗಾರ ರಸಾನುಭೂತಿಯು ನೋಡುಗರಲ್ಲಿ ಸಹಿತ ಮಿಡಿಯುವಂತಿದೆ.

ಹಿಂದೆ ಕುಳಿತಿರುವ ಕೆಲವು ಪಕ್ಷಿಯ ಕಣ್ಣುಗಳು ಮತ್ತು ಮಹಿಳೆಯ ಕಣ್ಣುಗಳ ಸ್ಪಷ್ಟವಾಗಿ ತೆರೆದುಕೊಂಡಿವೆ. ವಿಚಾರಕ್ಕೆ ವಿನಂಮ್ರತೆಯು ಎತ್ತರವನ್ನು ನೀಡುತ್ತಿದ್ದು ಸ್ತ್ರೀಯು ಮತ್ತು ಈ ಆಕೃತಿಯಲ್ಲಿ ಬಳಸಿರುವ ಸೀಮಿತ ವರ್ಣಗಳು ಸೌಮ್ಯತೆಯ ಅನುಭವವನ್ನು ತಂದಿವೆ. ಸ್ತ್ರೀಯ ಗಲ್ಲಕ್ಕೆ ಮತ್ತು ಕೈಮೇಲೆ ಹಚ್ಚೆಯ ಗುರುತನ್ನು ಕೂಡ ರೂಪಿಸಲಾಗಿದೆ. ಈ ಕಲಾಕೃತಿಯಲ್ಲಿ ಪಾರಿವಾಳವನ್ನು ಪ್ರೇಮದ ಸಂದೇಶವಾಗಿ ಬಳಸಿಕೊಂಡಿರುವುದು ಪುರಾಣ ಕಾಲದ ಪದ್ದತಿಯನ್ನು ಪುನಃ ಕಟ್ಟಿಕೊಡುತ್ತದೆ.

**ದಂಪತಿಗಳು : ೧೯೯೦**

ಡ್ರೈಪೆನ್ಸಿಲ್ ಮಾಧ್ಯಮದ ಈ ಕಲಾಕೃತಿಯಲ್ಲಿ ದಂಪತಿಗಳು ಒಬ್ಬರನ್ನೊಬ್ಬರು ಸ್ಪಂದಿಸುವ ಮೂಲಕ ರತಿಕ್ರೀಡೆಗೆ ಅಣಿಯಾಗುತ್ತಿರುವಂತೆ ಕಂಡು ಬರುತ್ತದೆ. ಪ್ರಕೃತಿಯ ದಟ್ಟವಾದ ಸುಗಮವಾದ ಹವಾಗುಣವು ಎಂತವರನ್ನು ಮೈಮರೆಸುತ್ತದೆ. ಪ್ರಕೃತಿಯ ಸುಂದರ ಪರಿಸರ, ಆಹ್ಲಾದಕರವಾದ ಹವಾಗುಣ, ಮೈಮರೆಸುವ ಹೂವುಗಳ ಸೌಂದರ್ಯತೆ ಇವುಗಳ ಹಿನ್ನೆಲೆಯಲ್ಲಿ ಸ್ತ್ರೀಪುರುಷರಿಬ್ಬರು ಒಬ್ಬರನ್ನೊಬ್ಬರು ಸ್ಪರ್ಶಿಸುವ ಮೂಲಕ ಕಾಮವು ಉದ್ದೀಪನಗೊಂಡಿರುತ್ತದೆ.

ಭಾವಗಳೆರಡು ಬೆರೆತು ಕಲ್ಪನಾ ಲಹರಿಯನ್ನು ಮೀರಿದಂತೆ ನೋಟಗಳು ಕಂಡು ಬರುತ್ತವೆ. ನೋಟಗಳೆರಡು ಇಬ್ಬರ ಮನಸ್ಸುಗಳು ಬೆರೆತು ಕೊಂಡಿದ್ದು, ದೇಹಗಳು ಬೆರೆತುಕೊಳ್ಳುವುದಕ್ಕೆ ಅಣಿಯಾಗಿವೆ. ಸಾಗರದ ದಡದಲ್ಲಿ ನೀರಿನ ಅಲೆಗಳಲ್ಲಿ ತೇಲಿದಂತೆ ಕಲಾಕೃತಿಯು ಸಂಯೋಜನೆಗೊಂಡಿದೆ. ಸ್ತ್ರೀಪುರುಷರು ಧರಿಸಿರುವ ವಸ್ತ್ರಗಳು ಸೀಮಿತ ಉಡುಪುಗಳಾಗಿದ್ದು, ಬಿಳಿ ಮತ್ತು ತಿಳಿಕೆಂಪು ವರ್ಣಗಳು ದೇಹಾಂಲಕಾರಕ್ಕೆ ಮೆರಗುತಂದಿವೆ

**ಅಮೂರ್ತ ಕಲಾಕೃತಿ : ೧೯೯೦**

ಹಿಂದಿನ ಕೃತಿಗಳ ನಿರ್ವಹಣೆ ಮತ್ತು ಆಶ್ರಯಗಳಿಗಿಂತ ವಿಭಿನ್ನವಾದ ನಿಲುವಿನಲ್ಲಿ ಈ ಕೃತಿಯನ್ನು ರಚಿಸಲಾಗಿದೆ. ವರ್ಣಗಳ ಪ್ರತಿಬಿಂಬ ಉಂಟಾಗುವಂತೆ ಕುಂಚದ ಬೀಸುಗಳನ್ನು ಎಳೆಯಲಾಗಿದೆ. ಈ ಕೃತಿಯಲ್ಲಿ ಕೆಲವು ಮೂರ್ತ ಹಾಗೂ ಕೆಲವು ಅಮೂರ್ತ ಆಕಾರಗಳು ರಚನೆಯಾಗಿವೆ. ಈ ಕಲಾಕೃತಿಯ ವರ್ಣಮೇಳದಲ್ಲಿ ಪ್ರಮುಖವಾಗಿ ಆಕರ್ಷಕವಾಗಿದೆ. ನಾಲ್ಕು ವರ್ಣಗಳು ಬಳಕೆಯಾಗಿವೆ. ಕೆಂಪು ನೀಲಿ ಕಪ್ಪು, ಬಿಳಿ ಹೀಗೆ ಒಂದನ್ನೊಂದು ಸಂಯೋಜನೆಗೊಳಿಸಲಾಗಿದೆ. ತೈಲವರ್ಣದಿಂದ ರಚನೆಯಾದ ಈ ಕಲಾಕೃತಿಯು ಆಧುನಿಕ ಶೈಲಿಯಲ್ಲಿ ಪ್ರತಿಬಿಂಬಿಸಿದೆ.

**ಎಂಭತ್ತರಿಂದ ತೊಂಭತ್ತರ ದಶಕದ ಕಲಾಕೃತಿಗಳ ವಿಶ್ಲೇಷಣೆ :**

ಈ ದಶಕದಲ್ಲಿ ಪಾಟೀಲರು ರಚಿಸಿರುವ ಕಲಾಕೃತಿಗಳನ್ನು ಸೂಕ್ಷ್ಮವಾಗಿ ಗಮನಿಸಿದಾಗ ಅವರೊಬ್ಬ ಭಾವಚಿತ್ರ ಕಲಾವಿದರಾಗಿ ತಮ್ಮನ್ನು ಗುರುತಿಸಿಕೊಳ್ಳಲು ಪ್ರಯತ್ನಿಸುತ್ತಿರುವಂತೆ ಕಂಡು ಬರುತ್ತದೆ. ಈ ದಶಕದ ಅವಧಿಯಲ್ಲಿ ಇತರ ವಿಷಯಗಳ ಜೊತೆಗೆ ಹೆಚ್ಚಿನ ಸಂಖ್ಯೆಯಲ್ಲಿ ಭಾವಚಿತ್ರಗಳನ್ನು ರಚಿಸಿದ್ದಾರೆ. ಈ ದಶಕದಲ್ಲಿ ಅಧ್ಯಯನಕ್ಕಾಗಿ ಅವರ ಸುಮಾರು ಎಪ್ಪತ್ತೈದು ಕಲಾಕೃತಿಗಳನ್ನು ಪರಿಗಣಿಸಲಾಗಿದೆ.

ಈ ಅವಧಿಯಲ್ಲಿ ಕೆಲವು ಹೊಸ ಸಂಗತಿಗಳು ಅವರ ಮನಕಲಕಿರುವುದು ಕಂಡು ಬರುತ್ತದೆ. ಅವುಗಳ ಜೊತೆಗೆ ಅವರ ಎಂದಿನ ಆಸಕ್ತಿಯ ವಿಷಯಗಳು ಚಿತ್ರಣಗೊಂಡಿವೆ. ಈ ದಶಕದಲ್ಲಿ ಭಾವಚಿತ್ರಗಳು, ಹಳ್ಳಿ ಹಾಗೂ ನಗರ ಪ್ರದೇಶಗಳು, ಬೆಟ್ಟಗುಡ್ಡ, ಕಾಡು ಮೇಡುಗಳ ನಿಸರ್ಗದೃಶ್ಯಗಳು ರಚನೆಗೊಂಡಿವೆ. ಅಲ್ಲದೆ ಪ್ರೀತಿ, ಪ್ರೇಮ, ನಗ್ನತೆ, ಸಂಭೋಗದಲ್ಲಿ ನಿರತ ದಂಪತಿಗಳು, ಸಾಂಸಾರಿಕ ಸಮಸ್ಯೆಯನ್ನು ಬಿಂಬಿಸುವ ಘಟನಾವಳಿಗಳು ರಚನೆಯಾಗಿವೆ.

ಪ್ರಾರಂಭಿಕ ದಶಕದಲ್ಲಿನ ಕಲಾಕೃತಿಗಳು ಬಾಲ್ಯದ ನೆನಪುಗಳು ಹಾಗೂ ತಾವು ಬೆಳೆದ ಹಳ್ಳಿಯ ಪರಿಸರದ ಸಂಗತಿಗಳನ್ನು ಹೆಚ್ಚಾಗಿ ಒಳಗೊಂಡಿದ್ದರೆ, ಈ ದಶಕದಲ್ಲಿ ತಾವು ಅಧ್ಯಯನ ಮಾಡಿದ ನಗರ ಪ್ರದೇಶದ ಪರಿಸರ ಹಾಗೂ ಅನುಭವಗಳನ್ನು ಹೆಚ್ಚಾಗಿ ಅವಲಂಬಿಸಿವೆ.

ಈ ಅವಧಿಯಲ್ಲಿ ಪಾಟೀಲರ ಆಂತರಿಕ ಮನಸ್ಸು ಸಾಂಸಾರಿಕ ಬದುಕು, ದುಡಿಮೆ, ನಿತ್ಯಜೀವನದ ಘಟನಾವಳಿಗಳು, ಕುಟುಂಬ ಜೀವನದಲ್ಲಿ ಮಹಿಳೆಯ ಪಾತ್ರಗಳ ಬಗ್ಗೆ ಹರಿದಾಡಿರುವುದು ಕಲಾಕೃತಿಗಳಿಂದ ಕಂಡು ಬರುತ್ತದೆ. ಆಡು ಕಾಯುವ ಮಹಿಳೆ, ಶೃಂಗರಿಸಿಕೊಳ್ಳುತ್ತಿರುವ ಮಹಿಳೆ, ದಂಪತಿಗಳು ಕೆಲಸದಲ್ಲಿ ನಿರತರಾಗಿರುವುದು, ಶುಭ ಮತ್ತು ಅಶುಭ ಸಂಕೇತಗಳ ಬಗೆಗಿನ ಕೃತಿಗಳು, ಕೋಳಿ ಮತ್ತು ಮಹಿಳೆ, ಮಲಗಿಕೊಂಡಿರುವ ಮಹಿಳೆ ಇಂತಹ ಕೃತಿಗಳು ಈ ಮಾತಿಗೆ ಪುಷ್ಠಿಯನ್ನೊದಗಿಸುತ್ತವೆ.

ಈ ಅವಧಿಯಲ್ಲಿ ರಚಿಸಲ್ಪಟ್ಟ ಗೋಳಗುಮ್ಮಟ ಕಲಾಕೃತಿಯು ಅವರ ಐತಿಹಾಸಿಕ ಪರಂಪರೆಯ ಬಗೆಗಿನ ಆಸಕ್ತಿಯನ್ನು ತೋರಿಸುವುದರ ಜೊತೆಗೆ ತವರು ಜಿಲ್ಲೆಯ ಪ್ರಸಿದ್ಧ ಸ್ಮಾರಕವನ್ನು ಚಿತ್ರದ ಮೂಲಕ ಅಭಿವ್ಯಕ್ತಿಸಿರುವುದು ಇಲ್ಲಿ ಗಮನಾರ್ಹವಾಗಿದೆ. ಅಲ್ಲದೆ ಯೋಗಾಸನ ಎಂಬ ಚಿತ್ರವು ಪ್ರೌಢಾವಸ್ಥೆಯಲ್ಲಿ ಯುವಕರು ತಮ್ಮ ದೈಹಿಕ ಸೌಂದರ್ಯಕ್ಕಾಗಿ ಹಾತೊರೆಯುವ ಸಂಕೇತವನ್ನು ನೀಡುತ್ತವೆ.

ವಿರಹದಲ್ಲಿರುವ ಮಹಿಳೆ, ಅಮ್ಮನ ಮಡಿಲು, ಚಿಂತೆ ಎಂಬ ಕಲಾಕೃತಿಗಳು ಕುಟುಂಬ ಜೀವನದ ಪ್ರತಿಬಿಂಬದಂತಿವೆ. ವಿರಹ ಕೃತಿಯಲ್ಲಿ ಅದೇ ತಾನೆ ಮದುವೆಯಾದ ಮಹಿಳೆಯೊಬ್ಬಳು ತನ್ನ ಪತಿಯ ಬರುವಿಕೆಗಾಗಿ ಕಾಯ್ದು ಕುಳಿತಿದ್ದಾಳೆ. ರಾತ್ರಿಯಾಗುತ್ತಿದ್ದಂತೆ ಆಕೆಯ ವಿರಹತಾಪ ಹೆಚ್ಚಾಗಿರುವಂತೆ ಚಿತ್ರಿಸಲಾಗಿದೆ. ಚಿಂತೆ ಎಂಬ ಕಲಾಕೃತಿಯಲ್ಲಿ ಸಹಿತ ಮಹಿಳೆಯೊಬ್ಬಳು ಯಾವುದೋ ಕೌಟುಂಬಿಕ ಸಮಸ್ಯೆಯಲ್ಲಿ ತೊಳಲಾಡುತ್ತ ದೀರ್ಘವಾದ ಚಿಂತೆಯಲ್ಲಿ ತೊಡಗಿರುವಂತಿದೆ. ತಾಯಿ ಮಗು ಕಲಾಕೃತಿ ವಾತ್ಸಲ್ಯದ ಸಂಕೇತದಂತಿದೆ. ಮುಖವಾಡಗಳು ಎಂಬ ಕೃತಿಯಲ್ಲಿ ಪಾಟೀಲರು ತಮ್ಮ ಬಾಲ್ಯದ ಆಟ, ಪಾಠ ಹಾಡು

ಕುಣಿತಗಳನ್ನು ಸಾಂಕೇತಿಕವಾಗಿ ಅನಾವರಣಗೊಳಿಸಿದ್ದಾರೆ. ಗೋಲಿ ಆಡುವುದು, ಚಿಣಿಪಣಿ ಆಡುವುದು, ಕುಂಟುಬಿಲ್ಲೆ ಆಡುವುದು ಗಿಡಮಂಗನಾಟ ಹೀಗೆ ಹಲವಾರು ಆಟಗಳನ್ನು ಇಲ್ಲಿ ನೆನಪಿಸಿ ಕೊಂಡಿದ್ದಾರೆ. ಜೊತೆಗೆ ಗ್ರಾಮೀಣ ಪರಿಸರದಲ್ಲಿ ಮೊಹರಂ ಹಬ್ಬದಲ್ಲಿ ಮಕ್ಕಳಾದಿಯಾಗಿ ಯುವಕರು ಧರಿಸಿ ಕುಣಿಯುವ ಹುಲಿವೇಷವನ್ನು ಈ ಕೃತಿಯಲ್ಲಿ ಸಾಂಕೇತಿಕವಾಗಿ ಬಿಂಬಿಸಲಾಗಿದೆ.

ಸಂತಾಪ ಎಂಬ ಕೃತಿ ಸ್ತ್ರೀಯರ ಸಮಸ್ಯೆಗಳ ಹಿನ್ನೆಲೆಯಲ್ಲಿ ಬಿಚ್ಚಿಕೊಂಡಿದೆ. ಇಲ್ಲಿ ಮಹಿಳೆಯರಿಬ್ಬರು ಯಾವುದೋ ಗಂಭೀರ ಸಮಸ್ಯೆಯ ಬಗ್ಗೆ ಚರ್ಚಿಸುತ್ತಿರುವಂತಿದೆ. ತಮ್ಮಲ್ಲಿಯೇ ಅದಕ್ಕೊಂದು ಪರಿಹಾರ ಹುಡುಕುವ ನಿಟ್ಟಿನಲ್ಲಿ ಅವರ ಚರ್ಚಿಸಲಾಗಿದೆ. ಪ್ರಕೃತಿ ಮತ್ತು ಸ್ತ್ರೀ ಕಲಾಕೃತಿಯಲ್ಲಿ ಮಹಿಳೆಯನ್ನು ಪ್ರಕೃತಿಗೆ ಹೋಲಿಸಿ ಚಿತ್ರಿಸಲಾಗಿದೆ. ಇಲ್ಲಿ ಪ್ರಕೃತಿ ಮತ್ತು ಸ್ತ್ರೀ ಇಬ್ಬರನ್ನು ಫಲವಂತಿಕೆಯ ಸಂಕೇತವಾಗಿ ಬಿಂಬಿಸಲಾಗಿದೆ. ಜೊತೆಗೆ ಪ್ರಕೃತಿ ಮತ್ತು ಸ್ತ್ರೀಯರ ಫಲವಂತಿಕೆಗೆ ಪುರುಷ ಶಕ್ತಿಯು ಬೀಜಫಲವಾಗಿದೆ ಎಂಬುದನ್ನು ಸಂಕೇತಗಳ ಮೂಲಕ ತೋರಿಸಲಾಗಿದೆ.

ಹಾರುತ್ತಿರುವ ಕುದುರೆ, ಪ್ರೇಮ ಸಂದೇಶ, ಮಾತು, ಮೋಡಗಳು, ಈ ಕೃತಿಗಳು ಪ್ರೇಮ, ಕಾಮ, ಪ್ರೀತಿ, ಪೌರುಷತ್ವ, ಸ್ತ್ರೀ ಭಾವನೆಗಳ ಬಗ್ಗೆ ಸೂಚ್ಯವಾಗಿ ವಿವೇಚಿಸುತ್ತವೆ. ಹಾರುತ್ತಿರುವ ಕುದುರೆ ಕೃತಿಯಲ್ಲಿ ಪಾಟೀಲರು ಪೌರುಷದ ಸಂಕೇತವಾಗಿ ಕುದುರೆಯನ್ನು ಚಿತ್ರಿಸಿದ್ದಾರೆ. ಸ್ತ್ರೀಯೊಬ್ಬಳು ನಗ್ನವಾಗಿ ಮಲಗಿದ್ದಾಳೆ. ಮತ್ತೊಬ್ಬಳು ನಗ್ನವಾಗಿದ್ದು ಕುದುರೆಯನ್ನು ಅಪ್ಪಿಕೊಂಡಿದ್ದಾಳೆ. ರೇಖಾ ಪ್ರಧಾನವಾಗಿ ಈ ಕೃತಿ ರಚನೆಯಾಗಿದ್ದರೂ ಕೃತಿಯ ಆಶಯಕ್ಕೆ ಭಂಗ ಉಂಟಾಗಿಲ್ಲ. ಪ್ರೇಮ ಸಂದೇಶ ಹಾಗೂ ಮೋಡಗಳು ಎಂಬ ಕೃತಿಗಳು ಪ್ರಾಚೀನಕಾಲದ ಸಂದೇಶವಾಹಕಗಳ ಸ್ಥೂಲ ನೋಟವನ್ನು ಬಿಂಬಿಸುತ್ತವೆ. ಪ್ರೇಮ ಸಂದೇಶ ಕೃತಿಯಲ್ಲಿ ಮಹಿಳೆಯೊಬ್ಬಳು ಪಾರಿವಾಳದೊಂದಿಗೆ ಏನೋ ಸಂಗತಿಯನ್ನು ಚರ್ಚಿಸುತ್ತಿರುವಂತೆ ಚಿತ್ರಿಸಲಾಗಿದೆ. ತನ್ನ ಪ್ರೇಮ ಸಂದೇಶ ಹಾಗೂ ವಿರಹವೇದನೆಗಳನ್ನು ತನ್ನ ಪ್ರೀಯತಮನಿಗೆ ಮುಟ್ಟಿಸಲು ಪಾರಿವಾಳವನ್ನು ಕೇಳಿಕೊಳ್ಳುತ್ತಿರುವಂತೆ ಚಿತ್ರಿಸಲಾಗಿದೆ.

ಪ್ರಾಚೀನ ಕಾಲದಲ್ಲಿ ಕಥೆ ಕಾದಂಬರಿ ಹಾಗೂ ಪುರಾಣಗಳಲ್ಲಿ ಯುವಕ ಯುವತಿಯರು ತಮ್ಮ ಪ್ರೇಮಸಂದೇಶಗಳನ್ನು ಪಾರಿವಾಳ ಇಲ್ಲವೆ ಗಿಳಿಗಳ ಮೂಲಕ ಪರಸ್ಪರ ವಿನಿಮಯ ಮಾಡಿಕೊಳ್ಳುತ್ತಿದ್ದರು ಎಂಬುದಾಗಿ ವಿವರಣೆಗಳಿವೆ. ಇಂತಹ ಸಂದೇಶವಾಹಕವನ್ನು ಮೋಡಗಳಿಗೂ ಆರೋಪಿಸಿರುವುದು ಪ್ರಾಚೀನ ಸಾಹಿತ್ಯದಲ್ಲಿ ಕಂಡು ಬರುತ್ತದೆ. ಕಾಳಿದಾಸನ

'ಮೇಘಸಂದೇಶ'ದಲ್ಲಿ ಪ್ರಿಯತಮೆ ತನ್ನ ವಿರಹವೇದನೆಯನ್ನು ಪ್ರಿಯಕರನಿಗೆ ತಿಳಿಸು ಎಂದು ಕೇಳಿಕೊಳ್ಳುವ ಸಂಗತಿ ಪ್ರಖ್ಯಾತವಾಗಿದೆ. ಬಾಣಭಟ್ಟನ 'ಕಾದಂಬರಿ'ಯಲ್ಲಿ ಗಿಳಿಯು ಸಂದೇಶವಾಹಕವಾಗಿ ಕೆಲಸ ನಿರ್ವಹಿಸುವುದು ಸಹಿತ ಅಷ್ಟೇ ಪ್ರಸಿದ್ಧಿ ಪಡೆದಿದೆ. ಇಲ್ಲಿರುವ ಮತ್ತೊಂದು ಕಲಾಕೃತಿಯಾದ ಮಾತು ಎಂಬ ಕೃತಿಯಲ್ಲಿ ಸಹಿತ ಪ್ರೇಮಸಂದೇಶದ ಭಾವನೆಯನ್ನು ಪಾಟೀಲರು ತುಂಬಿದಂತೆ ಕಂಡು ಬರುತ್ತದೆ. ಯುವತಿಯರಿಬ್ಬರು ನಗ್ನಕಾರದಲ್ಲಿ ಒಂದು ಗಿಡದ ಕೆಳಗೆ ಮಾತನಾಡುತ್ತ ನಿಂತಿದ್ದಾರೆ.

ಪರಸ್ಪರ ತಮ್ಮ ಪ್ರಿಯಕರರ ವಿಷಯಗಳನ್ನು ಇವರು ಚರ್ಚಿಸುತ್ತಿದ್ದು, ಗಿಡದ ಮೇಲೆ ಎರಡು ಪಕ್ಷಿಗಳು ಜೋಡಿಯಾಗಿ ಕುಳಿತುಕೊಂಡಿವೆ. ವಿಚಾರ ಎಂಬ ಕಲಾಕೃತಿಯಲ್ಲಿ ಮಹಿಳೆ ಮತ್ತು ಪಾರಿವಾಳಗಳನ್ನು ಚಿತ್ರಿಸಲಾಗಿದೆ. ತನ್ನ ಮನೋವೇದನೆಗಳನ್ನು ವಿರಹತಾಪಗಳನ್ನು ಪ್ರಿಯಕರನಿಗೆ ಮುಟ್ಟಿಸಲು ಕಾಗದ ಒಂದನ್ನು ಪಾರಿವಾಳಕ್ಕೆ ಮಹಿಳೆ ನೀಡುತ್ತಿದ್ದಾಳೆ. ನಂತರ ಆ ಪಾರಿವಾಳ ಅದನ್ನು ಕೊಕ್ಕಿನಲ್ಲಿ ಹಿಡಿದುಕೊಂಡು ಹಾರಲು ಅಣಿಯಾಗುತ್ತಿದೆ. ಎಂಬಂತೆ ಚಿತ್ರಿಸಲಾಗಿದೆ.

ಹಳ್ಳಿಯ ಮನೆಗಳು, ನಮ್ಮ ಮನೆಯ ಬಾಗಿಲು, ಗೃಹಿಣಿ ಎಂಬ ಕೃತಿಗಳಲ್ಲಿ ಗ್ರಾಮೀಣರು ಹಬ್ಬಹರಿದಿನಗಳಲ್ಲಿ ತಮ್ಮ ಮನೆಗಳನ್ನು ಜನಪದ ಚಿತ್ರಗಳಿಂದ ಅಲಂಕರಿಸುವ ಸಂಸ್ಕೃತಿಯನ್ನು ಪರೋಕ್ಷವಾಗಿ ಪಾಟೀಲರು ಅನುಭವದ ಹಿನ್ನೆಲೆಯಲ್ಲಿ ಅನಾವರಣಗೊಳಿಸಿದ್ದಾರೆ. ನಮ್ಮ ಮನೆಯ ಬಾಗಿಲು ಕಲಾಕೃತಿಯಲ್ಲಿ ಬಾಗಿಲೊಂದನ್ನು ಚಿತ್ರಿಸಲಾಗಿದೆ. ಅದರ ಎಡಬಲದಲ್ಲಿ ಹಾಗೂ ಮೇಲೆ ಅಲಂಕಾರಿಕ ನಕ್ಷಾವಿನ್ಯಾಸಗಳನ್ನು ರಚಿಸಲಾಗಿದೆ. ಅದರಂತೆ ಗೃಹಿಣಿ ಎಂಬ ಕೃತಿಯಲ್ಲಿ ಮಹಿಳೆಯೊಬ್ಬಳು ಸಾಂಪ್ರದಾಯಿಕ ವೇಷಭೂಷಣಗಳಿಂದ ಅಲಂಕೃತಳಾಗಿ ಮನೆಯ ಬಾಗಿಲೊಂದರ ಮುಂದೆ ನಿಂತುಕೊಂಡಿರುವಂತೆ ಚಿತ್ರಿಸಲಾಗಿದೆ. ಇಲ್ಲಿ ಮಹಿಳೆಯ ಹಿಂದಿರುವ ಬಾಗಿಲು ಸುಂದರವಾಗಿ ಮೂಡಿಬಂದಿದೆ.

ಬಾಗಿಲಿನ ಎಡಬಲಗಳಲ್ಲಿ ಹಿಂದಿನ ಗೋಡೆಯುದ್ದಕ್ಕೂ ಬಣ್ಣದ ಪಟ್ಟಿಗಳನ್ನೆಳೆದು ಇಡೀ ಮನೆಯನ್ನು ಶೃಂಗರಿಸಲಾಗಿದೆ. ಈ ದಶಕದಲ್ಲಿ ರಚಿಸಿರುವ ನಿಸರ್ಗ ಚಿತ್ರಗಳಲ್ಲಿ ಪಾಟೀಲರು ಹೊಸ ಚಿತ್ರಶೈಲಿಗೆ ಹುಡುಕಾಟ ಮಾಡುತ್ತಿರುವುದನ್ನು ತಿಳಿಸಿಕೊಡುತ್ತವೆ. ಜೊತೆಗೆ ಪಾಶ್ಚಾತ್ಯ ಆಧುನಿಕ ಕಲಾಶೈಲಿಗಳ (ಇಜಮ್ಸ್) ಪ್ರಭಾವಕ್ಕೆ ತಮ್ಮನ್ನು ತೆರೆದುಕೊಳ್ಳುತ್ತಿರುವುದನ್ನು ಸೂಚಿಸುತ್ತವೆ. ಹಾಗಾಗಿಯೇ ಈ ಹಂತದಲ್ಲಿ ರಚಿಸಿದ ಹಳ್ಳಿಯ ನಿಸರ್ಗ ದೃಶ್ಯಗಳು ಅಮೂರ್ತ ಶೈಲಿಯಲ್ಲಿವೆ.



ಶ್ಯಾಮಲಭಾಯಿ ಭಾವಚಿತ್ರ, 1981, 24x30



ನಗರದ ದೃಶ್ಯ, 1981, 24x30





ಬಾಲಕಿಯ ಭಾವಚಿತ್ರ, 1981, 24X30



ಅಮ್ಮನ ಮಡಿಲು, 1981, 24X30



# ಎಂಭತ್ತರಿಂದ ತೊಂಭತ್ತರ ದಶಕದ ಕಲಾಕೃತಿಗಳು



ತಾಯಿ ಮತ್ತು ಮಗು, 1982, 18X24



ಪ್ರೇಮ ಸಂದೇಶ, 1982, 24X30



ಪರ್ವತ ಶ್ರೇಣಿ, 1983, 24X30



ನಿಸರ್ಗ ಚಿತ್ರಣ, 1983, 24X30





ನಗರ ದೃಶ್ಯ, 1983, 18X18



ಸಂತಾಪ, 1983, 18X24





ಮುಖವಾಡಗಳು, 1983, 24X30



ಗ್ರಾಮೀಣ ಪರಂಪರೆ, 1983, 24X30



ಚಿಂತೆ, 1984, 12X18



ಹಳ್ಳಿಯ ಮಹಿಳೆ, 1984, 24x30



## ಎಂಭತ್ತರಿಂದ ತೊಂಭತ್ತರ ದಶಕದ ಕಲಾಕೃತಿಗಳು



ಕಾಗೆ, 1984, 24X30



ಜೆ.ಎಂ.ಎಸ್.ಮಣಿ ಅವರ ಭಾವಚಿತ್ರ, 1984, 18X24





ಭಾವಚಿತ್ರ, 1984, 18X18



ವ್ಯಕ್ತಿ ಭಾವಚಿತ್ರ, 1985, 18X24





ಭಾವಚಿತ್ರ, 1985, 18X24





ಭಾವಚಿತ್ರ, 1985, 18X24



ಆರ್.ಎಂ.ಹಡಪದ ಭಾವಚಿತ್ರ, 1985, 18X24



ಮಹಿಳೆಯ ಭಾವಚಿತ್ರ, 1985, 18X24





ಗೃಹಣಿ, 1985, 18X24



ಭಾವಚಿತ್ರ, 1985, 18X24





ಸ್ಥಿರ ಚಿತ್ರಣ, 1985, 18X24



ಹಳ್ಳಿಯ ಮನೆಗಳು, 1986, 24X30





ಶೃಂಗರಿಸಿಕೊಳ್ಳುತ್ತಿರುವ ಮಹಿಳೆ, 1986, 30x30



ಮಹಿಳೆ ಮತ್ತು ರಾತ್ರಿ, 1986, 30X30





ಸ್ತ್ರೀ, 1986, 30x30



ಆಡು ಕಾಯುತ್ತಿರುವ ಮಹಿಳೆ, 1987, 24x30





ಶಾಮಲಾಜಿ ಭಾವೆ ತಂದೆಯವರ ಭಾವಚಿತ್ರ, 1987, 24x30



ಜಲವರ್ಣ ನಿಸರ್ಗ ಚಿತ್ರಣ, 1987, 24x30





ಜೋಕಾಲಿಯಲ್ಲಿ ಕುಳಿತ ಸ್ತ್ರೀ, 1987, 18X24



ಜಲವರ್ಣ ನಿಸರ್ಗ ಚಿತ್ರಣ, 1987, 18X24





ಜಲವರ್ಣ ನಿಸರ್ಗ ಚಿತ್ರಣ, 1988, 18X24



ಜಲವರ್ಣದಲ್ಲಿ ನಡುಗಡ್ಡೆ ದೃಶ್ಯ, 1988, 18X24





ಮೋಡಗಳು, 1988, 18X24



ಮಲಗಿರುವ ಸ್ತ್ರೀ, 1988, 12X18



## ಎಂಭತ್ತರಿಂದ ತೊಂಭತ್ತರ ದಶಕದ ಕಲಾಕೃತಿಗಳು



ನೃತ್ಯಗಾರ್ತಿ, 1988, 12X18



ಮಾತು, 1988, 24X30





ನಮ್ಮ ಮನೆಯ ಬಾಗಿಲು, 1988, 24x30



ಓಡುತ್ತಿರುವ ಕುದುರೆ, 1988, 24x30



ಎಂಭತ್ತರಿಂದ ತೊಂಭತ್ತರ ದಶಕದ ಕಲಾಕೃತಿಗಳು



ವಿಚಾರ (ಪಾರಿವಾಳ ಮತ್ತು ಮಹಿಳೆ), 1989, 24X30



ದಂಪತಿಗಳು, 1990, 24X30



ಈ ಸಂದರ್ಭದಲ್ಲಿ ಜಲವರ್ಣ ನಿಸರ್ಗಚಿತ್ರಗಳ ರಚನೆಯಲ್ಲಿ ಹಲವಾರು ಪ್ರಯೋಗಗಳನ್ನು ಮಾಡಿರುವುದು ಕಂಡು ಬರುತ್ತದೆ. ಇಲ್ಲಿ ಕಾಗದವನ್ನು ತೋಯಿಸಿ (ಒದ್ದೆ ಮಾಡಿ) ಅದು ಹಸಿ ಇರುವಾಗಲೇ ತಮಗೆ ಬೇಕಾದ ವರ್ಣಗಳನ್ನು ಅದರ ಮೇಲೆ ಲೇಪಿಸಿ ನೀರಿನೊಂದಿಗೆ ವರ್ಣಗಳು ಜಾರುವಂತೆ ಮಾಡಲಾಗಿದೆ. ನಂತರ ಸ್ವಲ್ಪ ಒಣಗಿದ ಮೇಲೆ ಸೃಷ್ಟಿಗೊಂಡ ಆಕಾರಗಳಿಗೆ ಬೇಕಾದಲ್ಲಿ ಕುಂಚದ ಬೀಸುಗಳಿಂದ ಬಣ್ಣದ ಲೇಪನ ಮಾಡಿ ಮೈವಳಿಕೆ ಹಾಗೂ ಆಯಾಮಗಳನ್ನು ಸೃಷ್ಟಿಸಲಾಗಿದೆ. ಇಂತಹ ಸುಮಾರು ಹತ್ತು ಕಲಾಕೃತಿಗಳನ್ನು ಈ ದಶಕದಲ್ಲಿ ಅಧ್ಯಯನಕ್ಕೊಳಪಡಿಸಲಾಗಿದೆ.

ಸಮಕಾಲೀನ ಸಂದರ್ಭದ ಪ್ರಸಿದ್ಧ ವ್ಯಕ್ತಿಗಳು, ಮಿತ್ರರು, ಆಪ್ತರು, ಕುಟುಂಬ ಸದಸ್ಯರ ಭಾವಚಿತ್ರಗಳು ಸಹಿತ ಈ ದಶಕದಲ್ಲಿ ರಚನೆಗೊಂಡಿವೆ. ಬಾಲಕಿಯ ಭಾವಚಿತ್ರ, ಆರ್.ಎಂ. ಹಡಪದ ಅವರ ಭಾವಚಿತ್ರ, ಜೆ.ಎಂ.ಎಸ್. ಮಣಿಯವರ ಭಾವಚಿತ್ರ, ಮುಂತಾದವುಗಳು ಈ ಹಿನ್ನೆಲೆಯಲ್ಲಿ ಪ್ರಮುಖವಾಗಿವೆ. ಒಟ್ಟಾರೆ ಈ ದಶಕದ ಚಿತ್ರಗಳ ಅವಲೋಕನ ಮಾಡಿದಾಗ ಅವರು ಪ್ರಬುದ್ಧವಾಗಿ ಬೆಳೆಯುತ್ತಿರುವುದು ಆ ನಿಟ್ಟಿನಲ್ಲಿ ನಿರಂತರ ಪ್ರಯೋಗಗಳನ್ನು ನಡೆಸಿರುವುದು ಕಂಡು ಬರುತ್ತದೆ.

**೦೪. ತೊಂಭತ್ತರಿಂದ ಎರಡು ಸಾವಿರ ಇಸ್ವಿವರೆಗಿನ ಕಲಾಕೃತಿಗಳು :**

ಪಾಟೀಲರು ೧೯೯೧ ರಿಂದ ೨೦೦೦ ಇಸ್ವಿವರೆಗೆ ರಚಿಸಿದ ಪ್ರಮುಖ ಕಲಾಕೃತಿಗಳನ್ನು ಈ ದಶಕದಲ್ಲಿ ಅಧ್ಯಯನಕ್ಕೆ ಪರಿಗಣಿಸಲಾಗಿದೆ. ನಗ್ನ ಮಹಿಳೆ, ಪಕ್ಷಿಯೊಂದಿಗೆ ಮಹಿಳೆ, ಸ್ತ್ರೀ ಮತ್ತು ಕುದುರೆ, ನಾಗರ ಪಂಚಮಿ, ಮಳೆಗಾಗಿ ಪ್ರಾರ್ಥನೆ, ಅರಿಕೆ, ದೇವಿ ಪೂಜೆ, ಸ್ತ್ರೀ ಮತ್ತು ಕೋಳಿ, ವ್ಯಂಗ್ಯ ಚಿತ್ರಗಳು, ನಿಸರ್ಗ ಚಿತ್ರಗಳು, ದೇವರಾಜ ಅರಸರ ಭಾವಚಿತ್ರ, ಯವ್ವನಾವಸ್ಥೆ, ಅಜ್ಜ ಮೊಮ್ಮಗ ಹೀಗೆ ಸುಮಾರು ಮೂವತ್ತೇಳು ಕಲಾಕೃತಿಗಳನ್ನು ವಿಶ್ಲೇಷಣೆ ಮಾಡಲಾಗಿದೆ. ಅವುಗಳ ಸ್ಥೂಲ ಮಾಹಿತಿ ಕೆಳಗಿನಂತಿದೆ.

**ಶಿರ್ಷಿಕೆ ರಹಿತ : ೧೯೯೧**

ಈ ಕಲಾಕೃತಿ ಅಮೂರ್ತ ಹಿನ್ನೆಲೆಯಲ್ಲಿ ರಚನೆಗೊಂಡಿದ್ದು, ಶಿರ್ಷಿಕೆ ರಹಿತವಾಗಿದೆ. ಈ ಚಿತ್ರದಲ್ಲಿ ಹಳ್ಳಿಯಲ್ಲಿನ ಮಹಡಿ ಮನೆಯ ಕಲ್ಪನೆಯನ್ನು ಕೊಡುವಂತೆ ಬಿಂಬಿಸಲಾಗಿದೆ. ಹಿಂದಿನ ಚಿತ್ರಕ್ಕಿಂತ ಈ ಚಿತ್ರ ಒಂದು ಹೊಸ ಅನುಭವವನ್ನು ನೀಡುವುದಲ್ಲದೇ ಬೆಳಕನ್ನು ತುಂಬಾ ಪರಿಣಾಮಕಾರಿಯಾಗದ ಸಂಯೋಜನೆಯಿಂದ ರಚಿಸಲಾಗಿದೆ. ದಟ್ಟವರ್ಣದ ಕುಂಚದ ಎಳೆತಗಳು ಮೈವಳಿಕೆಯನ್ನು ಸೃಷ್ಟಿಸಿವೆ. ಕಲಾವಿದರ ಪ್ರಯೋಗಶೀಲತೆ ತೊಳಲಾಟಗಳನ್ನು

ಚಿತ್ರದ ಮುಖಾಂತರವಾಗಿ ಹೊರಹೊಮ್ಮಿಸಿರುವುದು ಕಂಡು ಬರುತ್ತದೆ. ಇಲ್ಲಿನ ಅಪರಿಚಿತ ಲೋಕದ ಆಕೃತಿಗಳು ಹೊಸ ಕಲ್ಪನಾ ಪ್ರಪಂಚವನ್ನು ಉಂಟು ಮಾಡುತ್ತವೆ. ಸುಂಟರಗಾಳಿಯ ರಭಸದ ದೃಶ್ಯಾನುಭವ ಕೇವಲ ಕುಂಚದ ಎಳೆತಗಳಿಂದ ಉಂಟು ಮಾಡಲಾಗಿದೆ.

**ಶಿರ್ಷಿಕೆ ರಹಿತ (ನಗ್ನ ಮಹಿಳೆ) : ೧೯೯೧**

ಶಿರ್ಷಿಕೆ ರಹಿತವಾದ ಈ ಕೃತಿಯಲ್ಲಿ ಸ್ತ್ರೀಯೊಬ್ಬಳು ನಗ್ನಾಕಾರದಲ್ಲಿ ಯಾರದೋ ನೀರಿಕ್ಷೆಯಲ್ಲಿರುವಂತೆ ಚಿತ್ರಿಸಲಾಗಿದೆ. ಕುಂಚದ ಬೀಸುಗಳಿಂದ ಸ್ತ್ರೀಯರಿಬ್ಬರ ಭಾವ ಲಾವಣ್ಯವನ್ನು ಉತ್ಪ್ರೇಕ್ಷಿಸಿ ತೋರಿಸಲಾಗಿದೆ. ಜಲವರ್ಣದ ಈ ಕೃತಿಯು ಸ್ಪ್ರೆಡ್ ಮೆಥೆಡ್‌ನಿಂದ ರಚನೆಗೊಂಡಿದೆ. ಧಡೂತಿದೇಹ, ಉಬ್ಬು ವಿನ್ಯಾಸಗಳಿಂದ ಕೂಡಿದ ಸ್ತ್ರೀಯರು ಪರಸ್ಪರ ಒಬ್ಬರಿಗೊಬ್ಬರು ಕೈಕೈ ಹಿಡಿದಂತೆ ಕಂಡು ಬರುತ್ತದೆ. ಕುಂಚದ ಬೀಸುಗಳನ್ನು ಸಮರ್ಥವಾಗಿ ಬಳಸಿಕೊಂಡ ನೆರಳು ಬೆಳಕಿನ ಛಾಯೆ ಮೂಡುವಂತೆ ಮಾಡಲಾಗಿದೆ. ಸಂಯೋಜನಾ ದೃಷ್ಠಿಯಿಂದ ಈ ಕೃತಿಯಲ್ಲಿ ನಗ್ನಕಾರದ ದೇಹಗಳೆರಡು ಪ್ರಧಾನವಾಗಿವೆ. ಕೇವಲ ರೇಖೆಗಳಿಂದ ಅಂಗಾಂಗಗಳ ರಚನೆಯನ್ನು ಪೂರ್ಣವೆನಿಸುವಂತೆ ಚಿತ್ರಿಸಲಾಗಿದೆ.

**ಪಕ್ಷಿಯೊಂದಿಗೆ ಮಹಿಳೆ : ೧೯೯೨**

ಪಾಟೀಲರು ಸಾಂಪ್ರದಾಯಿಕ ಶೈಲಿಯ ಮಹಿಳಾ ಚಿತ್ರಗಳಲ್ಲಿ ಪ್ರಕೃತಿ ಮತ್ತು ಪಕ್ಷಿಗಳನ್ನು ಸಮರ್ಪಕವಾಗಿ ಬಳಸಿಕೊಂಡಿದ್ದಾರೆ. ಈ ಚಿತ್ರದಲ್ಲಿ ಮಹಿಳೆಯು ಪಕ್ಷಿಯೊಂದಿಗಿರುವಂತೆ ಚಿತ್ರಿಸಲಾಗಿದೆ. ತೈಲವರ್ಣದ ಈ ಕೃತಿಯಲ್ಲಿ ಸ್ತ್ರಿಯು ಪ್ರಧಾನಕೃತಿಯಾಗಿದೆ. ತೆಳುವಾದ ಮೈಬಣ್ಣ ಹೊಂದಿರುವ ಸ್ತ್ರೀಯ ಪಕ್ಕದಲ್ಲಿ ಗಿಡವೊಂದರ ಮೇಲೆ ಪಕ್ಷಿ ಕುಳಿತ್ತಿದೆ. ಅದನ್ನು ಮಹಿಳೆ ಕೈಬೀಸಿಕರೆಯುತ್ತಿದ್ದಾಳೆ. ಸ್ತ್ರೀಯ ಮುಖದಲ್ಲಿ ಸೌಮ್ಯಭಾವವು ಎದ್ದು ಕಾಣುವಂತೆ ರಚಿಸಲಾಗಿದೆ. ಹಿಂದಿನ ಚಿತ್ರದಲ್ಲಿರುವಂತೆ ಈ ಚಿತ್ರದಲ್ಲಿ ಸೃಷ್ಠಿ ಸೊಬಗನ್ನು ಹಿನ್ನೆಲೆಯಲ್ಲಿ ಸಾಂಕೇತಿಕವಾಗಿ ರಚಿಸಲಾಗಿದೆ. ವರ್ಣಲೇಪನದಲ್ಲಿ ತಿಳಿವರ್ಣಗಳ ಬಳಕೆ ಹೆಚ್ಚಾಗಿದೆ.

**ಸ್ತ್ರೀ ಮತ್ತು ಕುದುರೆ : ೧೯೯೨**

ಕುದುರೆ, ಮಹಿಳೆ, ಕಾಮ, ಪುರುಷ ಸಂಕೇತದ ಮತ್ತೊಂದು ಚಿತ್ರ ಇದಾಗಿದೆ. ಇಲ್ಲಿ ಸ್ತ್ರೀಯರಿಬ್ಬರು ಮೈ ಮರೆತಿರುವಂತೆ ನಿಂತಿದ್ದಾರೆ. ಸ್ತ್ರೀಯರ ಆಕೃತಿಗಳು ರೇಖೆಗಳಿಂದ ಪ್ರಧಾನವಾಗಿ ಭಾವನಾತ್ಮಕವಾಗಿ ರಚನೆಗೊಂಡಿವೆ. ಅಸ್ಪಷ್ಟವಾದ ಅರೆಬರೆ ಎಂಬಂತಿರುವ ಕೆಲವು ರೇಖೆಗಳು ಅಲ್ಲಲ್ಲಿ ರಚನೆಯಾಗಿದ್ದರೂ ಒಟ್ಟು ಭಾವನೆಗೆ ಭಂಗವಿಲ್ಲ. ಸ್ತ್ರೀಯರು ಒಬ್ಬರ ಹಿಂದೆ ಒಬ್ಬರಂತೆ ನಿಂತಿದ್ದು ಪುರುಷನ ಬಯಕೆಯ ಕಾಯುವಿಕೆಯಲ್ಲಿದ್ದಾರೆ. ಪುರುಷನಿಗೆ ಸಂಕೇತವೆಂಬಂತೆ ಕುದುರೆಯ ಆಕೃತಿಯನ್ನು ಅಸ್ಪಷ್ಟ ರೇಖೆಗಳಿಂದ ಮೂಡಿಸಲಾಗಿದೆ. ಸೃಜನಶೀಲ

ಪ್ರವೃತ್ತಿಯ ರೇಖಾ ವಿನ್ಯಾಸವು ಭಾವನೆಯ ಲಯ ಬದ್ಧತೆಯನ್ನು ಸಾರ್ಥಕವಾಗಿ ಬಳಸಿಕೊಂಡಂತಿದೆ. ಪ್ರಕೃತಿ ಮಧ್ಯದಲ್ಲಿ ತಮ್ಮ ಬಯಕೆಯನ್ನು ಈಡೇರಿಸಿಕೊಳ್ಳುವ ಪ್ರಯತ್ನದಲ್ಲಿ ಜೀವಿಗಳು ಪಡೆವ ವಾಸ್ತವ ಚಿತ್ರಣವನ್ನು ಈ ಕೃತಿ ನೀಡುತ್ತದೆ.

**ನಾಗರ ಪಂಚಮಿ : ೧೯೯೨**

ಭಾರತೀಯ ಸಂಸ್ಕೃತಿಯಲ್ಲಿ ಧಾರ್ಮಿಕ ಸಂಪ್ರದಾಯಕ್ಕೆ ಹೆಚ್ಚಿನ ಪ್ರಾಧಾನ್ಯತೆಯನ್ನು ಕೊಡಲಾಗುತ್ತದೆ. ಹಬ್ಬ ಹರಿದಿನಗಳಲ್ಲಿ ವಿಶಿಷ್ಟವಾದ ಆಚರಣೆಗಳಿರುತ್ತವೆ. ಅಂತಹ ಪ್ರತಿಬಿಂಬನೆಯ ಕೃತಿ ಇದಾಗಿದೆ. ನಾಗರ ಪಂಚಮಿ ಶೀರ್ಷಿಕೆಯ ಈ ಚಿತ್ರವು ಪಂಚಮಿಯ ದಿನದಂದು ಸ್ತ್ರೀಯರು ಹುತ್ತಕ್ಕೆ ಹಾಲೆರೆದು ನಾಗಪ್ಪನನ್ನು ಪೂಜಿಸುತ್ತಿರುವಂತೆ ರಚನೆಯಾಗಿದೆ. ಈ ನಾಗರ ಪಂಚಮಿಯು ಸ್ತ್ರೀಯರ ಮಹತ್ವದ ಹಬ್ಬವಾಗಿದೆ. ಮದುವೆಯಾದ ಹೆಣ್ಣು ಮಕ್ಕಳು ಪಂಚಮಿ ದಿನದಂದು ನಾಗರಹಾವಿಗೆ ಹಾಲೆರೆದು ತಮ್ಮ ಸಂಸಾರವು ಚೆನ್ನಾಗಿ ನೂರು ವರ್ಷ ಸುಖವಾಗಿರಲೆಂದು ಪ್ರಾರ್ಥಿಸುತ್ತಾರೆ. ಭಾರತವು ಇಂತಹ ಅನೇಕ ಧಾರ್ಮಿಕ ಸಂಪ್ರದಾಯ ಗಳಿಂದಾಗಿಯೆ ಜಗತ್ತಿನಲ್ಲಿ ಸಂಸ್ಕೃತಿಯಲ್ಲಿ ವಿಶಿಷ್ಠ ಸ್ಥಾನ ಪಡೆದುಕೊಂಡಿದೆ. ಈ ಚಿತ್ರದಲ್ಲಿ ದೊಡ್ಡದಾದ ಹಾವೊಂದು ಹೆಡೆಎತ್ತಿ ನಿಂತಿರುವುದ. ಅದರ ಮುಂಭಾಗದಲ್ಲಿ ಸ್ತ್ರೀಯರು ಪೂಜಿಸುತ್ತ ಹಾಲೆರೆಯುವ ದೃಶ್ಯಾವಳಿ ಆಕರ್ಷಕವಾಗಿದೆ. ಮಹಿಳೆಯರು ಕೆಂಪು ಹಳದಿ ವರ್ಣದ ಉಡುಪುಗಳೊಂದಿಗೆ ನಿಂತಿರುವರು. ಸ್ತ್ರೀಯರ ಪಕ್ಕದಲ್ಲಿ ಚಿಕ್ಕಚಿಕ್ಕ ನಾಗರ ವಿಗ್ರಹಗಳಿವೆ. ಹಿಂಭಾಗದಲ್ಲಿ ನೀಲಿ ಮತ್ತು ಬಿಳಿಯವರ್ಣದ ಪಟ್ಟಿಕೆಯು ಚಿತ್ರಕ್ಕೆ ಮೆರಗನ್ನು ತಂದು ಕೊಟ್ಟಿದೆ.

**ಮಳೆರಾಯನಿಗೆ ಪ್ರಾರ್ಥನೆ : ೧೯೯೨**

ಸಂಸ್ಕೃತಿ ಸಂಪ್ರದಾಯಕ್ಕೆ ಹೆಸರುವಾಸಿಯಾಗಿರುವ ಭಾರತದಲ್ಲಿ ಪ್ರಕೃತಿಯ ಶ್ರೀರಕ್ಷೆಗಾಗಿ ವಿವಿಧ ಬಗೆಯ ಪೂಜೆಗಳನ್ನು ಮಾಡಲಾಗುತ್ತದೆ. ಇದರಲ್ಲಿ ಮಳೆಯು ಬಾರದೇ ಹೋದಾಗ ಹಲವಾರು ಆಚರಣೆಯಿಂದ ಮಳೆರಾಯನನ್ನು ಪ್ರಾರ್ಥಿಸುತ್ತಾರೆ. ಅಂತಹ ಒಂದು ಮಳೆರಾಯನ ಪ್ರಾರ್ಥನೆಗೆ ಸಂಬಂಧಿಸಿದ ಚಿತ್ರ ಇದಾಗಿದೆ. ಮಳೆಬಾರದೆ ಬರಗಾಲದ ಪರಸ್ಥಿತಿ ಎದುರಾದಾಗ ಹಳ್ಳಿಯಲ್ಲಿ ಕುಡಿಯಲು ನೀರಿಲ್ಲದೇ ದನಕರುಗಳು ಮನುಷ್ಯರು ಅತೀವೃಷ್ಠಿ ಅನಾದೃಷ್ಠಿಯಾದಾಗ ದೇವರಲ್ಲಿ ಮೊರೆ ಹೋಗುವದು ಒಂದು ಸಂಪ್ರದಾಯವಿದೆ. ಪ್ರತಿಯೊಂದಕ್ಕೂ ಸಮಸ್ತ ಜೀವಕೋಟಿ ತೊಂದರೆ ಎದುರಿಸುತ್ತಾರೆ. ಆಗ ಮಳೆಗಾಗಿ ಆಚರಣೆಯ ಹಿನ್ನೆಲೆಯಲ್ಲಿ ವಿಶೇಷವಾದ ಪ್ರಾರ್ಥನೆಗಳನ್ನು ಅರಿಕೆಗಳನ್ನು ಸಲ್ಲಿಸುವುದರಿಂದ ಮಳೆರಾಯ ಕರುಣಿಸುವನು ಎಂಬ ನಂಬಿಕೆ ಇದೆ. ಈ ಚಿತ್ರದಲ್ಲಿ ಮಳೆರಾಯನ ಕೃಪೆಗಾಗ ಮಣ್ಣಿನ ಗುಬ್ಬಮ್ಮಗಳನ್ನು ಮಾಡಿ ಕುಣಿತದ ಮೂಲಕ ಪ್ರಾರ್ಥಿಸುವ ಸನ್ನಿವೇಶ ಕಂಡು ಬರುತ್ತದೆ. ಕಲಾಕೃತಿಯ ಹಿನ್ನೆಲೆಯಲ್ಲಿ

ನೀಲಿ ವರ್ಣದ ರಭಸವಾದ ಬೀಸುಗಳಿದ್ದು ಅಲ್ಲಲ್ಲಿ ಮಣ್ಣಿನ ಗುಬ್ಬಮ್ಮಗಳಿವೆ. ಮೂರು ಜನ ಸ್ತ್ರೀಯರು ಮಳೆರಾಯನ ಕುಣಿತದಲ್ಲಿ ತೊಡಗಿದ್ದಾರೆ.ಇದು ಬಹುಶ ಗುರ್ಜಿ ಕುಣಿತವಾಗಿರ ಬಹುದಾಗಿದೆ. ಪೂರಕವಾದ ವರ್ಣಲೇಪನ ಇಲ್ಲಿದೆ.

**ಅರಿಕೆ : ೧೯೯೨**

ಹಿಂದಿನ ಚಿತ್ರದಂತೆ ಈ ಕಲಾಕೃತಿಯು ಕೂಡಾ ಮಳೆರಾಯನ ಕುರಿತ ಪ್ರಾರ್ಥನೆ ಮತ್ತು ಆಚರಣೆಯನ್ನು ಪ್ರತಿಬಿಂಬಿಸುತ್ತದೆ. ಗ್ರಾಮೀಣ ಭಾಗದ ಜನರು ದುರ್ಗಮ್ಮ, ಹುಲಗಮ್ಮ, ಮಾರವ್ವ, ಹೀಗೆ ಹಲವಾರು ಸ್ತ್ರೀದೇವರನ್ನು ಹೆಚ್ಚಾಗಿ ಬೇಡಿಕೊಳ್ಳುತ್ತಾರೆ. ಅಂತಹ ಚಿತ್ರ ಇದಾಗಿದೆ. ಕಲಾಕೃತಿಯ ಹಿನ್ನಲೆಯಲ್ಲಿ ಕೆಂಪು, ಹಳದಿ, ಬಿಳಿ, ವರ್ಣದ ಗ್ರಾಮದೇವತೆಗಳನ್ನು ಅಸ್ಪಷ್ಟವಾಗಿ ಕುಂಚದ ಬೀಸುಗಳಿಂದ ಕ್ರೀಯಾಶೀಲವಾಗಿ ಚಿತ್ರಿಸಲಾಗಿದೆ. ಸ್ತ್ರೀ ದೇವತೆಯು ತಾಯಿಯ ಸ್ವರೂಪವಾಗಿದ್ದು ಕರುಣಾಮಯ ಗುಣ ಹೊಂದಿದವಳು. ಅವಳನ್ನು ಒಲಿಸಿಕೊಂಡಾಗ ಎಲ್ಲವೂ ಸಾಧ್ಯವೆಂಬ ನಿದರ್ಶನಗಳು ಹಲವಾರು ಈ ಹಿನ್ನೆಲೆಯಲ್ಲಿ ಗ್ರಾಮದೇವತೆಗೆ ಪೂಜೆ, ಅರಿಕೆ, ಮಾಡಿಕೊಂಡು ಮಳೆಗಾಗಿ ಪ್ರಾರ್ಥಿಸುತ್ತಿದ್ದಾರೆ.

**ಶಿರ್ಷಿಕೆ ರಹಿತ : ೧೯೯೨**

ಕಲಾವಿದರು ಗ್ರಾಮೀಣ ಭಾಗದವರಾಗಿವುದರಿಂದ ತಮ್ಮ ಎಲ್ಲಾ ಕಲಾಕೃತಿಗಳು ಹಳ್ಳಿ ಗ್ರಾಮೀಣರು ಮಳೆಗಾಗಿ ಪ್ರಾರ್ಥಿಸುವ ಮತ್ತೊಂದು ವಿಧಾನವನ್ನು ಇಲ್ಲಿ ಅಭಿವ್ಯಕ್ತಿಸಲಾಗಿದೆ. ಕುರುಬನು ಕಂಬಳಿ ಬೀಸುವುದರಿಂದ, ಸ್ಮಶಾನ ಕಾಯುವವನು ಹಲಿಗೆ ಬಾರಿಸುವುದರಿಂದ, ಮಳೆ ಬರುತ್ತದೆ ಎನ್ನುವ ನಂಬಿಕೆ ಕೆಲವರಲ್ಲಿದೆ. ಈ ಚಿತ್ರದಲ್ಲಿ ವ್ಯಕ್ತಿಯೊಬ್ಬ ಸಾಂಪ್ರದಾಯಿಕ ವಾದ್ಯವನ್ನು ಬಾರಿಸುತ್ತಲಿದ್ದಾನೆ. ಅಲ್ಲದೆ ದೂರದ ದೇವಸ್ಥಾನದಲ್ಲಿ ಪ್ರಾರ್ಥನಾ ಮಗ್ನರಾದ ವ್ಯಕ್ತಿಗಳಿಬ್ಬರು ತಮ್ಮ ಎರಡೂ ಕೈಗಳನ್ನು ಮೇಲಕ್ಕೆತ್ತಿ ಪ್ರಾರ್ಥಿಸುವ ದೃಶ್ಯ ಕಂಡುಬರುತ್ತದೆ. ಆಕೃತಿಗಳಿಗೆ ಪ್ರಥಮ ವರ್ಗದ ವರ್ಣಗಳನ್ನು ಲೇಪಿಸಲಾಗಿದೆ.

**ದೇವಿಪೂಜೆ (ಕೋಣನ ಬಲಿ) : ೧೯೯೨**

ಗ್ರಾಮೀಣ ಸಂಸ್ಕೃತಿಯಲ್ಲಿ ಅತಿವೃಷ್ಠಿ ಅನಾವೃಷ್ಠಿ ಬರಲಾಗ ಪರಸ್ಥಿತಿ ಉಂಟಾದಾಗ ವಿಶೇಷವಾಗಿ ಗ್ರಾಮದೇವತೆಗೆ ಪೂಜಿಸಿ ಪ್ರಾಣಿ ಬಲಿಕೊಡುವ ಸಂಪ್ರದಾಯವಿದೆ. ಈ ಕೃತಿಯಲ್ಲಿ ಅಂತಹ ಆಚರಣೆಯ ಪ್ರತಿಬಿಂಬನೆ ಇದೆ. ಗ್ರಾಮ ದೇವತೆಯನ್ನು ಚಿತ್ರಿಸಲಾಗಿದ್ದು, ಎದುರಿನಲ್ಲಿ ವ್ಯಕ್ತಿಯೊಬ್ಬ ಕೋಣದ ಮುಂದೆ ನಿಂತು ಬಲಿಕೊಡಲು ತಯಾರಾಗಿದ್ದಾನೆ. ಇಲ್ಲಿನ ಗ್ರಾಮ ದೇವತೆಯು ಹುಲಿಯ ಮೇಲೆ ಕುಳಿತಿದ್ದಾಳೆ. ರೌದ್ರಮಯ ರೂಪ ಹೊಂದಿದ ಕೆಂಪು ವರ್ಣ ಲೇಪಿಸಲಾಗಿದೆ. ಹಿಂಬದಿಯಲ್ಲಿ ಹಸಿರು, ಹಳದಿ ವರ್ಣವು ದೇವಿಯ ಭೀಕರತೆಗೆ ಪೂರಕವಾಗಿದೆ.

ಅರಿಸಿಣ ಕುಂಕುಮವು ದೇವಿಯ ಸಂಕೇತ ಎಂಬಂತೆ ವರ್ಣಗಳನ್ನು ಸಂಯೋಜನೆಗೊಳಿಸಲಾಗಿದೆ. ಮುಂಭಾಗದಲ್ಲಿ ಕೋಣ ಮತ್ತು ವ್ಯಕ್ತಿಯೊಬ್ಬನು ನಿಂತಿರುವನು. ಒಟ್ಟಾರೆ ಸಂಯೋಜನೆಯು ಗ್ರಾಮೀಣ ಸಂಸ್ಕೃತಿ, ಸಂಪ್ರದಾಯವನ್ನು ಚಿತ್ರದ ಮೂಲಕ ಪ್ರತಿಬಿಂಬಿಸಿ ಕೊಡುತ್ತದೆ.

**ಶಿರ್ಷಿಕೆ ರಹಿತ (ಮನೆ) : ೧೯೯೩**

ಇದೊಂದು ಅಮೂರ್ತಕಲೆಯ ಚಿತ್ರವಾಗಿದ್ದು ವಿವಿಧ ಅರ್ಥಸಾಧ್ಯತೆಗಳನ್ನು ನೀಡುವ ಕಲಾಕೃತಿಯಾಗಿದೆ. ಪ್ರಸ್ತುತ ಕೃತಿಯಲ್ಲಿ ತೈಲವರ್ಣದಿಂದ ಮನೆಯ ಆಕಾರವನ್ನು ಅಮೂರ್ತವಾಗಿ ರಚಿಸಲಾಗಿದೆ. ನಿರ್ಧಿಷ್ಟ ರೂಪ ಆಕಾರಗಳಲ್ಲಿದ್ದ ರಚನೆಗಳು ಇಲ್ಲಿವೆ. ಹಾಗಾಗಿ ಹಲವಾರು ಭಿನ್ನ ಆಯಾಮಗಳನ್ನು ಇಲ್ಲಿ ಪಡೆಯಬಹುದು. ಚಿತ್ರದ ಒಳಾಂಗಣದಲ್ಲಿ ಮನೆಯ ಕಲ್ಪನೆಯನ್ನು ಮೂಡಿಸುವಂತೆ ವರ್ಣಗಳನ್ನು ಬಳಸಲಾಗಿದೆ.

ಕುಂಚದ ನೇರ ಬೀಸುಗಳಿಂದ ಪ್ರಖರ ವರ್ಣಗಳನ್ನು ಲೇಪಿಸಲಾಗಿದೆ. ಜೊತೆಗೆ ಅಲ್ಲಲ್ಲಿ ದೊಡ್ಡ ಪಟ್ಟಿಕೆಗಳಿವೆ. ಆಕೃತಿಗಳಲ್ಲಿ ಬಹುವರ್ಣಗಳ ಮೇಳ ಇಲ್ಲದಿದ್ದರೂ ಎರಡ್ಮೂರು ವರ್ಣಗಳಲ್ಲೇ ವೈವಿಧ್ಯತೆ ತರಲಾಗಿದೆ. ಕೆಂಪು ವರ್ಣತನ್ನ ಹರವನ್ನು ವಿಸ್ತರಿಸಿಕೊಳ್ಳುತ್ತ ಅವಕಾಶವನ್ನು ಸಮರ್ಥವಾಗಿ ಆಕ್ರಮಿಸಿಕೊಂಡಿದೆ. ಇಲ್ಲಿನ ರೂಪಾಂಶಗಳು ಪರಿಚತ ಲೋಕದ ಆಕೃತಿಗಳಿಗಿಂತ ಅಪರಿಚಿತವಾದ ವಿವಿಧ ಆಯಾಮಗಳನ್ನು ಕಟ್ಟಿಕೊಡುತ್ತವೆ.

**ಸ್ತ್ರೀ ಮತ್ತು ಕೋಳಿ : ೧೯೯೩**

ಕೋಳಿ ಮತ್ತು ಮಹಿಳೆ ಇರುವ ಮತ್ತೊಂದು ಕೃತಿ ಇದಾಗಿದೆ. ಚಿತ್ರದಲ್ಲಿ ಸ್ತ್ರೀಯೊಬ್ಬಳು ತನ್ನ ಕೋಳಿಯನ್ನು ಹಿಡಿದುಕೊಂಡು ಹೋಗುತ್ತಿರುವಂತೆ ರಚಿಸಲಾಗಿದೆ. ಸಾಯಂಕಾಲದ ಕಲ್ಪನೆ ಬರುವಂತೆ ದೃಶ್ಯವನ್ನು ಅನಾವರಣಗೊಳಿಸಲಾಗಿದೆ. ಕಪ್ಪು ವರ್ಣದ ಸುಂದರಿಗೆ ಹಳದಿಯ ಉಡುಪು ಬಿಳಿದಾದ ಕೋಳಿಯನ್ನು ರಚಿಸಲಾಗಿದೆ. ಈ ಚಿತ್ರ ಗ್ರಾಮ ಸೊಗಡನ್ನು ವಿವರಿಸುತ್ತಿದೆ. ಹಿಂಬದಿಯಲ್ಲಿ ಸಾಯಂಕಾಲದ ಕೆಂಪು ವರ್ಣದ ಆಕಾಶವನ್ನು ಸೃಜನಶೀಲ ಮನೋಭಾವನೆಯಿಂದ ರಚಿಸಲಾಗಿದೆ. ಹಳ್ಳಿಯ ಸ್ತ್ರೀಯ ದೇಹವನ್ನು ಸ್ಪಷ್ಟವಾಗಿ ತೋರಿಸುವ ಪ್ರಯತ್ನ ಇಲ್ಲಿದೆ. ಹಾಗೆ ಹಣೆಯ ಮೇಲೆ ಸೂರ್ಯನ ಬೆಳಕು ಬಿದ್ದಂತೆ ಹಳದಿ, ಬಿಳಿ ಮಿಶ್ರಿತ ವರ್ಣ ಲೇಪನವಾಗಿದೆ. ಈ ಕಲಾಕೃತಿಯಲ್ಲಿ ಕೋಳಿಯನ್ನು ಮಿಥುನದ ಸಂಕೇತವಾಗಿ ಮತ್ತು ಗ್ರಾಮೀಣ ಜನರ ಉದ್ಯೋಗದ ಹಿನ್ನೆಲೆಯಲ್ಲಿ ನಿರೂಪಿಸಲಾಗಿದೆ. ಅದೇ ರೀತಿ ಮಹಿಳೆಯನ್ನು ಫಲವಂತಿಕೆಯ ಸಂಕೇತವಲ್ಲದೇ ಭೂಮಿಯ ಗುಣದಂತೆ ಚಿತ್ರಿಸಿರುವುದು ಮಹತ್ವದ್ದಾಗಿದೆ.

**ಸಂಭ್ರಮ : ೧೯೯೩**

ಇಂದು ಗ್ರಾಮೀಣ ಭಾಗದಲ್ಲಿ ಸಂಪ್ರದಾಯಕ ಸಂಭ್ರಮವು ಕಡಿಮೆಯಾಗುತ್ತಿರುವ ದಿನಗಳಲ್ಲಿ ಪಾಟೀಲರು ತಮ್ಮ ಕೃತಿಗಳ ಮೂಲಕ ಅವುಗಳನ್ನು ಹಿಡಿದಿಡುವ ಪ್ರಯತ್ನ ಮಾಡಿದ್ದಾರೆ. ಈ ಕಲಾಕೃತಿಯಲ್ಲಿ ಮದುವೆಯ ಸಂಭ್ರಮವನ್ನು ಸಾಂಕೇತಿಕವಾಗಿ ಬಿಂಬಿಸಲಾಗಿದೆ. ಇಲ್ಲಿ ಹೊಸದಾಗಿ ಮದುವೆಯಾದ ಸ್ತ್ರೀ ಮತ್ತು ಪುರುಷರನ್ನೆ (ದಂಪತಿಗಳನ್ನು) ಮುಖ್ಯವಾಗಿಟ್ಟುಕೊಂಡು ಸಂಭ್ರಮ ಎಂಬ ಕೃತಿ ರಚಿಸಲಾಗಿದೆ. ಹೊಸದಾಗಿ ಮದುವೆಯಾದ ಸಂದರ್ಭದಲ್ಲಿ ಇವರಿಬ್ಬರು ಆನಂದ ಉಲ್ಲಾಸದಲ್ಲಿ ಕುಳಿತಿರುವ ದೃಶ್ಯ ಇದಾಗಿದೆ.

ಮುಂಭಾಗದಲ್ಲಿ ಸಂಪ್ರದಾಯಕ ವಾದ್ಯಗಳೊಂದಿಗೆ ಇಬ್ಬರು ವಾದ್ಯಗಾರರಿದ್ದಾರೆ. ಸಂಭ್ರಮದ ಸಂಕೇತಗಳಾದ ಹರಿಸಿಣ ಕುಂಕುಮಗಳ ಲೇಪನವಿದೆ. ಶೃಂಗಾರಗೊಂಡ ದಂಪತಿಗಳು ದೇವರನ್ನು ಪೂಜಿಸುವಂತಿದೆ. ಗ್ರಾಮೀಣ ಪ್ರದೇಶದಲ್ಲಿ ಹಬ್ಬ ಆಚರಣೆಗಳೆಂದರೆ ಇಡಿಮನೆಯನ್ನು ಅಲಂಕಾರ ಮಾಡುತ್ತಾರೆ. ಇಲ್ಲಿಯೂ ಹಿನ್ನೆಲೆಯಲ್ಲಿ ಅಲಂಕಾರ ಮಾಡಿರುವಂತೆ ಚಿತ್ರಿಸಲಾಗಿದೆ. ಪ್ರಸ್ತುತ ಕಲಾಕೃತಿಯಲ್ಲಿ ನವ ವಧು-ವರರ ಆಸಕ್ತಿ, ಪ್ರೇಮ, ಭಾವನಾತ್ಮಕ ಒಳನೋಟಗಳು ಮೈಥುನಕ್ಕೆ ಸಂಬಂಧಿಸಿದ ಕಣ್ಣಿನ ಸನ್ನೆಗಳು ಗೋಚರಿಸುವಂತೆ ನಿರೂಪಿಸಲಾಗಿದೆ.

**ಸಿಟಿ ಲ್ಯಾಂಡ್‌ಸ್ಕೇಪ್ : ೧೯೯೩**

ನಗರ ಜೀವನವು ಎಂಥವರನ್ನು ಆಕರ್ಷಿಸುತ್ತದೆ. ಗ್ರಾಮೀಣ ಪರಿಸರವನ್ನು ಮೂಲೆ ಗುಂಪಾಗಿ ಮಾಡಿದ ಇಂದಿನ ಜನಾಂಗವು ಸಂಪ್ರದಾಯ ಸಂಸ್ಕೃತಿ ಎಲ್ಲವನ್ನು ಮರೆತಿದೆ. ಗ್ರಾಮಗಳಿಂದ ನಗರ ಪರಿಸರಕ್ಕೆ ವಲಸೇ ಹೋಗಿರುವ ಜನರು ಅಲ್ಲಿಯೇ ತಮ್ಮ ನೆಲೆಯನ್ನು ಕಂಡುಕೊಳ್ಳುತ್ತಲಿದ್ದಾರೆ. ಆದರೆ ಕೆಲವರು ನಗರದಲ್ಲಿಯೂ ತಮ್ಮ ಗ್ರಾಮೀಣ ನೆನಪುಗಳನ್ನು ಉಳಿಸಿಕೊಂಡಿರುತ್ತಾರೆ.

ಇಲ್ಲಿ ಕಲಾವಿದರು ಗ್ರಾಮೀಣ ಪ್ರದೇಶವನ್ನು ನಗರಕ್ಕೆ ಹೋದಾಗ ಈ ಕಲಾಕೃತಿಯನ್ನು ಗ್ರಾಮೀಣ ಸಂಸ್ಕೃತಿ ಉಳಿಸಿಕೊಂಡು ನಗರದ ಆಧುನಿಕ ಚಿತ್ರ ರಚಿಸುವುದು ಪಾಟೀಲರ ಹಿರಿಮೆ ಈ ಚಿತ್ರದಲ್ಲಿ ಬೃಹತ್ ನಗರದ ದೊಡ್ಡ ದೊಡ್ಡ ಪಟ್ಟಣದಲ್ಲಿ ಇರುವ ಅಲ್ಲಿರುವ ದೊಡ್ಡ ದೊಡ್ಡ ಬಹು ಮಹಡಿಯ ಕಟ್ಟಡಗಳನ್ನೇ ನೇರವಾಗಿ ಸ್ಕೇಚ್ ಪೆನ್‌ಗಳಿಂದ ಪೇಪರನ ಮೇಲೆ ಚಿತ್ರಿಸಲಾಗಿದೆ. ಕಟ್ಟಡಗಳು ಯಥಾರ್ದರ್ಶನದ ಸ್ಪಷ್ಟ ಕಲ್ಪನೆಯನ್ನು ಕೊಡುವಂತಿವೆ. ರೇಖೆಗಳಿಂದಲೇ ಇಡೀ ನಗರವನ್ನು ಚಿತ್ರಿಸಿದ್ದಾರೆ. ಇಲ್ಲಿ ವಾಸ್ತವ ಚಿತ್ರಣಕ್ಕಿಂತ ನಗರ ಪ್ರಭಾವದಿಂದ ಪ್ರೇರಿತವಾದ ಕಾಲ್ಪನಿಕ ಚಿತ್ರಣವೇ ಹೆಚ್ಚು ಮಹತ್ವ ಪಡೆದುಕೊಂಡಿಧೆ. ನೈಜಶೈಲಿಯಲ್ಲಿ ಬಿಂಬಿಸಲ್ಪಟ್ಟ ಈ ಕೃತಿಯು ಯಥಾದರ್ಶನದ ಸಿದ್ಧಾಂತಕ್ಕನುಸಾರವಾಗಿ ರಚನೆಯಾಗಿದೆ.

**ನಿಸರ್ಗ ಚಿತ್ರ : ೧೯೯೩**

ಕಲಾವಿದರು ಪ್ರಕೃತಿ ಪ್ರಿಯರೆನ್ನುವುದಕ್ಕೆ ಸಾಕ್ಷಿ ಎಂಬಂತೆ ಅನೇಕ ನಿಸರ್ಗ ಚಿತ್ರಗಳನ್ನೇ ರಚಿಸಿದ್ದಾರೆ. ಇವರು ರಚಿಸಿರುವ ನಿಸರ್ಗ ಚಿತ್ರಗಳು ಹೆಚ್ಚಾಗಿ ಅಮೂರ್ತ ಶೈಲಿಯಲ್ಲಿವೆ. ಅಂತಹ ಅಮೂರ್ತ ನಿಸರ್ಗ ಚಿತ್ರಗಳಲ್ಲಿ ಇದೂ ಒಂದಾಗಿದೆ. ಭೂಮಿಯ ಮೇಲಿನ ಹಸಿರು ಗಿಡಗಳು, ಬೆಟ್ಟ ಗುಡ್ಡಗಳು, ಒಟ್ಟು ಪರಿಸರವು ತೀವ್ರವಾದ ಭಾವನೆಗಳನ್ನು ಪ್ರತಿಬಿಂಬಿಸುವಂತೆ ರಚನೆಯಾಗಿವೆ. ವರ್ಣಗಳು ಪ್ರಖರವಾಗಿದ್ದು ದಪ್ಪನಾಗಿ ಲೇಪಿಸಲಾಗಿದೆ. ಓಪೆಕ್ ಮಾಧ್ಯಮದ ಅನುಭವವನ್ನು ತಂದುಕೊಟ್ಟಿವೆ. ಆಕಾಶಕ್ಕೆ ತಿಳಿನೀಲಿ ಮತ್ತು ಹಸಿರು ಗಿಡಬಳ್ಳಿಗೆ ಹಳದಿ ಮತ್ತು ಕಂದು ವರ್ಣಗಳು, ನೈಜವಾದ ಗುಡ್ಡಕ್ಕೆ ಬಿಳಿಬಣ್ಣಗಳನ್ನು ಲೇಪಿಸಲಾಗಿದೆ. ದಪ್ಪನಾದ ಕುಂಚದ ಎಳೆತಗಳು ಪರಿಣಾಮಕಾರಿಯಾಗಿ ಮೂಡಿಬಂದಿವೆ.

**ನಿಸರ್ಗ ಚಿತ್ರ : ೧೯೯೩**

ಕಲಾವಿದರು ಜಲವರ್ಣದಲ್ಲಿ ಪ್ರಕೃತಿಯನ್ನು ತುಂಬಾ ರಮ್ಯವಾಗಿ ಚಿತ್ರಿಸಿದ್ದಾರೆ. ಅಂತಹ ಕೃತಿಗಳಲ್ಲಿ ಇದು ಒಂದಾಗಿದೆ. ಬೆಟ್ಟಗುಡ್ಡ, ಹಸಿರಾದ ಹುಲ್ಲುಗಾವಲು, ಗಿಡಮರಗಳು ಹಾಗೂ ಹಳ್ಳ ಕೊಳ್ಳಗಳು, ಹೀಗೆ ಸೃಷ್ಟಿಯ ವೈವಿಧ್ಯತೆ ಇಲ್ಲಿ ಅನಾವರಣಗೊಂಡಿದೆ. ಜಲವರ್ಣದ ಜಾರುವಿಧಾನದಲ್ಲಿ ಚಿತ್ರಿಸಿದ ಈ ಕೃತಿ ಆನಂದೋಲ್ಲಾಸದಲ್ಲಿ ತೇಲಾಡಿದ ಅನುಭವ ಉಂಟು ಮಾಡುತ್ತದೆ. ಈ ಕೃತಿಯಲ್ಲಿ ತುಂಬಾ ವೇಗವಾಗಿ ಚಲಿಸಿದ ಕುಂಚದ ಎಳೆತಗಳಿಂದಲೇ ತಗ್ಗು ದಿಬ್ಬ ಹಾಗೂ ಹಿಂದೆ ಮುಂದೆ ಕಾಣುವಂತೆ ರೂಪಿಸಲಾಗಿದೆ. ವರ್ಣಗಳನ್ನು ತಿಳು ಲೇಪನದಿಂದ ನಿರ್ವಹಿಸಿರುವುದರಿಂದ ಆಕಾರಗಳು ಸೌಮ್ಯತೆ ಪಡೆದಂತೆ ಕಂಡು ಬರುತ್ತದೆ. ಮಳೆಗಾಲದಲ್ಲಿ ಮಳೆಯ ಅಬ್ಬರದಿಂದ ನೀರಿನ ಜಾರುವ ರಭಸವು ಗಿಡದ ಮೇಲೆ ಇಳಿದಂತೆ ಕಂಡುಬರುತ್ತದೆ. ಮಳೆಗೆ ಇಡೀ ಪರಿಸರವು ವರ್ಣದಲ್ಲಿ ಮಿಂದಂತೆ ಕಂಡು ಬರುತ್ತದೆ. ಈ ಕೃತಿಯಲ್ಲಿ ಹಸಿರು, ನೀಲಿ ಹಾಗೂ ಕಂದು ವರ್ಣಗಳು ಹೆಚ್ಚಾಗಿ ಬಳಸಿರುವುದು ಕಂಡು ಬರುತ್ತದೆ.

**ವ್ಯಂಗ್ಯ ಚಿತ್ರಗಳು : ೧೯೯೩**

ಪತ್ರಿಕೆ ಮಾಧ್ಯಮದಲ್ಲಿ ಹಾಸ್ಯಕ್ಕೆ ಪ್ರಧಾನವಾಗಿ ಉಪಯೋಗಿಸುವ ಈ ವ್ಯಂಗ್ಯಚಿತ್ರಗಳು ಕ್ಷಣಾರ್ಧದಲ್ಲಿಯೇ ವಿಷಯ ನಿರೂಪಣೆ ಸಂದರ್ಭಕ್ಕೆ ಅನುಸಾರವಾಗಿ ಹಾಸ್ಯಭಾವನೆ ಮೂಡಿಸುತ್ತವೆ. ಈ ಹಾಸ್ಯ ಪ್ರಧಾನ ವ್ಯಂಗ್ಯ ಚಿತ್ರಗಳನ್ನು ಹೆಚ್ಚಾಗಿ ರಾಜಕೀಯವಿಡಂಬನೆಗೆ ಬಳಸುವುದು ಹಾಗೂ ಚುಟುಕು ಸಾಹಿತ್ಯಕ್ಕೆ ಬಳಸುವದು ಕಂಡು ಬರುತ್ತದೆ. ವ್ಯಕ್ತಿಯ ಮುಖದ ಭಾವನೆಗೆ ತಕ್ಕಂತೆ ಅಥವಾ ಅಂಗಾಂಗದ ಯಾವುದೋ ಒಂದು ವಿಶೇಷತೆಯನ್ನು ಈ ಚಿತ್ರಗಳಲ್ಲಿ ಪ್ರಮುಖ ಲಕ್ಷಣವಾಗಿ ಸೂಚಿಸಲಾಗುತ್ತದೆ. ಅದೇ

ಲಕ್ಷಣವನ್ನೇ ವಿಕೃತಗೊಳಿಸಿ ಹಾಸ್ಯದ ಹೊನಲಿನಲ್ಲಿ ತೇಲಾಡುವಂತೆ ಮಾಡುತ್ತದೆ. ಇವು ಹೆಚ್ಚಾಗಿ ರೇಖಾ ಪ್ರಧಾನವಾಗಿರುತ್ತವೆ. ರೇಖಾ ಚಿತ್ರಗಳು ನೋಡುತ್ತಲೆ ನೋಡುಗನನ್ನು ಆಕರ್ಷಿಸುವುದರಲ್ಲಿ ಪ್ರಮುಖವಾಗಿವೆ. ಪಾಟೀಲರು ವ್ಯಂಗ್ಯ ಚಿತ್ರಗಳ ಈ ಪ್ರಯೋಗಗಳನ್ನು ಮಾಡಿದ್ದಾರೆ. ೯೩ ರಿಂದ ೨೦೦೩ರ ಅವಧಿಯಲ್ಲಿ ಹಲವಾರು ವ್ಯಂಗ್ಯ ಚಿತ್ರಗಳನ್ನು ರಚಿಸಿದ್ದಾರೆ. ಅವುಗಳಲ್ಲಿ ಕೆಲವೊಂದು ಚಿತ್ರಗಳನ್ನು ಆಯ್ಕೆ ಮಾಡಿ ಅಧ್ಯಯನಕ್ಕೊಳಪಡಿಸಲಾಗಿದೆ. ಈ ಚಿತ್ರಗಳಲ್ಲಿ ವ್ಯಕ್ತಿಯ ಮುಖವನ್ನು ದೊಡ್ಡದಾಗಿ ಚಿತ್ರಿಸಿ ದೇಹವನ್ನು ಚಿಕ್ಕದಾಗಿ ಚಿತ್ರಿಸಿ ಹಾಸ್ಯಉಕ್ಕಿಸಲಾಗಿದೆ. ಹೀಗೆ ಕಲಾವಿದರು ವ್ಯಂಗ್ಯ ಚಿತ್ರಗಳ ರಚನೆಯಲ್ಲಿಯೂ ತಮ್ಮನ್ನು ಗುರುತಿಸಿಕೊಂಡಿದ್ದಾರೆ. ಜಲವರ್ಣದ ಮಾಧ್ಯಮದಲ್ಲಿ ಸಂಯೋಜನೆಗೊಂಡ ಈ ಚಿತ್ರಗಳು ರೇಖಾಪ್ರಧಾನವಾಗಿ ಮೂಡಿ ಬಂದಿವೆ.

ಸ್ತ್ರೀ : ೧೯೯೩

ಬ್ರೌನ್ ಪೇಪರನ ಮೇಲೆ ಡ್ರೈ ಪೇಸ್ಟಲ್‌ದಿಂದ ರಚಿಸಿದ ಭಾವಚಿತ್ರ ಇದಾಗಿದೆ. ತುಂಬ ಸ್ಪಷ್ಟ ಮತ್ತು ಸೌಮ್ಯತೆಯ ಮೆರಗನ್ನು ಪಡೆದುಕೊಂಡಿದೆ. ಬಣ್ಣದ ಹಾಳೆಯ ಮೇಲೆ ವ್ಯಕ್ತಿಯ ರೇಖಾ ವಿನ್ಯಾಸವನ್ನು ರಚಿಸಿ ನಂತರ ಡ್ರೈ ಪೇಸ್ಟಲ್‌ನಿಂದ ಉಜ್ವಲಾಗಿದೆ. ಕೆಂಪು, ಕೇಸರಿ, ಹಳದಿ, ಕಪ್ಪು, ಬಿಳಿ ವರ್ಣದ ಡ್ರೈ ಪೇಸ್ಟಲ್‌ನಿಂದ ರೂಪದರ್ಶಿಗೆ ನೆರಳು, ಬೆಳಕಿನ ಆಳವನ್ನು ತೋರಿಸಲಾಗಿದೆ. ಮುಖದ ಅರ್ಧಭಾಗವು ಬೆಳಕನ್ನು ತೋರಿಸಿದರೆ ಇನ್ನುಳಿದ ಅರ್ಧಭಾಗವು ಬೆಳಕಿನ ನೆರಳು ಮೂಡಿದಂತೆ ಕಂಡು ಬರುತ್ತದೆ. ರೇಖೆಗಳ ಲಾಲಿತ್ಯ ಮತ್ತು ಡ್ರೈ ಪೇಸ್ಟಲ್‌ನ ತಂತ್ರವು ಒಟ್ಟಾರೆ ರೂಪದರ್ಶಿಗೆ ಮೆರಗನ್ನು ತಂದಿದೆ.

**ದೇವರಾಜ ಅರಸರವರ ಭಾವಚಿತ್ರ : ೧೯೯೪**

ಮಾಜಿ ಮುಖ್ಯಮಂತ್ರಿಗಳಾದ ದೇವರಾಜ್ ಅರಸರವರ ಎದೆ ಮೊಗದ ಚಿತ್ರವನ್ನು ಛಾಯಾಚಿತ್ರದ ಆಧಾರದಿಂದ ರಚಿಸಿದ್ದಾರೆ. ಇಲ್ಲಿ ಅರಸುರವರ ಮುಖದಲ್ಲಿ ಹಸನ್ಮುಖ ಮಂದಹಾಸವು ಎದ್ದು ಕಾಣುತ್ತದೆ. ಬಳಸಿರುವ ವರ್ಣಗಳು ಸೀಮಿತ ವರ್ಣಗಳಾಗಿದ್ದು, ರೂಪದರ್ಶಿಯ ತದ್ರೂಪಕ್ಕೆ ತಕ್ಕಂತೆ ಸಂಯೋಜನೆಗೊಂಡಿವೆ. ಎದುರು ನೋಟಕ್ಕೆ ಒಳಗಾದ ವ್ಯಕ್ತಿಯ ಮುಖದಲ್ಲಿ ತೀಕ್ಷ್ಣವಾಗಿರುವ ದೃಷ್ಟಿ ಕಂಡುಬರುತ್ತದೆ. ಮುಖದಲ್ಲಿ ತೇಜಸ್ಸು ತುಂಬಿದೆ. ಕೆಂಪು, ಹಳದಿ, ಕಂದು, ಬಿಳಿ ವರ್ಣವನ್ನು ಸೂಕ್ತ ಪ್ರಮಾಣ ಮತ್ತು ಛಾಯೆಗಳಿಂದ ಬಳಸಲಾಗಿದೆ. ಈ ಕೃತಿಯು ನಯಗಾರಿಕೆಯಿಂದ ರಚಿಸಿರುವುದರಿಂದ ಕುಂಚದ ಸೌಮ್ಯವಾದ ಎಳೆತಗಳನ್ನು ಇಲ್ಲಿ ಕಾಣಬಹುದಾಗಿದೆ. ನೆರಳು ಬೆಳಕಿನ ವಿಶಿಷ್ಟ ವಿನ್ಯಾಸವನ್ನು ಈ ಚಿತ್ರದಲ್ಲಿ ತೋರಿಸಲಾಗಿದ್ದು, ಅವರು ಧರಿಸಿದ ಬಿಳಿಯ ಅಂಗಿಯನ್ನು ತಿಳು ನೀಲಿ ಬಿಳುಪಿನಿಂದ ಪೂರ್ಣಗೊಳಿಸಿದೆ.

**ಸ್ತ್ರೀ : ೧೯೯೪**

ಕಲಾವಿದರು ನಿರಂತೆ ಪ್ರಯೋಗಶೀಲ ಪ್ರವೃತ್ತಿಯನ್ನು ಸ್ತ್ರೀ ಚಿತ್ರಗಳ ರಚನೆಡಯಲ್ಲಿ ಮೈಗೂಡಿಸಿಕೊಂಡು ಅನೇಕ ಕಲಾಕೃತಿಗಳನ್ನು ರಚಿಸಿದ್ದಾರೆ. ಅವರ ಅನುಭವದ ವಿಸ್ತಾರಕ್ಕೆ ನಾಂದಿ ಹಾಡಿದಂತೆ ಈ ಕಲಾಕೃತಿಗಳು ಮೂಡಿಬಂದಿವೆ. ಗ್ರಾಮೀಣ ಪರಿಸರದ ನಡುವೆಯೇ ಬಳೆದ ಅವರ ಬಾಲ್ಯದ ಬದುಕನ್ನು ಗ್ರಾಮೀಣ ಕಲಾಕೃತಿಗಳಿಂದ ಹಿಡಿದು ಕೊಟ್ಟಿದ್ದಾರೆ. ಪ್ರತಿಯೊಂದರಲ್ಲೂ ಹಳ್ಳಿ ಜೀವನದ ಸುಸಂಸ್ಕೃತ ಬದುಕನ್ನು ನಿರೂಪಿಸಿದ್ದಾರೆ. ಅಂತಹ ಕಲಾಕೃತಿಗಳಲ್ಲಿ ಇಲ್ಲಿರುವ ಚಿತ್ರ ಮುಖ್ಯವಾಗಿದೆ. ಈ ಆಕೃತಿಂಯಲ್ಲಿ ಸ್ತ್ರೀಂಯೊಬ್ಬಳು ಮುಸ್ಸಂಜೆಯಾಗುತ್ತಿದ್ದಂತೆ ತನ್ನ ಕೋಳಿಗಳನ್ನು ಹುಡುಕುತ್ತಾ ಹೊರಬಂತಂತೆ ಚಿತ್ರಿಸಲಾಗಿದೆ. ಮುಂಭಾಗದಲ್ಲಿ ಎರಡು ಕೋಳಿಗಳಿವೆ. ಸುಂದರವಾದ ಮಹಿಳೆಯ ಮೈಕಟ್ಟು, ಬಿಳಿಯ ವರ್ಣದ ಕೋಳಿಗಳು, ಹಿಂಬದಿಯಲ್ಲಿ ಲೇಪಿಸಿದ ಹಳದಿ ವರ್ಣವು ಪರಿಣಾಮಕಾರಿಯಾಗಿದೆ. ಮುಸ್ಸಂಜೆಯನ್ನು ನಿರೂಪಿಸುವ ಮುಳುಗುತ್ತಿರುವ ಸೂರ್ಯ ಎಲ್ಲವೂ ವಿನೂತನವಾದ ಸಂಯೋಜನೆಯಿಂದ ಕೂಡಿದೆ.

**ಯೌವನಾವಸ್ಥೆ : ೧೯೯೪**

ಯೌವನಾವಸ್ಥೆಯಲ್ಲಿ ಆದಂತ ಅನುಭವಗಳನ್ನು ತಮ್ಮ ಕಲಾಕೃತಿಯ ಮುಖಾಂತರ ಪಾಟೀಲರು ಇಲ್ಲಿ ಅಭಿವ್ಯಕ್ತಿಸಿದ್ದಾರೆ. ಪ್ರಸ್ತುತ ಚಿತ್ರದಲ್ಲಿ ಮಹಿಳೆಯೊಬ್ಬಳು ವಿರಹ ವೇದನೆಯಿಂದ ಬಳಲುತ್ತಿರುವಂತೆ ಚಿತ್ರಿಸಲಾಗಿದೆ. ವಿರಹದಲ್ಲಿ ಬೇಯುತ್ತಿರುವ ಸ್ತ್ರೀಯೊಬ್ಬಳು ತನ್ನ ತಲೆಯ ಮೇಲೆ ಎರಡೂ ಕೈಗಳನ್ನು ಇಟ್ಟುಕೊಂಡು ಪ್ರೀಯಕರನ ನೆನಪಿನಲ್ಲಿ ಪರಿತಪಿಸುತ್ತಿದ್ದಾಳೆ. ರೇಖಾ ಪ್ರಧಾನವಾಗಿರುವ ಚಿತ್ರವು ಯೌವನದ ತುಡಿತವನ್ನು ನೆನಪಿಸುತ್ತದೆ. ರೇಖೆಗಳು ಜೀವಂತಿಕೆಯ ಸ್ವರೂಪವನ್ನು ಪಡೆದಿದ್ದು ರೇಖೆಗಳು ಜೀವಂತಿಕೆಯ ಸ್ವರೂಪವನ್ನು ಪಡೆದಿದ್ದು ಪ್ರಾಯದ ಹುಡುಗಿಯ ವಿರಹ ವೇದನೆಯನ್ನು ಪ್ರಭಾವಕಾರಿಯಾಗಿ ಕೆಲವೇ ರೇಖೆಗಳಲ್ಲಿ ಹಿಡಿದಿರುವ ಕಲಾಕೃತಿ ಇದಾಗಿದೆ. ಇಲ್ಲಿರುವ ಸ್ತ್ರೀಯ ದೇಹಕ್ಕೆ ಶಿರವಿಲ್ಲದಿದ್ದರೂ ಆಕೃತಿಯ ಭಾವನಾತ್ಮಕ ಪ್ರಚೋದನೆಗೆ ಯಾವುದೇ ದಕ್ಕೆ ಇಲ್ಲದಂತೆ ಕಲಾವಿದರು ಕೃತಿ ರಚಿಸಲಾಗಿದೆ.

**ಹುಡುಗಿ : ೧೯೯೫**

ಪಾಟೀಲರು ಸ್ತ್ರೀಯ ಭಾವ ಚಿತ್ರಗಳಿಗೆ ಹೆಚ್ಚು ಪ್ರಾಶಸ್ತ್ಯ ನೀಡಿದ್ದುಕಂಡುಬರುವುದು. ಈ ಚಿತ್ರದಲ್ಲಿ ಹುಡುಗಿಯೊಬ್ಬಳ ಕಲ್ಪನಾ ಚಿತ್ರ ರಚಿಸಿದ್ದಾರೆ. ಆಕೆಯ ಮುಖವರ್ಣವು ಕೆಂಪಾಗಿದೆ., ಗೋದಿ ವರ್ಣದ ಮೈಬಣ್ಣವನ್ನು ಯಥಾವತ್ತಾಗಿ ನಿರೂಪಿಸಿದ್ದಾರೆ. ಬಳಸಿರುವ ವರ್ಣಗಳು

ನಯವಾಗಿರುವ ನಿರ್ವಹಣೆಯಿಂದ ಕೂಡಿವೆ. ಮುಖದ ಮೇಲೆ ಮಿಂಚುವಂತೆ ಹೊಳಪನ್ನು ಕೊಡಲಾಗಿದೆ. ತೈಲವರ್ಣದಿಂದ ರಚಿಸಿದ ಈ ಕಲಾಕೃತಿಯಲ್ಲಿ ಪಾರದರ್ಶಕ ಮತ್ತು ಓಪೆಕ್ ವಿಧಾನಗಳನ್ನು ಅನುಸರಿಸಲಾಗಿದೆ. ರೂಪದರ್ಶಿಯ ದುಂಡುತನವು ಅತ್ಯಂತ ಮನೋಜ್ಞವಾಗಿ ಚಿತ್ರಿಸಲಾಗಿದೆ. ಪ್ರಖರ ವರ್ಣದ ಲೇಪನವಿದದರೂ ನೆರಳು ಬೆಳಕನ್ನು ಸ್ಪಷ್ಟವಾಗಿ ರಚಿಸಲಾಗಿದೆ. ಹುಡುಗಿಯ ದೇಹಕ್ಕೆ ಕೆಂಪು ವರ್ಣದ ಉಡುಪುಗಳು ಚಿತ್ರಿಸಲಾಗಿದೆ.

**ವ್ಯಂಗ್ಯ ಚಿತ್ರಗಳು : ೧೯೯೬**

ವ್ಯಂಗ್ಯ ಚಿತ್ರಗಳು ಎಂದಾಕ್ಷಣ ಎಲ್ಲರ ಮುಖದಲ್ಲಿ ನಗು ಆವರಿಸೋದು ಸಾಮಾನ್ಯ ಸಂಗತಿ ಇವುಗಳ ಹೆಚ್ಚಾಗಿ ಪತ್ರಿಕಾ ಮಾಧ್ಯಮದಲ್ಲಿ ಪ್ರಕಟಗೊಳ್ಳುತ್ತಿದ್ದು ಹಾಸ್ಯದ ಹೊನಲಿನಲ್ಲಿ ತೇಲಾಡಿಸುತ್ತವೆ. ಚುಟುಕು ಕವನಕ್ಕೆ ಸಂದರ್ಭದ ವಿಸ್ತಾರಕೆ ಈ ರೀತಿಯ ಚಿತ್ರಗಳನ್ನು ಬರೆಸುವರು. ಚಿತ್ರದ ಹಿನ್ನಲೆಯಲ್ಲಿ ಈ ವ್ಯಂಗ್ಯ ಚಿತ್ರದಲ್ಲಿ ದಂಪತಿಗಳಿಬ್ಬರು ಓರೆನೋಟದಿಂದ ನೋಡುತ್ತಿರುವ ಕುತೂಹಲಕರ ಪ್ರಸಂಗವನ್ನು ಸೆರೆಹಿಡಿಯಲಾಗಿದೆ. ಮೊದಲು ವಿಷಯಕ್ಕೆ ತಕ್ಕಂತೆ ಚಿತ್ರ ರಚನೆ ಮಾಡಿ ಅದ್ಕಕೆ ಹಾಸ್ಯದ ರಸಕ್ಕೆ ಪೂರಕವಾಗುವಂತೆ ದೇಹದ ಯಾವುದೇ ಒಂದು ಭಾಗವನ್ನು ದೊಡ್ಡದಾಗಿ ರಚಿಸಿ ನೋಡುಗನಲ್ಲಿ ಹಾಸ್ಯ ಮನೋಭಾವವನ್ನು ನೀಡುತ್ತಾರೆ. ಚಿತ್ರದಲ್ಲಿ ಸಹಿತ ವ್ಯಕ್ತಿಯ ಮುಖವು ದೊಡ್ಡದಾಗಿದ್ದು ದೊಡ್ಡ ಹಲ್ಲು, ಮೂಗು, ನಗು, ಮಂದಹಾಸದ ಮುಖ ತೆರೆದುಕೊಂಡ ಕೆಳ ಬದಿಯ ತುಟಿ ಇವುಗಳು ನಗು ಉಕ್ಕಿಸುವಂತಿದೆ. ಕಣ್ಣಿಗೆ ಹಾಕಿಕೊಂಡ ಚಾಳಿಸು ಎಲ್ಲವು ನೋಡುಗನಲ್ಲಿ ವ್ಯಂಗ್ಯ ಮನೋವೃತ್ತಿ ಹೊರ ಹಾಕುತ್ತವೆ. ವ್ಯಕ್ತಿದೇಹಕ್ಕೆ ಧರಿಸಿರುವ ಕೋಟು, ಟೈ ಮತ್ತು ಪಕ್ಕದಲ್ಲಿ ನಿಂತಿರುವ ಮಹಿಳೆಯ ಮುಖವು ಮುನಿಸಿಕೊಂಡಂತೆ ರಚಿಸಲಾಗಿದೆ. ರೇಖಾ ಪ್ರಧಾನವಾಗಿದ್ದರೂ ಜಲ ವರ್ಣದಲ್ಲಿ ತೆಳುವಾದ ಲೇಪನವಿದೆ. ವರ್ಣಗಳ ಲೇಪನದಲ್ಲಿ ನೆರಳು ಬೆಳಕಿನ ಪರಿಣಾಮ ಮೂಡಿ ಬಂದಿದೆ.

**ವ್ಯಕ್ತಿ : ೧೯೯೬**

ಜಲವರ್ಣದ ಈ ವ್ಯಂಗ್ಯ ಚಿತ್ರದಲ್ಲಿ ವ್ಯಕ್ತಿಯೋರ್ವನು ಬಿರುಸಾಗಿ ನಡೆದು ಹೋಗುತ್ತಿರುವಂತೆ ರಚಿಸಲಾಗಿದೆ. ವ್ಯಕ್ತಿಯು ದಾರಿಯಲ್ಲಿ ಚಲಿಸುತ್ತಿರುವಾಗ ಆತನ ನಡೆಗೆ ತಕ್ಕಂತೆ ಕೈಕಾಲುಗಳು ಚಲಿಸುತ್ತಿವೆ ಎಂಬ ಭ್ರಾಂತಿಯನ್ನು ಮೂಡಿಸುವಂತೆ ಹಿಂದು ಮುಂದಾಗಿ ಚಿತ್ರಿಸಲಾಗಿದೆ. ಈ ಚಿತ್ರದಲ್ಲಿ ದೊಡ್ಡದಾಗಿರುವ ಮುಖ ಮುಂದೆ ಚಾಚಿಕೊಂಡಿರುವ ಉದ್ದನೆಯ ಮೂಗು, ಚಿಕ್ಕ ಮೀಸೆ ದೊಡ್ಡ ದೊಡ್ಡ ಹಲ್ಲುಗಳು, ತುಟಿ ಮತ್ತು ಗದ್ದವು ಇಳಿ ಬಿದ್ದಂತೆ ಕಂಡು ಬರುತ್ತದೆ. ಕುತ್ತಿಗೆ ಇಡೀ ಮೈಮೆಲೆಲ್ಲ ಹರಡಿಕೊಂಡಿದೆ. ಕೋಟು ಪ್ಯಾಂಟ್ ಎಲ್ಲವೂ ಚಲನೆಯ ಭಂಗಿಯಲ್ಲಿ ಹಾರಾಡುತ್ತಿವೆ. ರೇಖೆಗಳೇ ಇಲ್ಲಿ ಭಾವನೆಯನ್ನು ಹೊರ ಹೊಮ್ಮಿಸುತ್ತಲಿವೆ.

**ಸ್ತ್ರೀ : ೧೯೯೬**

ಈ ಚಿತ್ರದಲ್ಲಿ ಮಹಿಳೆಯೊಬ್ಬಳ ವ್ಯಂಗ್ಯ ಚಿತ್ರವನ್ನು ಪರಿಣಾಮಕಾರಿಯಾಗಿ ಬಿಂಬಿಸಲಾಗಿದೆ. ವ್ಯಂಗ್ಯಭಾವವು ಎದ್ದು ಕಾಣುವಂತೆ ಸ್ತ್ರೀಯ ದೇಹವು ಚಿಕ್ಕದಾಗಿದ್ದು, ದೊಡ್ಡ ತಲೆಯನ್ನು ಹೊಂದಿದ್ದಾಳೆ. ಮುಖದ ವಿನ್ಯಾಸವು ಓರೆ ನೋಟಕ್ಕೊಳಗಾಗಿದೆ. ಕಣ್ಣು ಮತ್ತು ಮೂಗು ಮುಖಕ್ಕೆ ತಕ್ಕಂತೆ ಇದ್ದು ದೊಡ್ಡ ಬಾಯಿ ಹಲ್ಲುಗಳನ್ನು ರಚಿಸಲಾಗಿದೆ ತಲೆಯ ಮೇಲೆಲ್ಲ ಹರಡಿಕೊಂಡ ಕೂದಲು ಹಾಗೂ ಜಡೆಯು ಗಾಳಿಗೆ ಹಾರುವಂತೆ ವಿನ್ಯಾಸಗೊಳಿಸಲಾಗಿದೆ. ನೋಡಲು ಸಂಪ್ರದಾಯಕ ಮಹಿಳೆಯ ಹಾಗೆ ಕಾಣುವ ಸ್ತ್ರೀಯು ಬಿಳಿಯ ಸೀರೆ ಹಾಗೂ ತಿಳಿಹಸಿರು ರವಿಕೆಯನ್ನು ತೊಟ್ಟಿದ್ದಾಳೆ. ಕೈಯಲ್ಲಿ ಪುಸ್ತಕವನ್ನು ಹಿಡಿದು ಹೊರಟಂತೆ ಕಾಣುವ ಚಿತ್ರವು  ಹಾಸ್ಯ ಭಾವನೆಯನ್ನು ಉಕ್ಕಿಸುತ್ತದೆ.

**ವ್ಯಂಗ್ಯ ಚಿತ್ರ : ೧೯೯೬**

ಸಂಧರ್ಭಕ್ಕೆ ತಕ್ಕಂತೆ ಹಾಸ್ಯವನ್ನು ಸೃಷ್ಠಿಸುವ ವ್ಯಂಗ ಚಿತ್ರಗಳು ರಾಜಕೀಯ ಪಿತೂರಿ, ಗಂಡ ಹೆಂಡಿತಿಯರ ಮದ್ಯೆ ಇರುವಂತಾ ಸರಸವಿರಸ ಸಲ್ಲಾಪಗಳನ್ನು ವಿನೋದ ಪೂರ್ಣವಾಗಿ ವಿಡಂಬಿಸುತ್ತವೆ. ಈ ಚಿತ್ರದಲ್ಲಿ ಪಾಟೀಲರು ದಂಪತಿಗಳಿಬ್ಬರ ಸರಸ ವಿರಸಗಳನ್ನು ಹಾಸ್ಯದ ಹಿನ್ನೆಲೆಯಲ್ಲಿ ರಚಿಸಿದ್ದಾರೆ. ಈ ಕೃತಿಯಲ್ಲಿ ದಂಪತಿಗಳಿಬ್ಬರು ಪ್ರಯಾಣಿಸುತ್ತಿರುವಾಗ ಗಂಡನ ಮುಖದಲ್ಲಿ ಮಂದಹಾಸ ಬೀರಿದ್ದು ಅದೇ ಸ್ತ್ರೀ ಮುಖದಲ್ಲಿ ಕೋಪದಿಂದ ಕೂಡಿದ ಭಾವನೆ ಇದೆ. ವೇಷಭೂಷಣಗಳು, ಆವಭಾವಗಳು ಅಂಗಾಂಗಳ ರಚನೆ ಹಾಸ್ಯಕ್ಕೆ ಪೂರಕವಾಘುವಂತೆ ವಿಡಂಬಿಸಿ ಚಿತ್ರಿಸಲಾಗಿದೆ.

**ಅಜ್ಜ ಮೊಮ್ಮಗ (ವ್ಯಂಗ್ಯ ಚಿತ್ರ) : ೧೯೯೬**

ಚಿತ್ರದಲ್ಲಿ ಅಜ್ಜ ಮೊಮ್ಮಗನನ್ನು ಪ್ರೀತಿಯಿಂದ ದಿನ ನಿತ್ಯವು ಶಾಲೆಗೆ ಬಿಡುವ ದೃಶ್ಯ ಇದಾಗಿದೆ. ಈ ಘಟನೆಯನ್ನು ವಿಡಂಬಣಾತ್ಮಕವಾಗಿ ಚಿತ್ರಿಸಲಾಗಿದೆ. ಈ ಕೃತಿಯಲ್ಲಿ ತಾತನ ಮುಖವು ದೊಡ್ಡದಾಗಿ ಕುತ್ತಿಗೆ ಹಾಗೂ ದೇಹವು ಚಿಕ್ಕದಾಗಿ ಚಿತ್ರಿಸಲಾಗಿದೆ. ಮುಖದ ಮೇಲೆ ವೃದ್ಯಾಪವು ಎದ್ದು ಕಾಣುತ್ತಿದ್ದು ರೇಖಾ ಪ್ರಧಾನವಾದ ಚಿತ್ರಕ್ಕೆ ಮುಖ ಮತ್ತು ಕೈಗಳಿಗೆ ವರ್ಣ ಬಳಕೆ ಮಾಡಲಾಗಿದೆ. ತಲೆಯ ಮೇಲೆ ಬಿಳಿಯ ಕೂದಲನ್ನು ತಿಳಿವರ್ಣಗಳಿಂದ ಕುಂಚದ ಎಳೆತಗಳಿಂದ ನಿರೂಪಿಸಲಾಗಿದೆ. ತಾತನು ಕೈಯಲ್ಲಿ ಕೊಡೆಯನ್ನು ಹಿಡಿದಿದ್ದಾನೆ. ಮೊಮ್ಮಗನು ಹೆಗಲ ಮೇಲೆ ಶಾಲೆಯ ಬ್ಯಾಗ ಹಾಕಿಕೊಂಡು ಹೋಗುವುದು ತುಂಬಾ ಚೆನ್ನಾಗಿ ಮೂಡಿ ಬಂದಿದೆ. ರೇಖೆಗಳು ಒಟ್ಟಾರೆ ಚಿತ್ರಕ್ಕೆ ಮೆರಗನ್ನು ತಂದುಕೊಟ್ಟಿವೆ.

**ಕಥೆ : ೧೯೯೬**

ಈ ಚಿತ್ರದಲ್ಲಿ ಗ್ರಾಮೀಣ ಬಡ ಕುಟುಂಬದ ಪ್ರೇಮಿಗಳಿಬ್ಬರು ಪರಸ್ಪರ ಪ್ರೀತಿಸಿದ್ದು ತಮ್ಮ ಪ್ರೀತಿಗೆ ಒಪ್ಪಿಗೆ ಸಿಗದೆ ಇಬ್ಬರೂ ಹೊಸ ಪರಿಸರವೊಂದನ್ನು ಹುಡುಕುತ್ತಾ ಹೊರಟಂತಹ ಸಂದರ್ಭವಾಗಿದೆ. ಇವರಿಬ್ಬರ ನಡುವೆ ಖಳನಾಯಕನಂತೆ ಗೋಚರಿಸುವ ವ್ಯಕ್ತಿಯೊಬ್ಬ ಇವರನ್ನೇ ದಿಟ್ಟಿಸಿ ನೋಡುತ್ತಿದ್ದಂತೆ ಚಿತ್ರಿಸಲಾಗಿದೆ. ಹಳ್ಳಿಯನ್ನು ಬಿಟ್ಟು ಬಲುದೂರ ಬಂದಿರುವ ಪ್ರೇಮಿಗಳನ್ನು ದರ್ಪದಿಂದ ನೋಡುತ್ತಲಿರುವ ಅವನ ಮುಖವು ಕಾಯ್ದು ಕಬ್ಬಿಣದಂತೆ ಕೆಂಪಾಗಿದೆ. ಕಣ್ಣುಗುಡ್ಡೆಗಳು ಹೊರಬಂದಂತೆ ದೃಷ್ಟಿಯ ತೀವ್ರತೆ ಇದೆ. ಕೋಪದ ಮುಖಕ್ಕೆ ದೊಡ್ಡ ಒರಟು ಮೀಸೆ ಎಲ್ಲವೂ ಅದ್ಭುತವಾದ ಕಲ್ಪನೆಯನ್ನು ಕಟ್ಟಿಕೊಡುತ್ತವೆ. ಖಳನಾಯಕನಿಂದ ಹಿಡಿದು ಮಹಿಳೆಯ ತಲೆಯವರೆಗೆ ಒಂದು ವಸ್ತ್ರವು ಹಾರಿ ಬಂದಂತೆ ಕಂಡು ಬರುತ್ತಿದೆ. ಚಿತ್ರಕ್ಕೆ ಬಳಸಿರುವ ವರ್ಣಗಳೆಲ್ಲವೂ ಪ್ರಖರ ವರ್ಣಗಳಾಗಿದ್ದು ನೆರಳು ಬೆಳಕಿನ ಪರಿಣಾಮದಿಂದ ಕೂಡಿದೆ. ಒಟ್ಟಾರೆ ಚಿತ್ರದಲ್ಲಿ ಪ್ರತಿವ್ಯಕ್ತಿಗಳ ದೇಹವು ಅಂಗ ರಚನಾ ಶಾಸ್ತ್ರಕ್ಕೆ ಅನುಸಾರವಾಗಿ ರಚಿಸಲ್ಪಟ್ಟಿದೆ.

**ಯೋಚನಾ ಮಗ್ನ ಮಹಿಳೆ : ೧೯೯೬**

ಇದು ಕೂಡಾ ಮಹಿಳೆಯ ವಸ್ತು ವಿಷಯವನ್ನಾಧರಿಸಿದ ರೇಖಾ ಪ್ರಧಾನ ಚಿತ್ರವಾಗಿದೆ. ಈ ಚಿತ್ರದಲ್ಲಿ ಸ್ತ್ರೀಯೊಬ್ಬಳು ಓರೆನೋಟದಲ್ಲಿ ಕುಳಿತಿದ್ದಾಳೆ. ಯಾವುದೋ ಒಂದು ಕಾಲ್ಪನಿಕ ಜಗತ್ತಿನಲ್ಲಿ ವಿಹರಿಸುತ್ತಿರುವಂತೆ ಕಂಡು ಬರುತ್ತದೆ. ಚಿತ್ರದಲ್ಲಿ ರೇಖೆಗಳು ಜೀವಂತಿಕೆಯ ಸ್ವರೂಪವನ್ನು ಪಡೆದುಕೊಂಡಿವೆ. ಮುಖ ಚಹರೆಯು ಸುಂದರವಾಗಿದ್ದು ಕಣ್ಣುಗಳೆರೆಡು ಓರೆ ನೋಟವನ್ನು ಬೀರುತ್ತಿವೆ. ಸ್ತ್ರೀಯು ತುಂಬಾ ಸೌಂದರ್ಯವತಿಯಾಗಿದ್ದಾಳೆ. ರೇಖೆಗಳು ತಮ್ಮ ಲಯವನ್ನು ಮೀರದೆ ಅನನ್ಯವಾದ ಹರಿವಿನಿಂದ ಚಲಿಸಿವೆ. ಈ ಮಹಿಳೆ ನೋಡಲು ಆಧುನಿಕ ಸ್ತ್ರೀಯಂತಿದ್ದು ಹಿಂಭಾಗದಲ್ಲಿ ಪುರುಷನೊಬ್ಬನ ರಚಿಸಲ್ಪಟ್ಟಿದ್ದಾನೆ. ಈತ ಬೋಳು ತಲೆ, ಕಣ್ಣಿಗೆ ಕನ್ನಡಕ, ತುಸು ಮೀಸೆ, ಕುರುಚಲು ಗಡ್ಡವನ್ನು ಹೊಂದಿದ್ದಾನೆ. ಹೀಗೆ ರೇಖಾ ಪ್ರಧಾನವಾದ ಈ ಚಿತ್ರವು ಇಡಿಂಯನ್ ಇಂಕ್ ಮಾಧ್ಯಮದಿಂದ ಹಾಳೆಯ ಮೇಲೆ ಚಿತ್ರಣಗೊಂಡಿದೆ.

**ವ್ಯಕ್ತಿ : ೧೯೯೭**

ಅತ್ಯಂತ ಕ್ಷಿಪ್ರವಾಗಿ ರಚಿಸಿದ ಅಕಾಡೆಮಿಕ್ ಶೈಲಿಯ ಭಾವಚಿತ್ರ ಇದಾಗಿದೆ. ದಟ್ಟವಾದ ಕುಂಚದ ಬೀಸುಗಳು ಮುಖದ ಸೂಕ್ಷ್ಮ ವಿವರಗಳನ್ನು ಸೂಚಿಸದೇ ಇದ್ದರೂ ಒಟ್ಟು ಭಾವಚಿತ್ರ ಸುಂದರವಾಗಿದೆ. ರೂಪದರ್ಶಿಯ ಆಕಾರ, ಮೈಬಣ್ಣ, ವೇಷಭೂಷಣಗಳಿಗೆ

ಅನುಸಾರವಾಗಿ ವರ್ಣಗಳನ್ನು ವಿವಿಧ ರೀತಿಯಲ್ಲಿ ಬಳಸಿಕೊಂಡಿದ್ದಾರೆ. ರೂಪದರ್ಶಿಯ ದೇಹ ರಚನೆ ಹಾಗೂ ಉಡುಪಿನಲ್ಲೂ ಅತೀ ವೇಗದ ಕುಂಚದ ಎಳೆತನಗಳು ಕಂಡು ಬರುತ್ತವೆ. ಭಾವಚಿತ್ರದಲ್ಲಿ ದುಂಡುತನ ಸ್ಪಷ್ಟವಾಗಿ ತೋರಿಸಲಾಗಿದೆ.

**ಮಹಿಳೆ ಭಾವಚಿತ್ರ : ೧೯೯೮**

ಪಾಟೀಲರು ಅಧುನಿಕ ಸಂಯೋಜನೆಯಂತೆಯೇ ಭಾವಚಿತ್ರಗಳನ್ನು ಅತ್ಯಂತ ಕಡಿಮೆ ಅವಧಿಯಲ್ಲಿ ಚಿತ್ರಿಸುತ್ತಾರೆ. ಅವರ ಭಾವಚಿತ್ರಗಳಲ್ಲಿ ಸೂಕ್ಷ್ಮವಿವರಗಳು ಮತ್ತು ಹಿನ್ನೆಲೆಯನ್ನು ಎಂದೂ ವಿವರವಾಗಿ ಚಿತ್ರಿಸುವುದಿಲ್ಲ. ಮೇಲೆ ಹೇಳಿರುವಂತೆ ಹೆಚ್ಚಿನ ವಿವರ ಸೂಕ್ಷ್ಮಗಳು ಕಂಡುಬರುವುದಿಲ್ಲ. ರೂಪದರ್ಶಿಯ ಮುಖವರ್ಣವನ್ನು ಉಜ್ವಲವಾಗಿ ಲೇಪಿಸಲಾಗಿದೆ. ಹಾಗೂ ಪಾರದರ್ಶಕ ವಿಧಾನಕ್ಕೆ ಪ್ರಧಾನ್ಯತೆ ಕೊಡಲಾಗಿದೆ. ಕೆಂಪು ಬಣ್ಣ ಹೊಂದಿದ್ದು ವಕ್ರ ದೃಷ್ಟಿ ಹೊಂದಿದ್ದಾಳೆ.

**ಮಹಿಳೆ ಭಾವಚಿತ್ರ : ೧೯೯೮**

ಕಾಲ್ಪನಿಕವಾಗಿ ಚಿತ್ರಿಸಿರುವ ಮಹಿಳೆಯ ಎದೆಮೊಗದ ಚಿತ್ರ ಇದಾಗಿದೆ. ಜಲವರ್ಣ ಮಾಧ್ಯಮದಲ್ಲಿ ಕಾಗದದ ಮೇಲೆ ಈ ಕಲಾಕೃತಿ ಅತ್ಯಂತ ಕ್ಷಿಪ್ರಗತಿಯಲ್ಲಿ ರಚಿಸಲ್ಪಟ್ಟಿದೆ. ನಯವಾದ ವರ್ಣಗಾರಿಕೆ, ಮುಖ ಚಹರೆಯಲ್ಲಿರುವ ಭಾವನೆಗಳು, ವರ್ಣಲೇಪನದಲ್ಲಿರುವ ಮೃದುತ್ವವನ್ನು ಪರಿಣಾಮಕಾರಿಯಾಗಿ ಚಿತ್ರಿಸಲಾಗಿದೆ. ಮಹಿಳೆಯ ಮುಖದಲ್ಲಿ ಕಣ್ಣು, ಮೂಗು, ತುಟಿಯ ವಿನ್ಯಾಸ ಸುಂದರವಾಗಿದೆ. ಬಳಸಿರುವ ವರ್ಣಗಳು ತಂಪಾದ ಅನುಭವ ಕೊಡುತ್ತವೆ. ಆಕೃತಿಗೆ ನೆರಳು ಬೆಳಕಿನ ತಂತ್ರವನ್ನು ಕೂಡ ಅಳವಡಿಸಲಾಗಿದೆ.

**ಮಹಿಳೆ ಭಾವಚಿತ್ರ : ೧೯೯೮**

ಮಹಿಳೆಯರ ಕಾಲ್ಪನಿಕ ಚಿತ್ರಗಳನ್ನು ಹೆಚ್ಚಾಗಿ ರಚಿಸಿದ್ದು ಇಲ್ಲಿಯೂ ಅಂತಹ ಮಹಿಳೆಯ ಚಿತ್ರವಿದೆ. ಇಲ್ಲಿ ಮುಖದ ಜೊತೆಗೆ ದೇಹದ ಹೆಚ್ಚಿನ ಭಾಗವನ್ನು ರಚಿಸಲಾಗಿದೆ. ದೇಹ ಸೌಂದರ್ಯ ಪೂರಿತಳಾದ ರೂಪದರ್ಶಿಯು ಕೆಂಪು ವರ್ಣದ ಮುಖಕಾಂತಿಯಿಂದ ನೈಜ ಶೈಲಿಗೆ ಹತ್ತಿರವಾಗಿದೆ. ಈ ಕಲಾಕೃತಿಯಲ್ಲಿ ಬಳಸಿರುವ ಕೆಂಪು ವರ್ಣ ದಪ್ಪಗಾಗಿ ಲೇಪಿಸಲಾಗಿದೆ. ಅಲ್ಲಲ್ಲಿ ಬಿಳಿ ಹಾಳೆಯನ್ನು ಹಾಗೇ ಬಿಟ್ಟು ಬೆಳಕಿನ ಭಾಗವು ಇನ್ನಷ್ಟು ಉಜ್ವಲವಾಗಿ ಗೋಚರವಾಗುವಂತೆ ಮಾಡಲಾಗಿದೆ. ಮುಖದ ಕೆಳಗೆ ಇರುವ ಕೈಯ ಬೆರಳುಗಳು ಹಾಗೂ ಮಡಿಕೆ ಮಾಡಿರುವ ಮುಂಗೈಗಳು ಕುಂಚದ ಎಳೆತಗಳಿಂದಲೇ ಪೂರ್ಣಗೊಂಡಿವೆ. ಈ ಕೃತಿಯಲ್ಲಿ ಮಹಿಳೆಯ ಆಂತರಿಕ ಮನಸ್ಸಿನ ಭಾವನೆಗಳು ಪರಿಣಾಮಕಾರಿಯಾಗಿ ರೇಖೆ ಮತ್ತು ಬಣ್ಣದ ಲೇಪನದಿಂದ ಸೃಷ್ಟಿಗೊಂಡಿವೆ.

**ಮೌನ : ೨೦೦೦**

ಆಧುನಿಕ ಸಂವೇಧನಯುಳ್ಳ ಹಿಂದಿನ ಚಿತ್ರ ರಚನೆಯು ತಂತ್ರ ಪುನರಾವರ್ತನೆಯಾದ ಕಲಾಕೃತಿ ಆಧುನಿಕ ಶೈಲಿಯಲ್ಲಿ ಅಮೂರ್ತ ಕಲ್ಪನೆಯಲ್ಲಿ ಮಹಿಳೆಯ ಚಿತ್ರ ರಚಿಸುವುದು. ಪಾಟೀಲರ ಚಿತ್ರಶೈಲಿಯ ವಿಶೇಷತೆಯಾಗಿದೆ. ಈ ಚಿತ್ರದಲ್ಲಿ ಪ್ರಿಯಕರನಿಲ್ಲದ ಸ್ತ್ರೀಯೊಬ್ಬಳು ಮುನಿಸಿಕೊಂಡು "ಮೌನ" ತಾಳಿದ್ದಾಳೆ. ಮುಸ್ಸಂಜೆ ಇಳಿ ಹೊತ್ತಿನಲ್ಲಿ ಪ್ರಕೃತಿಯ ಮದ್ಯೆ ಒಬ್ಬಂಟಿಯಾಗಿ ನಿಂತಿದ್ದಾಳೆ. ಹಿಂಬದಿಯಲ್ಲಿ ಎರಡು ಪಕ್ಷಿಗಳು ಕುಳಿತ್ತಿದ್ದು ಪ್ರೇಮ ಸಂದೇಶ ನೀಡುತ್ತವೆ. ಇವುಗಳನ್ನು ಸಾಂಕೇತಿಕವಾಗಿ ಬಳಸಲಾಗಿದೆ. ಇಲ್ಲಿನ ವರ್ಣಗಳಲ್ಲಿ ಪಾಟೀಲರ ಎಂದಿನ ಹಳದಿ ವರ್ಣವೇ ಪ್ರಮುಖವಾಗಿದೆ. ಹಿಂಬದಿಯಲ್ಲಿ ಮುಸ್ಸಂಜೆಯ ಸೂರ್ಯ ಇಳಿಮುಖವಾಗುತ್ತಿರುವಂತೆ ನೀಲಾಕಾಶ ರಚಿಸಲಾಗಿದೆ. ಕಲಾಆಕೃತಿಯಲ್ಲಿ ಸ್ತ್ರೀಯ ವರ್ಣ ಸೌಮ್ಯವರ್ಣದ ಲೇಪನದಿಂದ ಕೂಡಿದೆ. ಕಣ್ಣು ಅರಳಿಸಿ ಪಿಳಿ ಪಿಳಿ ನೋಡುತ್ತಿರು ಕಪ್ಪು ಬಿಳಿ ವರ್ಣದ ಪಕ್ಷಿಗಳು ಮಹಿಳೆಯ ಮೌನಮುರಿಯುವ ಪ್ರಯತ್ನದಲ್ಲಿವೆ.

**ಬಾಲಕಿಯ ಭಾವಚಿತ್ರ : ೨೦೦೦**

ಪಾಟೀಲರ ಗಮನಾರ್ಹ ಮಕ್ಕಳ ಚಿತ್ರಗಳಲ್ಲಿ ಇದೂ ಒಂದಾಗಿದೆ. ಕಾಲ್ಪನಿಕವಾಗಿ ಛಾಯಾಚಿತ್ರದ ಆಧಾರದಲ್ಲಿ ಪ್ರಸ್ತುತ ಕೃತಿ ರಚಿಸಲಾಗಿದೆ. ಬಾಲಕಿಯ ಮುಖದ ದುಂಡುತನಕ್ಕೆ ತಕ್ಕಂತೆ ವರ್ಣಗಾರಿಕೆಯಲ್ಲಿ ನೆರಳು ಬೆಳಕು ಹಾಗೂ ಮುಖಕ್ಕೆ ಕಾಂತಿಯನ್ನು ತಂದುಕೊಡಲಾಗಿದೆ. ವರ್ಣ ಸಂಯೋಜನೆಯ ಒಂದರ ಮೇಲೆ ಒಂದರಂತೆ ಜಲವರ್ಣಗಳನ್ನು ಲೇಪಿಸಲಾಗಿದೆ. ಕುಂಚದ ಎಳೆತಗಳು ಅತ್ಯಂತ ಕ್ಷಿಪ್ರಗತಿಯಲ್ಲಿ ಚಲಿಸಿವೆ. ಹಿನ್ನೆಲೆಯಲ್ಲಿ ನೀಲಿ ವರ್ಣವನ್ನು ಲೇಪಿಸಲಾಗಿದೆ. ತಲೆಯ ಕೂದಲದನ್ನು ನಯವಾಗಿ ನಿರ್ವಹಿಸಲಾಗಿದೆ. ಹಸನ್ಮುಖದ ಭಾವವು ಹಾಗೆಯೇ ಯಥಾವತ್ತಾಗಿರುವಂತೆ ರಚಿಸಲಾಗಿದೆ.

**ಬಾಲಕನ ಭಾವಚಿತ್ರ : ೨೦೦೦**

ಪಾಟೀಲರು ಎಳೆಯ ಪ್ರಾಯದ ಮಕ್ಕಳನ್ನು ಚಿತ್ರಿಸುವುದರಲ್ಲಿ ಅತ್ಯಂತ ಉತ್ಸಾಹಕ ರಾಗುವುದೆಂಬುದಕ್ಕೆ ಈ ಭಾವಚಿತ್ರಗಳೇ ಸಾಕ್ಷಿ. ಈ ಕಲಾಕೃತಿಯಲ್ಲಿ ಬಾಲಕನೊಬ್ಬನ ಚಿತ್ರವಿದೆ. ಬಾಲಕನಲ್ಲಿರುವ ತುಂಟುತನ, ಹುಡುಗಾಟಿಕೆ, ಬಾಲ್ಯಗುಣ ವಿಶೇಷಗಳನ್ನು ಚಿತ್ರದಲ್ಲಿ ಒಡಮೂಡಿಸಿದ್ದಾರೆ. ಕುಂಚದ ಎಳೆತಗಳು ವೇಗವಾಗಿ ಚಲಿಸಿವೆ. ಬಳಸಿರುವ ವರ್ಣಗಳು ತೀರ ಹತ್ತಿರದ ಕೌಶಲ್ಯವನ್ನು ನಿರೂಪಿಸಿವೆ. ತುಂಬಾ ರಭಸವಾಗಿ ಕ್ಷಿಪ್ರಗತಿಯ ಚಿತ್ರರಚನೆಯಾದರೂ ಭಾವನೆಗೆ ಯಾವುದೇ ಮುಖದ ಮೇಲೆಲ್ಲ ಓಡಾಡಿದ ಕುಂಚದ ವೇಗದ ಬೀಸುಗಳ ಬಿರುತನದ ಜೊತೆಗೆ ಎಳೆಯ ಪ್ರಾಯವನ್ನು ಭಂಗ ಉಂಟಾಗದಂತೆ ಎಚ್ಚರ ವಹಿಸಲಾಗಿದೆ.

**ಸ್ತ್ರೀ ಭಾವಚಿತ್ರ : ೨೦೦೦**

ತೈಲವರ್ಣದಿಂದ ರಚಿಸಿದ ಈ ಭಾವಚಿತ್ರವು ಅಕಾಡೆಮಿಕ್ ಶೈಲಿಯ ರಚನಾ ತಂತ್ರವನ್ನು ನೆನಪಿಸುವುದಲ್ಲದೇ ಪಾಶ್ಚಿಮಾತ್ಯ ಕಲಾತಂತ್ರಗಾರಿಕೆಯ ನಿರ್ವಹಣೆಯನ್ನು ನಿರೂಪಿಸುತ್ತದೆ. ಹಳ್ಳಿಯ ಸ್ತ್ರೀಯೊಬ್ಬಳು ಹಳೆಯ ಬಟ್ಟೆಗಳನ್ನು ಧರಿಸಿರುವಂತೆ ಚಿತ್ರಿಸಲಾಗಿದೆ. ಕಪ್ಪು ವರ್ಣದ ರೂಪದರ್ಶಿಯನ್ನು ಬೆಳಕಿನ ಪ್ರಭಾವಕ್ಕೆ ಒಡ್ಡಿಕೊಂಡಿರುವಂತೆ ಚಿತ್ರಿಸಲಾಗಿದೆ. ಮುಖದ ಅರ್ಧ ಭಾಗ ಬೆಳಕು ಇನ್ನರ್ಧ ಭಾಗ ಕಪ್ಪು ವರ್ಣದಿಂದ ರಚಿಸಲಾಗಿದ್ದು ಸುಖ, ದುಖಃಗಳ ಕಲ್ಪನೆಯನ್ನು ಕೊಡಲಾಗಿದೆ. ಮಹಿಳೆಯ ಹಣೆಯ ಮೇಲೆ ಇಟ್ಟಂತಹ ಕೆಂಪು ಕುಂಕುಮವು ಸಂಪ್ರದಾಯದ ಹಾಗೂ ಸಂಸ್ಕೃತಿಯ ಮೆರಗನ್ನು ಇನ್ನಷ್ಟು ಹೆಚ್ಚಿಸಿದೆ. ಹಸಿರು ರವಿಕೆ ಹಾಗೂ ಬಿಳಿ ಸೀರೆಯ ನಿರಿಗೆಗಳು ಸಹಜವಾಗಿ ಮೂಡಿದಂತಿವೆ.

**ತೊಂಭತ್ತರಿಂದ ಎರಡು ಸಾವಿರ ಇಸ್ವಿಯವರೆಗಿನ ಕಲಾಕೃತಿಗಳ ವಿಶ್ಲೇಷಣೆ :**

ಈ ದಶಕದಲ್ಲಿ ರಚನೆಯಾದ ಎಂ. ಬಿ. ಪಾಟೀಲರ ಕಲಾಕೃತಿಗಳನ್ನು ಗಮನಿಸಿದಾಗ ಅವರು ತಮ್ಮದೇ ಆದ ಪ್ರತ್ಯೇಕ ಚಿತ್ರಶೈಲಿಯನ್ನು ರೂಢಿಸಿಕೊಂಡು ಪ್ರಬುದ್ಧವಾಗಿ ಚಿತ್ರರಚನೆ ಮಾಡಿರುವುದು ಕಂಡು ಬರುತ್ತದೆ. ಈ ದಶಕದಲ್ಲಿ ಅವರು ಕ್ರಿ.ಶ. ೧೯೯೧ ರಿಂದ ೨೦೦೦ ಇಸ್ವಿವರೆಗಿನ ಅವಧಿಯಲ್ಲಿ ರಚಿಸಿದ ಸುಮಾರು ನಾಲ್ವತ್ತು ಕಲಾಕೃತಿಗಳನ್ನು ವಿಶ್ಲೇಷಣೆಗೆ ಒಳಪಡಿಸಲಾಗಿದೆ. ಈ ದಶಕದ ಅವರ ಕೃತಿಗಳಲ್ಲಿ ಹಳೆಯ ವಿಷಯಗಳೇ ಪುನರಾವರ್ತಿತವಾದರೂ ರಚನಾಶೈಲಿ, ಅಭಿವ್ಯಕ್ತಿಗೊಳಿಸುವ ಸಂಯೋಜನಾ ರೀತಿ, ಸಾಂಕೇತಿಕವಾಗಿ ಬಿಂಬಿಸುವ ಕೌಶಲ್ಯಗಳು ಅತ್ಯಂತ ಪ್ರಬುದ್ಧವಾಗಿವೆ. ಪಾರಂಪರಿಕ ಅಂಶಗಳನ್ನು ಆಧುನಿಕ ಶೈಲಿಯಲ್ಲಿ ಅನಾವರಣಗೊಳಿಸುವ ಅವರ ಸಾಮರ್ಥ್ಯ ಇಲ್ಲಿ ಗೋಚರಿಸುತ್ತದೆ.

ಯಾವುದೇ ಚಿತ್ರವನ್ನು ನೋಡಿದರೂ ಅಲ್ಲಿ ಪಾಟೀಲರ ಛಾಪು ಆವರಿಸಿ ಕೊಂಡಿರುತ್ತದೆ ಎಂಬ ಹಂತವನ್ನು ಅವರ ಈ ದಶಕದ ಚಿತ್ರಗಳಲ್ಲಿ ಗಮನಿಸಬಹುದಾಗಿದೆ. ಈ ದಶಕದ ಅವರ ಕಲಾಕೃತಿಗಳಲ್ಲಿ ಪಕ್ಷಿಯೊಂದಿಗೆ ಮಹಿಳೆ, ಸ್ತ್ರೀ ಮತ್ತು ಕುದುರೆ, ನಾಗರಪಂಚಮಿ, ಮಳೆಗಾಗಿ ಪ್ರಾರ್ಥನೆ, ದೇವಿಪೂಜೆ, ಸ್ತ್ರೀ ಮತ್ತು ಕೋಳಿ, ಮೌನ, ಯೋಚನಾ ಮಗ್ನ ಮಹಿಳೆ, ಯವ್ವನಾವಸ್ಥೆ ಮುಂತಾದ ಕೃತಿಗಳು ಪ್ರಮುಖವಾಗಿವೆ. ಈ ಕೃತಿಗಳೊಂದಿಗೆ ಅವರ ಎಂದಿನ ಆಸಕ್ತಿಯ ವಿಷಯಗಳಾದ ನಿಸರ್ಗದೃಶ್ಯ, ಭಾವಚಿತ್ರಗಳು, ನಗ್ನಸ್ತ್ರೀಯರ ಚಿತ್ರಗಳು ರಚನೆಗೊಂಡಿವೆ. ಕೆಲವು ಕಲಾಕೃತಿಗಳನ್ನು ಅಮೂರ್ತ ಹಿನ್ನೆಲೆಯಲ್ಲಿ ರಚನೆಮಾಡಿ ಶಿಷಿರ್ಕೆ ರಹಿತವಾಗಿ ಅವುಗಳನ್ನು ಪ್ರದರ್ಶಿಸಿದ್ದಾರೆ. ಇಲ್ಲಿ ಬಣ್ಣದ ಮೈವಳಿಕೆ ಹಾಗೂ ಆಧುನಿಕ ಶೈಲಿ ಪ್ರಮುಖವಾಗಿದೆ.

ಪಕ್ಷಿಯೊಂದಿಗೆ ಮಹಿಳೆ ಕೃತಿಯಲ್ಲಿ ಮಹಿಳೆಯೊಬ್ಬಳು ನಗ್ನಾಕಾರದಲ್ಲಿ ರಚನೆಗೊಂಡಿದ್ದಾಳೆ. ಅವಳ ಎದುರು ಭಾಗದಲ್ಲಿ ಪಾರಿವಾಳವನ್ನು ಹೋಲುವ ಪಕ್ಷಿಯೊಂದನ್ನು ಚಿತ್ರಿಸಲಾಗಿದೆ. ಹಿಂಬದಿಯಲ್ಲಿರುವ ಗಿಡದಲ್ಲಿ ಸಹಿತ ಎರಡು ಪಕ್ಷಿಗಳು ಕುಳಿತುಕೊಂಡಿವೆ. ಹಿಂದಿನ ದಶಕದಲ್ಲಿ ಚಿತ್ರಿಸಿದಂತೆ ಪ್ರೇಮ ಸಂದೇಶವನ್ನು ತಲುಪಿಸುವ ಸಂಕೇತವಾಗಿ ಇಲ್ಲಿ ಪಕ್ಷಿಗಳನ್ನು ಬಳಸಿಕೊಳ್ಳಲಾಗಿದೆ. 'ಸ್ತ್ರೀ ಮತ್ತು ಕುದುರೆ' ಕೃತಿಯಲ್ಲಿ ಕುದುರೆಯನ್ನು ಪುರುಷನ ಲೈಂಗಿಕ ಸಾಮರ್ಥ್ಯಕ್ಕೆ ಸಂಕೇತವಾಗಿ ಚಿತ್ರಿಸಲಾಗಿದೆ. ಈ ಕೃತಿಯಲ್ಲಿ ನಗ್ನ ಆಕಾರದಲ್ಲಿರುವ ಮೂರು ಜನ ಸ್ತ್ರೀಯರಿದ್ದಾರೆ. ಒಬ್ಬಳು ಅಂಗಾತ ಮಲಗಿಕೊಂಡಿದ್ದರೆ. ಇನ್ನಿಬ್ಬರು ಕುದುರೆಯನ್ನು ಅಪ್ಪಿಕೊಂಡಿದ್ದಾರೆ. ಶಿರ್ಷಿಕೆ ರಹಿತವಾಗಿರುವ ಮತ್ತೊಂದು ಕೃತಿಯಲ್ಲಿ ನಗ್ನ ಮಹಿಳೆಯೊಬ್ಬಳು ಬೋರಲಾಗಿ ಮಲಗಿಕೊಂಡು ಏನೋ ಯೋಚಿಸುತ್ತಿದ್ದಾಳೆ. ಹಿನ್ನೆಲೆಯಲ್ಲಿ ಲೈಂಗಿಕ ಸಂಕೇತಗಳನ್ನು ಚಿತ್ರಿಸಲಾಗಿದೆ.

ಗ್ರಾಮೀಣ ಪರಂಪರೆಯಲ್ಲಿ ಮಳೆಗಾಗಿ ಪ್ರಾರ್ಥಿಸುವ ಅನೇಕ ಆಚರಣೆಗಳಿವೆ. ಗುರ್ಚಿ, ಜೋಕುಮಾರ, ಗುಳ್ಳವ್ವ, ಇವುಗಳ ಪೂಜೆ, ಆಚರಣೆಗಳು ಒಂದು ಬಗೆಯಾದರೆ, ಕತ್ತೆಗಳಿಗೆ ಮತ್ತು ಕಪ್ಪೆಗಳಿಗೆ ಮದುವೆ ಮಾಡಿಸುವುದು, ಊರದೇವರನ್ನು ಆರಾಧಿಸುವುದು, ಹೀಗೆ ಹತ್ತು ಹಲವು ವೈವಿಧ್ಯ ಪ್ರಕಾರಗಳಿವೆ. ಅಂತಹ ಮಳೆಗಾಗಿರುವ ಆಚರಣೆಗಳನ್ನು ಈ ದಶಕದಲ್ಲಿ ಪಾಟೀಲರು ಚಿತ್ರರೂಪದಲ್ಲಿ ಹಿಡಿದಿಟ್ಟಿದ್ದಾರೆ. ಮಳೆ ಇಲ್ಲದೇ ಬರಗಾಲ ಉಂಟಾದಾಗ ನಾಡಿನಾದ್ಯಂತ ಮಳೆಗಾಗಿ ವಿವಿಧ ಆಚರಣೆಗಳನ್ನು ಜನರು ಮಾಡುತ್ತಾರೆ. ಅವುಗಳ ಪ್ರಭಾವ ಕಲಾವಿದರ ಮೇಲಾಗಿ ತಮ್ಮ ಕೃತಿಗಳ ಮೂಲಕ ಹೊರಹಾಕುತ್ತಾರೆ. ಕ್ರಿಶ ೧೯೬೨ ರಲ್ಲಿ ಕರ್ನಾಟಕದಲ್ಲಿ 'ಬರಪರಿಸ್ಥಿತಿ' ಉಂಟಾಗಿದ್ದನ್ನು ಇಲ್ಲಿ ಸ್ಮರಿಸಿಕೊಳ್ಳಬಹುದು.

ಈ ಸಂದರ್ಭದಲ್ಲಿ ನಾಡಿನಾದ್ಯಂತ ಮಳೆರಾಯನಿಗಾಗಿ ಹಲವು ಬಗೆಯ ಆಚರಣೆಗಳನ್ನು ಮಾಡಲಾಗಿತ್ತು. ಬಹುಶ ಇದರಿಂದ ಪ್ರಭಾವಿತರಾದ ಪಾಟೀಲರು ಅಂತಹ ಆಚರಣೆಗಳನ್ನು ಚಿತ್ರದ ಮೂಲಕ ಅಭಿವ್ಯಕ್ತಿಸಿದ್ದಾರೆ. ವಿಶೇಷವೆಂದರೆ ೧೯೬೨ ರಲ್ಲಿಯೇ ಬರದ ಕುರಿತಾಗಿರುವ ಕೃತಿಗಳು ರಚನೆಯಾಗಿವೆ. ಇಲ್ಲಿ ಈ ಬಗೆಯ ನಾಲ್ಕು ಕಲಾಕೃತಿಗಳನ್ನು ಅಧ್ಯಯನಕ್ಕೆ ಪರಿಗಣಿಸಲಾಗಿದೆ. ಮಳೆರಾಯನಿಗಾಗಿ ಪ್ರಾರ್ಥನೆ ಎಂಬ ಶಿರ್ಷಿಕೆಯ ಕೃತಿಯಲ್ಲಿ ಗುರ್ಚಿ ಆಚರಣೆಯ ಹಿನ್ನೆಲೆಯನ್ನು ಸಾಂಕೇತಿಕವಾಗಿ ತೋರಿಸಲಾಗಿದೆ. ವ್ಯಕ್ತಿಯೊಬ್ಬ ತಲೆಯ ಮೇಲೆ ಗುಂಡಾಗಿರುವ ಆಕಾರವನ್ನು ಹೊತ್ತುಕೊಂಡಿದ್ದಾನೆ. ಆತನ ಸುತ್ತಲೂ ಅನೇಕ ಜನರು ಸೇರಿದ್ದಾರೆ. ಹಿಂಭಾಗದಲ್ಲಿ ಮನೆಗಳು, ನಿಸರ್ಗ ಕಂಡುಬರುತ್ತದೆ.

ಅರಿಕೆ ಎಂಬ ಇನ್ನೊಂದು ಕೃತಿಯಲ್ಲಿ ಬರಗಾಲದ ಬವಣೆಯಿಂದ ತತ್ತರಿಸಿದ ವ್ಯಕ್ತಿಯೊಬ್ಬ ಆಕಾಶದ ಕಡೆಗೆ ಮುಖಮಾಡಿ ಮಳೆಗಾಗಿ ಪ್ರಾರ್ಥಿಸುತ್ತಿದ್ದಾನೆ. ಆತನ ಎದುರಿಗೆ ದೇವರಂತೆ ಕಂಡು ಬರುವ ಶಿಲೆಯೊಂದನ್ನು ರಚಿಸಲಾಗಿದೆ. ಮತ್ತೊಂದು ಕಲಾಕೃತಿಯಲ್ಲಿ ಸಹಿತ ಇಬ್ಬರು ವ್ಯಕ್ತಿಗಳು ಮೇಲಕ್ಕೆ ಕೈ ಮಾಡಿ ಮಳೆಗಾಗಿ ದೇವರನ್ನು ಬೇಡಿಕೊಳ್ಳುತ್ತಿದ್ದಾರೆ. ಇಲ್ಲಿಯೂ ಬರಗಾಲದ ಭೀಕರತೆಯನ್ನು ಪರಿಣಾಮಕಾರಿಯಾಗಿ ಚಿತ್ರಿಸಲಾಗಿದೆ. ದೇವಿಪೂಜೆ ಎಂಬ ಕೃತಿಯು ಸಹಿತ ಇದೇ ಹಿನ್ನೆಲೆಗೆ ಸಂಬಂಧಿಸಿದೆ. ಇಲ್ಲಿ ಮಳೆಬರದೇ ಬರಗಾಲ ಉಂಟಾದಾಗ ಊರವರೆಲ್ಲ ಊರದೇವತೆಯ ಉತ್ಸವ ಮಾಡುವ ಮೂಲಕ ಮಳೆಗಾಗಿ ಪ್ರಾರ್ಥಿಸುತ್ತಿದ್ದಾರೆ. ಇಲ್ಲಿ ಭೀಕರ ರೂಪದ ಹೆಣ್ಣುದೇವತೆಯು ಚಿತ್ರಿತಳಾಗಿದ್ದು ಜನರೆಲ್ಲ ಆಕೆಯನ್ನು ಆರಾಧಿಸುತ್ತಿರುವಂತೆ ಚಿತ್ರಿಸಲಾಗಿದೆ.

ನಾಗರಪಂಚಮಿ ಮತ್ತು ಸಂಭ್ರಮ ಎಂಬ ಕೃತಿಗಳು ಗ್ರಾಮೀಣ ಪ್ರದೇಶದ ಹಬ್ಬಹರಿದಿನಗಳ ವೈಭವಗಳನ್ನು ಕಟ್ಟಿಕೊಡುತ್ತವೆ. ನಾಗರ ಪಂಚಮಿ ಕೃತಿಯಲ್ಲಿ ಮಹಿಳೆಯರು ನಾಗಪ್ರತಿಮೆಗೆ ಹಾಲನ್ನು ಎರೆಯುತ್ತಿರುವಂತೆ ಚಿತ್ರಿಸಲಾಗಿದೆ. ಮಹಿಳೆಯರು ಪಾರಂಪರಿಕ ವೇಷಭೂಷಣಗಳಿಂದ ಅಲಂಕೃತರಾಗಿದ್ದು ಹಬ್ಬದ ಸಂಭ್ರಮದಲ್ಲಿ ನಲಿಯುತ್ತಿದ್ದಾರೆ. ಉಯ್ಯಾಲೆ ಎಂಬ ಕೃತಿಯು ಸಹಿತ ನಾಗರ ಪಂಚಮಿ ಹಬ್ಬದಲ್ಲಿ ಆಡುವ ಜೋಕಾಲಿಯನ್ನು ನೆನಪಿಸುತ್ತದೆ. ಸಂಭ್ರಮ ಎನ್ನುವ ಕೃತಿಯಲ್ಲಿ ಗ್ರಾಮೀಣ ಪರಂಪರೆಯ ವೇಷಭೂಷಣಗಳಿಂದ ಅಲಂಕೃತಗೊಂಡ ಜನರು ಯಾವುದೋ ಉತ್ಸವದಲ್ಲಿ ಪಾಲ್ಗೊಂಡಿರುವಂತೆ ರಚನೆ ಮಾಡಲಾಗಿದೆ.

ಪಾಟೀಲರು ಈ ದಶಕದಲ್ಲಿ ವ್ಯಂಗ್ಯ ಚಿತ್ರಕಲೆಯ ಕಡೆಗೆ ಆಕರ್ಷಿತರಾದಂತೆ ಕಂಡು ಬರುತ್ತದೆ. ಬಹುಶ ಅವರು ಕೆಲಸ ಮಾಡುತ್ತಲಿದ್ದ ಇಲಾಖೆಯ ಕಾರ್ಯವೈಖರಿಯು ಇದಕ್ಕೆ ಕಾರಣವಾಗಿರಬಹುದು. ವ್ಯಂಗ್ಯ ಚಿತ್ರಗಳು ಸ್ವಲ್ಪದರಲ್ಲಿಯೇ ಹೆಚ್ಚಿನ ಅಂಶಗಳನ್ನು ತಿಳಿಸುವಲ್ಲಿ ಪ್ರಭಾವಕಾರಿಯಾಗಿವೆ. ಸಂಕೇತದಲ್ಲಿ ಸಾಗರವನ್ನೇ ತೋರಿಸುವಂತೆ ಕಿರಿದರಲ್ಲಿ ಹಿರಿಯದಾದ ಅರ್ಥವನ್ನು ಇವು ಅನಾವರಣಗೊಳಿಸುತ್ತವೆ. ರಾಜಕೀಯವಾಗಿ, ಸಾಮಾಜಿಕವಾಗಿ, ಧಾರ್ಮಿಕವಾಗಿರುವ ಓರೆಕೋರೆಗಳನ್ನು ಹೊರಹಾಕಲು ವ್ಯಂಗ್ಯಚಿತ್ರಗಳನ್ನು ಪತ್ರಿಕಾ ಮಾಧ್ಯಮವು ಯಶಸ್ವಿಯಾಗಿ ಬಳಸಿಕೊಂಡಿದೆ. ಪಾಟೀಲರು ಕರ್ನಾಟಕ ಸರಕಾರದ ವಾರ್ತಾ ಮತ್ತು ಪ್ರಚರ ಇಲಾಖೆಯಲ್ಲಿ ಕೆಲಸಕ್ಕಿದ್ದವರು. ಅಲ್ಲಿ ಸರ್ಕಾರದ ಸಾಧನೆಗಳನ್ನು ಮತ್ತು ಸೂಚನೆಗಳನ್ನು ಜನರಿಗೆ ತಿಳಿಸಿಕೊಡಲು ಇವರನ್ನು ಚಿತ್ರಕಾರರನ್ನಾಗಿ ನೇಮಿಸಿಕೊಳ್ಳಲಾಗಿತ್ತು. ಹಾಗಾಗಿ ಜನರಿಗೆ ಸುಲಭವಾಗಿ ಸ್ವಲ್ಪದರಲ್ಲಿಯೇ ಹೆಚ್ಚಿನ ಸಂಗತಿಯುನ್ನು ತಿಳಿಸುವ ನಿಟ್ಟಿನಲ್ಲಿ ಇವರು ವ್ಯಂಗ್ಯಚಿತ್ರಶೈಲಿಯನ್ನು ಅಳವಡಿಸಿಕೊಂಡರೆಂದು ತೋರುತ್ತದೆ.

ಪ್ರಸ್ತುತ ಈ ದಶಕದಲ್ಲಿ ಅವರ ಆರು ವ್ಯಂಗ್ಯ ಚಿತ್ರಗಳನ್ನು ಅಧ್ಯಯನಕ್ಕೆ ಪರಿಗಣಿಸಲಾಗಿದೆ. ಇಲ್ಲಿರುವ ಸ್ತ್ರೀ ಎಂಬ ಚಿತ್ರದಲ್ಲಿ ಆಧುನಿಕ ವೇಷಭೂಷಣದಲ್ಲಿರುವ ಮಹಿಳೆಯನ್ನು ಚಿತ್ರಿಸಲಾಗಿದೆ. ಚೂಪಾದ ಮೂಗು, ಹೊಳಪಿನ ಕಣ್ಣುಗಳು, ದೊಡ್ಡಮುಖ, ಗಿಡ್ಡದೇಹ, ಹಾರಾಡುತ್ತಿರುವ ಕೂದಲುಗಳು ಅಗಲವಾಗಿ ತೆರೆದುಕೊಂಡಿರುವ ಬಾಯಿ, ಹೊರಚಾಚಿರುವ ಹಲ್ಲುಗಳು, ಇವೆಲ್ಲವು ನೋಡುಗರಲ್ಲಿ ನಗೆಯನ್ನು ಉಕ್ಕಿಸುತ್ತವೆ. ದಂಪತಿಗಳು ಎಂಬ ಇನ್ನೊಂದು ಚಿತ್ರದಲ್ಲಿ ಸ್ಥೂಲದೇಹ, ಚಿಕ್ಕಮುಖಗಳನ್ನು ಹೊಂದಿದ ಸ್ತ್ರೀ ಮತ್ತು ಪುರುಷರನ್ನು ಚಿತ್ರಿಸಲಾಗಿದೆ. ಅಜ್ಜ ಮತ್ತು ಮೊಮ್ಮಗ ಎಂಬ ಕೃತಿಯು ಹೆಚ್ಚು ನಗೆಯನ್ನು ಉಂಟು ಮಾಡುವ ಕೃತಿಯಾಗಿದೆ.

ಅಜ್ಜನ ಬೊಚ್ಚುಬಾಯಿ, ಕೂದಲಲ್ಲಿದ ತಲೆ, ಮುದುಡಿದ ದೇಹ, ಬಾಗಿದ ಸೊಂಟ, ಕೈಯಲ್ಲಿರುವ ಕೋಲು ಪ್ರಮುಖವಾಗಿದ್ದರೆ, ಮೊಮ್ಮಗನ ಚಿತ್ರದಲ್ಲಿ ಚೀಲ, ಆತನ ಅಂಗಿ, ಚಡ್ಡಿಗಳು, ಜೋರಾಗಿ ಕೂಗುತ್ತಿರುವ ಬಾಯಿ, ಅಗಲಿಸಿದ ಕೈಕಾಲುಗಳ ನೋಡುಗರನ್ನು ಹಾಸ್ಯದ ಕಡಲಿಗೆ ನೂಕುತ್ತವೆ. ಇದರಂತೆ ಪ್ರೇಮಿಗಳು, ಅಲಂಕಾರದಲ್ಲಿ ತೊಡಗಿರುವ ಮಹಿಳೆ, ಚಿತ್ರಗಳು ಸಹಿತ ವ್ಯಂಗ್ಯ ಚಿತ್ರಗಳಾಗಿವೆ. ಪ್ರೇಮಿಗಳು ಚಿತ್ರದಲ್ಲಿ ಒಬ್ಬ ಪುರುಷ ಮತ್ತು ಒಬ್ಬ ಮಹಿಳೆ ದೈಹಿಕವಾಗಿ ಅತೀರೇಖಿತ ಲಕ್ಷಣಗಳಿಂದ ಚಿತ್ರಿತರಾಗಿದ್ದಾರೆ.

ನಗರದ ಭೂದೃಶ್ಯ ಕೃತಿಯಲ್ಲಿ ಅಮೂರ್ತ ವಿನ್ಯಾಸದಲ್ಲಿ ಪಟ್ಟಣದ ವಾತಾವರಣವನ್ನು ರಚಿಸಲಾಗಿದೆ. ಬೃಹತ್ತಾದ ಮಹಡಿ ಮನೆಗಳು, ಕಾರ್ಖಾನೆಗಳು, ಹೀಗೆ ಎಲ್ಲ ದೃಶ್ಯವನ್ನು ಚಪ್ಪಟೆ ವಿನ್ಯಾಸದಲ್ಲಿ ಬಣ್ಣ ಲೇಪಿಸುವ ಮೂಲಕ ಪೂರೈಸಲಾಗಿದೆ. ನಗರದ ಪಕ್ಷಿನೋಟವನ್ನು ಇಲ್ಲಿ ಪ್ರತಿಬಿಂಬಿಸಲು ಪ್ರಯತ್ನಿಸಲಾಗಿದೆ. ಇದರಂತೆ ಎರಡು ನಿಸರ್ಗ ಚಿತ್ರಗಳನ್ನು ತೈಲವರ್ಣದಿಂದ ರಚನೆ ಮಾಡಲಾಗಿದ್ದು  ಅಲ್ಲಿಯೂ ಅಮೂರ್ತ ಶೈಲಿಯಲ್ಲಿ ನಗರದ ದೃಶ್ಯಗಳನ್ನು ಸೆರೆಹಿಡಯಲಾಗಿದೆ. ಇವುಗಳನ್ನು ಗಮನಿಸಿದರೆ ಪಾಟೀಲರು ಪಾಶ್ಚಾತ್ಯ ಅಮೂರ್ತಶೈಲಿಯಿಂದ ಸಂಪೂರ್ಣ ಪ್ರಭಾವಿತರಾಗಿದ್ದಂತೆ ತೋರುತ್ತದೆ. ಈ ದಶಕದಲ್ಲಿ ಸ್ತ್ರೀ ಪರವಾದ ವಾದಗಳಿಗೆ ಸಮಾಜದಲ್ಲಿ ಹೆಚ್ಚಿನ ಮಹತ್ವ ಬಂದಿರುವುದು ಸಾಹಿತ್ಯದಲ್ಲಿ ಮತ್ತು ಸಾಮಾಜಿಕ ರಂಗದಲ್ಲಿ ಗೋಚರಿಸುತ್ತದೆ. ಅದೇ ಪ್ರಭಾವದಿಂದ ಪಾಟೀಲರು ಕೆಲವು ಕೃತಿಗಳನ್ನು ರಚಿಸಿದ್ದಾರೆ. ಸ್ತ್ರೀ ವಾದದ ಪ್ರತಿಬಿಂಬ ಇಲ್ಲಿನ ಕೆಲವು ಕೃತಿಗಳಲ್ಲಿ ಕಂಡು ಬರುತ್ತದೆ. ಪುರುಷ ದಬ್ಬಾಳಿಕೆ, ಸಮಾನತೆ, ಸ್ವಾತಂತ್ರ್ಯಕ್ಕಾಗಿ ಬಯಸುವ ಆಕೆಯ ಮನಸ್ಸು ಹೇಗೆ ತುಮುಲಗಳಿಗೆ ಒಳಗಾಗಿರುತ್ತಾದೆ ಎಂಬುದನ್ನು ಪರಿಣಾಮಕಾರಿಯಾಗಿ ಚಿತ್ರಿಸಿದ್ದಾರೆ.



ಮಳೆರಾಯನ ಪ್ರಾರ್ಥನೆ, 1992, 24x30



ಅರಕೆ, 1992, 24x30





ಶೀರ್ಷಿಕೆ ರಹಿತ, 1992, 12x30



ದೇವಿ ಪೂಜೆ, 1992, 24x30



ಸಂಭ್ರಮ, 1993, 24X30



ಸ್ತ್ರೀ ಮತ್ತು ಕೋಳಿ, 1993, 24X30





ದೇವರಾಜ ಅರಸು ಭಾವಚಿತ್ರ, 1994, 24X30



ಸ್ತ್ರೀ, 1994, 24X24





ಹುಡುಗಿಯ ತೈಲವರ್ಣ ಭಾವಚಿತ್ರ, 1994, 24x24



ವ್ಯಂಗ್ಯಚಿತ್ರಗಳು, 1994, 12x12





ವ್ಯಕ್ತಿಚಿತ್ರ, 1996, 12X18



ಸ್ತ್ರೀ, 1996, 12X18





ವ್ಯಂಗ್ಯಚಿತ್ರ, 1996, 12X18



ಅಜ್ಜ ಮೊಮ್ಮಗ ವ್ಯಂಗ್ಯಚಿತ್ರ, 1996, 12X18





ವರ್ಣಚಿತ್ರ ಕಥೆ, 1996, 18X24



ರೇಖಾಚಿತ್ರ ಯೋಚನಾ ಮಗ್ನ ಮಹಿಳೆ, 1996, 12X18





ವ್ಯಕ್ತಿ ತೈಲಚಿತ್ರ, 1997, 12X18



ಮಹಿಳಾ ಭಾವಚಿತ್ರ, 1998, 12X18



ಉಳಿದಂತೆ ಈ ದಶಕದ ಕೃತಿಗಳಲ್ಲಿ ಬಾಲಕಿಯ ಭಾವಚಿತ್ರ, ದೇವರಾಜ ಅರಸ್ ಅವರ ಭಾವಚಿತ್ರ, ಬಾಲಕನ ಭಾವಚಿತ್ರ ಕೃತಿಗಳು ಗಮನಾರ್ಹವಾಗಿವೆ. ಈ ದಶಕದ ಕಲಾಕೃತಿಗಳಲ್ಲಿ ಎಲ್ಲ ವಿಭಾಗಗಳಲ್ಲಿಯೂ ಅವರು ಪ್ರಭುದ್ಧತೆಯನ್ನು ಮೆರೆದಿದ್ದಾರೆ. ರಚನಾಶೈಲಿ, ರೇಖಾವಿನ್ಯಾಸ, ವರ್ಣಗಾರಿಕೆ, ಮೈವಳಿಕೆ, ಸಂಯೋಜನಾ ರೀತಿ, ಅಭಿವ್ಯಕ್ತಿ ಪಡಿಸುವ ಶೈಲಿ, ವಿಷಯುಗಳನ್ನು ನಿರೂಪಿಸುವ ವಿಧಾನ, ಆಕಾರಗಳನ್ನು ಸರಳೀಕರಿಸಿ ಚಿತ್ರಿಸುವ ಪರಿ, ಸಾಮಾಜಿಕವಾಗಿ ಸಂದೇಶಕೊಡುವ ಸಾಂಕೇತಿಕ ರೀತಿ ಇವೆಲ್ಲವುಗಳಲ್ಲಿ ಅವರು ತಮ್ಮದೇ ಆದ ವಿಶಿಷ್ಟ ಶೈಲಿಯನ್ನು ಗುರುತಿಸಿಕೊಂಡಿರುವುದು ಇಲ್ಲಿ ಕಂಡು ಬರುತ್ತದೆ.

**೦೫. ಎರಡು ಸಾವಿರದಿಂದ ಎರಡು ಸಾವಿರದಾ ಹತ್ತರ ದಶಕದ ಕಲಾಕೃತಿಗಳು :**

ಈ ದಶಕದಲ್ಲಿ ಪಾಟೀಲರು ೨೦೦೧ ರಿಂದ ೨೦೦೮ ರ ವರೆಗೆ ರಚಿಸಿದ ಕಲಾಕೃತಿಗಳನ್ನು ಅಧ್ಯಯನಕ್ಕೆ ಪರಿಗಣಿಸಲಾಗಿದೆ. ನಿಸರ್ಗ ಚಿತ್ರ, ಮ್ಯೂರಲ್ ಕಲಾಕೃತಿ, ತಂತ್ರ, ವೀಣೆ ನುಡಿಸುತ್ತಿರುವ ಮಹಿಳೆ, ಗ್ರಾಮೀಣ ಮಹಿಳೆಯರು, ಪತಿ-ಪತ್ನಿ ಹೀಗೆ ಸುಮಾರು ನಲವತ್ತೇರಡು ಕಲಾಕೃತಿಗಳನ್ನು ವಿಶ್ಲೇಷಣೆಗೆ ಒಳಪಡಿಸಲಾಗಿದೆ. ಅದರ ಸಂಕ್ಷಿಪ್ತ ಮಾಹಿತಿ ಕೆಳಗಿನಂತಿದೆ.

**ನಿಸರ್ಗ ಚಿತ್ರ : ೨೦೦೧**

ಯಥಾದರ್ಶನದ ಸಾಮ್ಯ ಅನುಭವವನ್ನು ನೀಡುವಂತ ಅನೇಕ ಜಲವರ್ಣ ಚಿತ್ರಗಳು ತ್ರಿಮಾನ ಸೃಜನಶೀಲ ನಿಸರ್ಗ ಚಿತ್ರಗಳನ್ನು ಕಲ್ಪನೆಯ ಆಧಾರದಲ್ಲಿ ಚಿತ್ರಿಸುವಲ್ಲಿ ಪಾಟೀಲರು ಕಲ್ಪನೆಯನ್ನು ಪ್ರಕಟಿಸುವ ರೀತಿ ಕುತೂಹಲಕಾರಿಯಾದುದು. ಇಷ್ಟೆ ಅಲ್ಲದೆ ಈ ಭೂ ದೃಶ್ಯಗಳಲ್ಲಿ ವಿಶಿಷ್ಟವಾಗಿ ನಿಲ್ಲುವಂತೆ ಅಂತಹ ಒಂದು ಕೃತಿ ಇದಾಗಿದೆ. ಇಲ್ಲಿ ಜಲವರ್ಣದಿಂದ ದೇವಾಲಯ, ಬೆಟ್ಟ, ಗುಡ್ಡಗಳ ಮಧ್ಯೆ ಬಂಡೆಗಳು ತುಂಬಿರುವಂತೆ ನಿಸರ್ಗ ಚಿತ್ರ ರಚಿಸಲಾಗಿದೆ. ಕೇವಲ ವರ್ಣಗಳ ವ್ಯೆವಳಿಕೆಯಿಂದಲೇ ಪರ್ವತಗಳು ಹಿಂದೆ ಮುಂದೆ ಕಾಣುವಂತೆ ಸಂಯೋಜಿಸಲಾಗಿದೆ. ಕುಂಚದ ವೇಗವಾದ ದೊಡ್ಡ ಎಳೆತಗಳು ಅನುಭವದ ಆಳವನ್ನು ಒರೆಗೆ ಹಚ್ಚಿದಂತಿವೆ. ಮೊದಲು ತಿಳಿವರ್ಣಗಳ ಲೇಪನ ಮಾಡಿಕೊಂಡು ನಂತರ ಅದರ ಮೇಲೆ ದಟ್ಟ ವರ್ಣಗಳನ್ನು ಲೇಪಿಸಿರುವುದು. ಚಿತ್ರಕ್ಕೆ ಇನ್ನಷ್ಟು ಮೆರಗನ್ನು ನೀಡಿದೆ. ಪ್ರಥಮ ಹಾಗೂ ದ್ವಿತಿಯ ವರ್ಣಗಳು ಸಂಯೋಜನೆಗೊಂಡು ತೃತೀಯ ವರ್ಣಗಳು ತಮ್ಮ ಹೊಳಪಿನಿಂದ ವಿಶಿಷ್ಟವಾಗಿ ರೂಪುಗೊಳ್ಳುವ ಮೂಲಕ ಕಲಾಕೃತಿಗೆ ಅಂದ ಮತ್ತು ಜೀವಂತಿಕೆಯನ್ನು ತಂದಿವೆ.

**ನಿಸರ್ಗ ಚಿತ್ರ : ೨೦೦೧**

ಇಲ್ಲಿ ಕಾಲ್ಪನಿಕವಾದ ಮತ್ತೊಂದು ನಿಸರ್ಗಚಿತ್ರವಿದೆ. ಇಲ್ಲಿ ಮುಂಜಾನೆಯ ನಸುಕಿನ ವೇಳೆಯಲ್ಲಿ ಇಬ್ಬನಿಯು ಹಸಿರು ಗಿಡದ ಮೇಲೆಲ್ಲ ಹಬ್ಬಿ ಇಡೀ ಪ್ರಕೃತಿಯನ್ನೇ ಚೇತೋಹಾರಿಯಾಗಿ ಮಾಡಿದಂತೆ ಚಿತ್ರಿಸಲಾಗಿದೆ. ಸೂರ್ಯೋದಯಕ್ಕಿಂತ ಮುಂಚೆ ಪ್ರಫುಲವಾದ ವಾತಾವರಣದಲ್ಲಿ ಮಂಜು ಆವರಿಸಿ ಹವಾಮಾನವು ತಂಪಾದ ಅನುಭವವನ್ನು ತರುವುದಲ್ಲದೆ ಚೈತನ್ಯದ ಸ್ಫೂರ್ತಿಯನ್ನು ಒದಗಿಸುತ್ತದೆ. ಅಂತಹ ವರ್ಣ ಸಂಯೋಜನೆಯನ್ನು ಇಲ್ಲಿ ಸೃಷ್ಠಿಸಲಾಗಿದೆ. ಹಸಿರು ಹುಲ್ಲುಗಾವಲು ಗಿಡ ಮರಗಳು ಎಲ್ಲವೂ ಪರಿಣಾಮಕಾರಿಯಾಗಿ ಮೂಡಿಬಂದಿವೆ. ಮಂಜು ಮುಸುಕಿದಂತಿರುವ ಚಿತ್ರವು ನೋಡುಗರಿಗೆ ಆನಂದದ ಉಲ್ಲಾಸವನ್ನು ತರುವಂತಿದೆ. ಆಕಾಶ ಭೂಮಿಗಳು ಒಂದಾದ ಹಾಗೆ ಕಾಣುವಂತೆ ವರ್ಣಗಳು ಪರಸ್ಪರ ಬೆರೆತುಕೊಂಡಿವೆ.

**ನಿಸರ್ಗ ಚಿತ್ರ : ೨೦೦೧**

ಮುಸ್ಸಂಜೆಯಲ್ಲಿ ಕತ್ತಲು ಅವರಿಸುತ್ತಿರುವಂತೆ ಎಲ್ಲಾ ವರ್ಣಗಳು ತಮ್ಮ ಕಾಂತಿಯನ್ನು ಕಳೆದುಕೊಳ್ಳುತ್ತವೆ. ಅಲ್ಲದೆ ಬೆಳಕಿನ ಪರಿಣಾಮವು ಕಡಿಮೆಯಾಗುತ್ತದೆ. ವರ್ಣಗಳೆಲ್ಲವೂ ಕಂದು ಕಪ್ಪು ದಟ್ಟವಾಗುತ್ತ ಕತ್ತಲ್ಲಲ್ಲಿ ಲೀನವಾಗುತ್ತವೆ. ಅಂತಹ ಸುಂದರ ಮುಸ್ಸಂಜೆಯ ನಿಸರ್ಗ ಚಿತ್ರ ಇದಾಗಿದೆ. ಈ ಕಲಾಕೃತಿಯು ಅತ್ಯಂತ ಕ್ಷಿಪ್ರಗತಿಯಲ್ಲಿ ರಚಿಸಲ್ಪಟ್ಟಿದೆ. ಇಡೀ ಸೃಷ್ಠಿಯು ಮುಸುಕಾಗಿ ಕಂಡು ಬರುತ್ತಲಿದೆ. ಸುತ್ತಲಿನ ಪರಿಸರದಲ್ಲಿರುವ ಬೆಟ್ಟಗುಡ್ಡ, ನೀರು, ಹಸಿರು ಹುಲ್ಲುಗಾವಲು ಎಲ್ಲವೂ ತಮ್ಮ ಕಾಂತಿಯನ್ನು ಕಳೆದುಕೊಂಡಂತೆ ಭಾಸವಾಗುತ್ತದೆ. ಎಲ್ಲಿಯೂ ಸ್ಪಷ್ಟವಾಗಿರುವ ಆಕಾರಗಳು ಕಂಡು ಬರದಿದ್ದರೂ ಚಿತ್ರದ ಒಟ್ಟಾರೆ ನೋಟವು ಮುಸ್ಸಂಜೆಯ ಅನುಭವಕೊಡುತ್ತದೆ.

**ನಿಸರ್ಗ ಚಿತ್ರ : ೨೦೦೧**

ಹಳ್ಳಿ ಪರಿಸರ ಬಿಂಬಿಸುವ ನಿಸರ್ಗ ಚಿತ್ರ ಇದಾಗಿದೆ. ಹಳ್ಳಿಯ ಮನೆಗಳು, ಗುಡಿಸಲುಗಳು, ಗಿಡಮರಗಳು, ಬೆಟ್ಟಗುಡ್ಡಗಳು, ಇಲ್ಲಿ ವರ್ಣಗಳ ಮೈವಳಿಕೆಯಿಂದ ರಚನೆಗೊಂಡಿವೆ. ಇಲ್ಲಿನ ಪ್ರಕೃತಿಯು ತಂಪಾದ ವಾಯು ಮಂಡಲದ ಅನುಭವವನ್ನು ಕೊಡುವಂತೆ ರೂಪಿತವಾಗಿದೆ. ಹಳ್ಳಿಯ ಗುಡಿಸಲುಗಳ ಸುತ್ತಲು ಗಿಡಮರಗಳು, ಹಸಿರನ್ನು ಹೊತ್ತು ನಿಂತ ವನರಾಶಿ ಇದಕ್ಕೆ ಪೂರಕವಾಗಿರುವಂತೆ ವರ್ಣ ಸಂಯೋಜನೆಗೊಂಡಿದೆ. ಈ ಚಿತ್ರವು ಅಮೂರ್ತ ಶೈಲಿಯಲ್ಲಿ ರಚನೆಯಾಗಿದ್ದು, ವರ್ಣದ ಹರಿಯುವ ವಿಧಾನದಿಂದ ಚಿತ್ರಿಸಲಾಗಿದೆ. ಅಲ್ಲಲ್ಲಿ ದಪ್ಪನಾದ ವರ್ಣ ಲೇಪನವು ಸುಂದರ, ಮೈವಳಿಕೆ ಉಂಟು ಮಾಡಿದೆ.

**ನಿಸರ್ಗ ಚಿತ್ರ : ೨೦೦೧**

ಕಾಲ್ಪನಿಕವಾದ ಈ ಚಿತ್ರದಲ್ಲಿ ನಿಸರ್ಗವನ್ನು ಭಾವನಾತ್ಮಕವಾಗಿ ಒಡಮೂಡಿಸಲಾಗಿದೆ. ಈ ಕಲಾಕೃತಿಯಲ್ಲಿನ ಹರಿಯುವ ಜುಳು ಜುಳು ನೀರು, ಸುತ್ತಲಿನ ಹಸಿರಾದ ಪರಿಸರ, ಬೆಟ್ಟ ಗುಡ್ಡಗಳ, ಪರ್ವತ ಪ್ರದೇಶ ಎಲ್ಲವು ರಮ್ಯತೆಯ ನಿಲುವಿಗೆ, ಕರೆದೊಯ್ಯುತ್ತವೆ. ಜಲವರ್ಣದ ಪ್ರಯೋಗದ ಹಿನ್ನೆಲೆಯಲ್ಲಿ ಈ ಕೃತಿ ರಚನೆಗೊಂಡಿದೆ. ಅತ್ಯಂತ ವೇಗವಾಗಿ ಚಲಿಸಿದ ಕುಂಚದ ಎಳೆತಗಳು ಚಿತ್ತದಲ್ಲಿ ಚಲನೆಯನ್ನು ಉಂಟು ಮಾಡಿವೆ. ಸುಂದರವಾಗಿರುವ ನದಿಯ ದಡವನ್ನು ಚೇತೋಹಾರಿಯಾಗಿ ರೂಪಿಸಲಾಗಿದೆ. ಬಳಸಿರುವ ವರ್ಣಗಳು ಪ್ರಥಮ ವರ್ಗದ ವರ್ಣ ಗಳಾಗಿದ್ದು ಅವುಗಳ ಮಿಶ್ರಣದಿಂದ ವೈವಿಧ್ಯತೆ ಉಂಟಾಗಿದೆ ಕೆಲವು ಕಡೆಗೆ ಬಿಳಿ ಹಾಳೆಯನ್ನು ಹಾಗೇ ಬಿಟ್ಟು ಬೆಳಕಿನ ಪ್ರಖರತೆಯನ್ನು ಆಕೃತಿಗೆ ತಂದುಕೊಡಲಾಗಿದೆ.

**ನಿಸರ್ಗ ಚಿತ್ರ : ೨೦೦೧**

ಹಳ್ಳಿಯ ಸುತ್ತಲು ಹಳ್ಳಕೊಳ್ಳಗಳಿರುವುದು ಸರ್ವೆಸಾಮಾನ್ಯ ಈ ಚಿತ್ರದಲ್ಲಿ ಊರ ಹೊರ ವಲಯದ ಹಳ್ಳದ ದಂಡೆಗೆ ಸುಂದರವಾದ ಹುಲ್ಲುಗಾವಲು ಸುತ್ತಲು ಗಿಡ ಮರಗಳು ಬೆಟ್ಟ ಗುಡ್ಡಗಳು ಹೀಗೆ ಪರಿಣಾಮಕಾರಿಯಾದ ನಿಸರ್ಗವನ್ನು ರಚಿಸಲಾಗಿದೆ. ಯಥಾದರ್ಶನ ನಿಯಮಕ್ಕೆ ಅನುಸಾರವಾಗಿರುವಂತೆ ವರ್ಣಲೇಪನ ಮಾಡಲಾಗಿದೆ. ಸೂರ್ಯೋದಯದ ನೆನಪನ್ನು ತರುವ ಈ ಚಿತ್ರದಲ್ಲಿ ಗಿಡ ಮರಗಳ ಕೆಳಗೆ ಅದರ ಛಾಯೆಯನ್ನು ಸಹ ಮೂಡಿಸಲಾಗಿದೆ.

**ನಿಸರ್ಗ ಚಿತ್ರ ಮಳೆಗಾಲ : ೨೦೦೧**

ಮಳೆಗಾಲ ಎಂದಾಕ್ಷಣ ನೆನಪಾಗುವುದು ಗುಡುಗು, ಸಿಡಿಲು, ಮಿಂಚಿನ ಅಬ್ಬರ. ಎಲ್ಲಿ ನೋಡಿದರು ಹಚ್ಚ ಹಸಿರು ಹುಲ್ಲುಗಾವಲು ದಟ್ಟವಾಗಿ ಮೇಳೈಸಿದ ಕಾರ್ಮೋಡಗಳು, ತಗ್ಗು ಪ್ರದೇಶದಲ್ಲೆಲ್ಲ ಪ್ರವಾಹದಿಂದ ತುಂಬಿಕೊಂಡಿರುವ ನೀರು, ಹಳ್ಳ, ನದಿ ಪ್ರದೇಶದಲ್ಲಿ ಹರಿಯುವ ನೀರು. ಹೀಗೆ ಅನೇಕ ಸಂಗತಿಗಳು ಒಳಗೊಂಡಿವೆ. ಈ ಚಿತ್ರದಲ್ಲಿ ಈ ಮೇಲೆ ಹೇಳಲಾದ ಪರಿಣಾಮಗಳನ್ನು ಬಿಂಬಿಸುವ ಪ್ರಯತ್ನುವಿದೆ. ಈ ಚಿತ್ರಕ್ಕೆ "ಮಳೆಗಾಲ" ಎಂಬ ಶೀರ್ಷಿಕೆಯನ್ನು ಕೊಟ್ಟಿರುವುದು ಇದರಿಂದಾಗಿಯೆ ಎನ್ನಬಹುದು. ಸಮುದ್ರದ ತೀರದಲ್ಲಿ ದೋಣಿಯಲ್ಲಿ ಪ್ರಯಾಣಿಸುತ್ತಿರುವ ವ್ಯಕ್ತಿಗಳನ್ನು ಅಸ್ಪಷ್ಟವಾಗಿರುವ ವರ್ಣಗಳಿಂದ ಚಿತ್ರಿಸಲಾಗಿದೆ. ಆಕಾಶ ಭೂಮಿಯು ಒಂದಾಗಿರುವಂತೆ ವರ್ಣಸಂಯೋಜನೆ ಮಾಡಲಾಗಿದೆ. ಕುಂಚದ ಬೀಸುಗಳು ಕ್ಷಿಪ್ರಗತಿಯಲ್ಲಿ ಚಲಿಸಿದಂತೆ ಕಂಡುಬರುತ್ತವೆ. ಮಳೆಗಾಲದ ಭೀಕರತೆ ಇಲ್ಲಿ ಉಂಟಾಗುತ್ತದೆ.

**ವ್ಯಕ್ತಿಚಿತ್ರ : ೨೦೦೧**

ಹಳ್ಳಿಯ ವ್ಯಕ್ತಿಯೊಬ್ಬನ ಚಿತ್ರವನ್ನು ತೈಲವರ್ಣದಲ್ಲಿ ರಚಿಸಿರುವ ಕಲಾಕೃತಿ ಇದಾಗಿದೆ. ಈ ಚಿತ್ರದ ರೂಪದರ್ಶಿಯ ಒಬ್ಬ ಹಳ್ಳಿಯ ಸಾಮಾನ್ಯ ವಯೋವೃದ್ಧನಾಗಿದ್ದಾನೆ. ಆತನ ರೂಪಕ್ಕೆ ತಕ್ಕಂತೆ ವೇಷಭೂಷಣಗಳ ಸಹಿತ ಭಾವನಾತ್ಮಕವಾಗಿ ಚಿತ್ರಿಸಲಾಗಿದೆ. ವೃದ್ಧಾಪ್ಯದಿಂದ ಕೂಡಿದ ಮುಖದ ನೆರಿಗೆಗಳು ಸ್ಪಷ್ಟವಾಗಿ ಕಂಡುಬರುತ್ತವೆ. ಅಲ್ಲದೆ ಬಿಳಿಯಾದ ಕುರುಚಲು ಗಡ್ಡವು ವ್ಯಕ್ತಿಗೆ ಇನ್ನಷ್ಟು ಮೆರಗು ತಂದಿದೆ. ಬಳಸಿರುವ ಕಂದು ಕೆಂಪು ಹಳದಿ ಬಿಳಿ ಮತ್ತು ಹಸಿರು ವರ್ಣಗಳು ಪರಸ್ಪರ ಸಂಯೋಜನೆಗೊಂಡು ವರ್ಣಸಾಮರಸ್ಯವನ್ನು ಉಂಟು ಮಾಡಿವೆ. ಸೌಮ್ಯವರ್ಣದಿಂದ ಪ್ರಖರ ವರ್ಣದೆಡೆಗೆ ಸಾಗಿದ ಕಲಾವಿದರ ರಚನಾ ಕೌಶಲ್ಯವು ಅತ್ಯಂತ ಮನೋಜ್ಞವಾಗಿ ಮೂಡಿಬಂದಿದೆ.

**ಮ್ಯೂರಲ್ ಕಲಾಕೃತಿಗಳು : ೨೦೦೧**

ಮ್ಯೂರಲ್ ಕಲಾಕೃತಿಗಳನ್ನು ವಿಭಿನ್ನ ಮಾಧ್ಯಮಗಳಿಂದ ರಚಿಸಲಾಗುತ್ತದೆ. ಚಿತ್ರಕಲಾಕೃತಿಗಳಿಗಿಂತ ಬೇರೆಯಾಗಿ ನಿಲ್ಲುವ ಈ ಕೃತಿಗಳನ್ನು ಚಿತ್ರ ಮತ್ತು ಶಿಲ್ಪ ಎರಡೂ ಮಾಧ್ಯಮದಲ್ಲಿ ರಿಗಣಿಸಿಬಹುದಾಗಿದೆ. ಪಾಟೀಲರು ೨೦೦೧ ರಲ್ಲಿ ಹಲವಾರು ಮ್ಯೂರಲ್ ಕಲಾಕೃತಿಗಳನ್ನು ರಚಿಸಿದ್ದಾರೆ. ಕೆಲವು ವರ್ಣಗಳಿಂದ ರಚಿಸಿದ್ದಾರೆ. ಮತ್ತೆ ಕೆಲವು ಉಬ್ಬು ಶಿಲ್ಪ ಮಾದರಿಯಲ್ಲಿ ರಚನೆಗೊಂಡಿವೆ. ಅಂತಹುಗಳಲ್ಲಿ ಕೆಲವು ಕೃತಿಗಳನ್ನು ಕೆಳಗಿನಂತೆ ವಿವೇಚಿಸಲಾಗಿದೆ.

**ಸೂರ್ಯನ ಹಿಂದೆ : ೨೦೦೧**

ಈ ಮ್ಯೂರಲ್ ಕಲಾಕೃತಿ ವರ್ಣಮಾಧ್ಯಮದ ಕಲಾಕೃತಿಗಳಿಗಿಂತ ತೀರ ಕಷ್ಟದ ರಚನಾ ವಿಧಾನವನ್ನು ಹೊಂದಿದೆ. ಇಲ್ಲಿ ಪಾಟೀಲರು ಸೂರ್ಯನ ಹಿಂದೆ ಎಂಬ ಶಿರ್ಷಿಕೆಯನ್ನು ಪ್ರಸ್ತುತ ಮ್ಯೂರಲ್ ಕೃತಿಗೆ ಕೊಟ್ಟಿದ್ದಾರೆ. ಮೊದಲು ಥರ್ಮಾಕೋಲ್‌ನ ಮೇಲೆ ರೇಖಾವಿನ್ಯಾಸದಿಂದ ಚಿತ್ರರಚಿಸಿ ನಂತರ ಅದನ್ನು ಕಟ್ ಮಾಡಿ ಇನ್ನೊಂದು ಥರ್ಮಾಕೋಲ್‌ಗೆ ಅಂಟಿಸಿ ಇದರ ಮೇಲೆ ಕಬ್ಬಿಣದ ರಾಡಗಳನ್ನು ಹಾಕಿ ನಂತರ ಸಿಮೆಂಟಿನ ಲೇಪನಮಾಡಿದ್ದಾರೆ. ಸಿಮೆಂಟ ಅರಿದ ನಂತರ ಸೂಕ್ಷ್ಮವಾಗಿ ತೆಗದಾಗ ಇದರ ಅಚ್ಚು ಮೂಡುತ್ತದೆ. ಆಗ ನಿಜವಾದ ವಿನ್ಯಾಸ ದ್ವಿಪ್ರತಿ ಬರುತ್ತದೆ. ಹೀಗೆ ವಿನ್ಯಾಸವು ಮೂಡುತ್ತದೆ.

ಇದೇ ವಿಧಾನದಲ್ಲಿ ರಚಿಸಿದ ಈ ಮ್ಯೂರಲ್ ಕಲಾಕೃತಿಯಲ್ಲಿ ಜ್ಯಾಮಿತಿ ಆಕೃತಿಯಲ್ಲಿ ವ್ಯಕ್ತಿಯೊರ್ವನು ಸೂರ್ಯನ ಹಿಂದೆ ಬಂದಂತೆ ರಚಿಸಲಾಗಿದೆ. ಸೃಜನಶೀಲ ಮೈವಳಿಕೆಗಳಿರುವ ಕಲಾಕೃತಿಯಲ್ಲಿ ವ್ಯಕ್ತಿಯ ಕೆಳಗಡೆ ಒಂದು ಪ್ರಾಣಿಯು ಕೆಳಮುಖವಾಗಿರುವಂತೆ ಕಂಡು ಬರುತ್ತದೆ. ಇದು ಸಾಂಕೇತಿಕವಾದ ಅರ್ಥವಂತಿಕೆಯಿಂದ ಕೂಡಿದ್ದು ಹೊಸ ಬಗೆಯ

ಅರ್ಥಸಾಧ್ಯತೆಗಳನ್ನು ನೋಡುಗರಿಗೆ ಕೊಡುತ್ತದೆ. ಹಿಂಬದಿಯ ಸೂರ್ಯನನ್ನು ತುಂಬಾ ಸ್ಪಷ್ಟವಾಗಿ ವಿನ್ಯಾಸಗೊಳಿಸಲಾಗಿದೆ. ಚಿತ್ರವು ಅಸ್ಪಷ್ಟವಾಗಿ ಕಂಡರೂ ಭಾವಸ್ಫೂರ್ತಿಗೆ ಹೊಸತನದ ಮೆರಗನ್ನು ಕೊಡಲಾಗಿದೆ.

**ತಂತ್ರ : ೨೦೦೧**

ಪಾಟೀಲರು ರಚಿಸಿದ ಮತ್ತೊಂದು ಮ್ಯೂರಲ್ ಕೃತಿಯಾಗಿದೆ. ಇಲ್ಲಿ ಕಲಾವಿದರ ಆಶಯವು ಕಲಾಕೃತಿಯ ಶಿರ್ಷಿಕೆಗಿಂತ ವಿಭಿನ್ನವಾಗಿದೆ. ಇಡೀ ಭೂಮಂಡಲದ ಗೋಲಾಕಾರದ ಕಲ್ಪನೆಯಂತೆ ಮೇಲ್ಭಾಗದಲ್ಲಿ ದೊಡ್ಡದಾದ ಸೂರ್ಯ, ಎಡ ಮತ್ತು ಬಲಬದಿಯಲ್ಲಿ ಅರ್ಧಚಂದ್ರಾಕೃತಿಯ ವಿನ್ಯಾಸ. ಗಳಿವೆ. ಕೆಳಗಿನ ಪಟ್ಟಿಕೆಯಲ್ಲಿ ಪಲ್ಲಂಗ, ಮಂಟಪದಂತೆ ಕಂಡು ಬರುವ ವಿಶೇಷ ವಿನ್ಯಾಸಗಳಿವೆ. ಮಧ್ಯದಲ್ಲಿ ಗಣೇಶನನ್ನು ಕಮಲದ ಮೇಲೆ ಕುಳಿತಂತೆ ಗಣೇಶನನ್ನು ಕಮಲದ ಮೇಲೆ ಕುಳಿತಂತೆ ರೂಪಿಸಲಾಗಿದೆ.

**ವೀಣೆ ನುಡಿಸುತ್ತಿರುವ ಮಹಿಳೆ : ೨೦೦೨**

ಈ ಮ್ಯೂರಲ್ ಕಲಾಕೃತಿಯಲ್ಲಿ ಮಹಿಳೆಯೊಬ್ಬಳು ವೀಣೆಯನ್ನು ನುಡಿಸುತ್ತಿರುವಂತೆ ರೂಪಿಸಲಾಗಿದೆ. ವೀಣೆಯನ್ನು ನುಡಿಸುತ್ತಿರುವ ಮಹಿಳೆಯು ಮಧ್ಯಭಾಗದಲ್ಲಿದ್ದು ಮೂರು ವಿಧದಲ್ಲಿ ಫಲಕಗಳು ವರ್ಗೀಕರಣಗೊಂಡಂತಿದೆ. ಈ ಭಿತ್ತಿಚಿತ್ರದಲ್ಲಿರುವ ಸ್ತ್ರೀಯ ರೂಪ ಸಂಪ್ರದಾಯಕ ಹಿನ್ನೆಲೆಯನ್ನು ಸಾರುವಂತಿದೆ. ಕುಳಿತಿರುವ ಭಾವಭಂಗಿ ಸಂಗೀತದಲ್ಲಿ ಲೀನವಾಗಿರುವ ಸ್ತ್ರೀಯ ಭಾವಪರವಶ ನಿಲುವು ಪರಿಣಾಮಕಾರಿಯಾಗಿದೆ. ಸುಮಾರು ೨" x ೬" ಅಳತೆಯದಾಗಿದ್ದು ವಿ.ಜಿ. ಅಂದಾನಿಯವರ, ಮನೆಯಲ್ಲಿ ಇದನ್ನು ರಚಿಸಲಾಗಿದ್ದು ಮನೆಗೆ ಮೆರಗು ತಂದಂತಿದೆ.

**ಗ್ರಾಮೀಣ ಸ್ತ್ರೀಯರು : ೨೦೦೨**

ಗ್ರಾಮೀಣ ಪರಿಸರದ ಶುದ್ಧ ಸಾಂಪ್ರದಾಯಕ ನಿಲುವನ್ನು ಪ್ರತಿನಿಧಿಸುವ ಮ್ಯೂರಲ್ ಕಲಾಕೃತಿ ಇದಾಗಿದೆ. ಚಿತ್ರದಲ್ಲಿ ಸ್ತ್ರೀಯರು ಸಂಪ್ರದಾಯಕವಾದ ಉಡುಗೆ ತೊಡುಗೆಗಳು ಹಾಗೂ ವೇಶಭೂಷಣಗಳಿಂದ ಅಲಂಕೃತರಾಗಿದ್ದಾರೆ. ಆಕೃತಿಯು ಎರಡು ಪಟ್ಟಿಕೆಗಳಲ್ಲಿ ವಿಭಜನೆಗೊಂಡಂತೆ ಕಂಡರೂ ಒಂದೇ ಚಿತ್ರದ ಸರಣಿ ಇದಾಗಿದೆ. ಮೊದಲನೆಯ ಪಟ್ಟಿಕೆಯಲ್ಲಿ ಸ್ತ್ರೀಯರಿಬ್ಬರೂ ವಿರುದ್ಧ ದಿಕ್ಕಿನಲ್ಲಿ ಮುಖ ಮಾಡಿರುವಂತೆ ಕಂಡು ಬರುತ್ತದೆ. ಗ್ರಾಮೀಣ ಪರಿಸರದಲ್ಲಿ ಜನರು ಮುಂಜಾನೆ ದಿನನಿತ್ಯದ ಕೆಲಸ ಕಾರ್ಯದಲ್ಲಿ ಮಗ್ನರಾಗಿ ತೊಡಗಿಕೊಂಡಂತೆ ಸ್ತ್ರೀಯರ ಮುಖದಲ್ಲಿ ಮಂದಹಾಸ ಎದ್ದು ಕಾಣುತ್ತದೆ. ಸಾಂಪ್ರದಾಯಕ ವೇಷ ಭೂಷಣಗಳು ಹಾಗೂ ತಲೆಯ ಮೇಲೆ ಕೊಡವನ್ನು ಹೊತ್ತುಕೊಂಡಿರುವ ಸ್ತ್ರೀಯರ ಆಕಾರಗಳು ಸುಂದರವಾಗಿವೆ.

ಪಕ್ಕದ ಪಟ್ಟಿಕೆಯಲ್ಲಿ ಮುಂಜಾವಿನ ಸಂಕೇತಕ್ಕೆ ಸ್ಫೂರ್ತಿ ಎಂಬಂತೆ ಸ್ತ್ರೀಯ ಪಕ್ಕದಲ್ಲಿ ಕೋಳಿಯನ್ನು ಮತ್ತು ಸೂರ್ಯನನ್ನು ಚಿತ್ರಿಸಲಾಗಿದೆ. ಆಕೃತಿಯಲ್ಲಿ ಅನೇಕ ರೀತಿಯ ಸಾಂಪ್ರದಾಯಕ ಸಂಕೇತಗಳನ್ನು ಬಳಸಲಾಗಿದೆ. ಹಳ್ಳಿಯ ಪರಿಸರವು ಹಿತಕರವಾದ ಭಾವದೊಂದಿದೆ. ಸೌಮ್ಯ ಮನೋವೃತ್ತಿಯನ್ನು ನೀಡುತ್ತದೆ.

**ಪತಿ ಪತ್ನಿ : ೨೦೦೨**

ಈ ಚಿತ್ರವು ಡ್ರೈಪೇಸ್ಟಲ್ ಮಾಧ್ಯಮದಿಂದ ರಚನೆಯಾಗಿದ್ದು, ಪತಿ ಪತ್ನಿ ಇಬ್ಬರು ಜೋಡಿಯಾಗಿ ಕುಳಿತಿರುವ ಭಂಗಿಯಲ್ಲಿದೆ. ಮೊದಲು ಜಲವರ್ಣದ ತಿಳಿಯನ್ನು ಆಕೃತಿಗೆ ಲೇಪಿಸಿ ನಂತರ ಅದಕ್ಕೆ ಪೂರಕವಾದ ಡ್ರೈ ಪೇಸ್ಟಲ್‌ನಿಂದ ದಟ್ಟತೆಯನ್ನು ಕೊಡಲಾಗಿದೆ. ಕೆಂಪು ವರ್ಣದ ಮೈ ಬಣ್ಣವಿದ್ದು ಇಬ್ಬರ ಮುಖ ಚಹರೆಯು ವಿಭಿನ್ನವಾಗಿದೆ. ಇಬ್ಬರ ಉಡುಪುಗಳು ದಟ್ಟವರ್ಣದಿಂದ ಪ್ರಖರವಾಗಿ ಕಂಡು ಬರುತ್ತವೆ.

**ಮಹಿಳೆ : ೨೦೦೨**

ಜಲವರ್ಣದ ಮಾಧ್ಯಮದಲ್ಲಿ ರಚಿಸಿದ ಈ ಕಲಾಕೃತಿಯಲ್ಲಿ ಮಹಿಳೆಯನ್ನು ಚಿತ್ರಿಸಲಾಗಿದೆ. ಈ ಭಾವಚಿತ್ರವು ಕ್ಷಿಪ್ರವಾಗಿ ರಚಿಸಲ್ಪಟ್ಟಿದೆ. ವರ್ಣಗಳಿಂದಲೇ ನೆರಳು ಬೆಳಕಿನ ಪರಿಣಾಮವನ್ನ ತುಂಬಾ ಸ್ಪಷ್ಟವಾಗಿ ಚಿತ್ರಿಸಲಾಗಿದೆ. ಕುಂಚದ ಎಳೆತಗಳನ್ನು ಒಂದರ ಮೇಲೊಂದರಂತೆ ದಟ್ಟವಾಗಿ ಲೇಪಿಸಲಾಗಿದೆ. ಆಕೃತಿಯ ಮುಖವನ್ನು ಇನ್ನಷ್ಟು ಸುಂದರವಾಗಿ ಕಾಣುವಂತೆ ರಚಿಸಲಾಗಿದೆ. ಕೃತಿಯಲ್ಲಿ ನೆರಳಿನ ಭಾಗವು ಹೆಚ್ಚು ಪ್ರಮಾಣದಲ್ಲಿ ಆವರಿಸಿದ್ದನ್ನು ಇಲ್ಲಿ ಕಾಣುತ್ತೇವೆ. ಕೆಂಪು ವರ್ಣದ ಸ್ತ್ರೀಯ ರೂಪವು ಆಕರ್ಷಕವಾಗಿದೆ. ಧರಿಸಿರುವ ವಸ್ತ್ರವು ಹಳದಿ ವರ್ಣದಿಂದ ಕೂಡಿದೆ.

**ಶೀರ್ಷಿಕೆ ರಹಿತ : ೨೦೦೨**

ಅಮೂರ್ತ ವಿನ್ಯಾಸದ ಈ ಕಲಾಕೃತಿ ಶೀರ್ಷಿಕೆ ರಹಿತವಾಗಿದೆ. ಕಲಾವಿದನ ತುಡಿತಮಿಡಿತ ಅನುಭವಗಳನ್ನು ನೀಡುವುದರಲ್ಲಿ ಪರಿಣಾಮಕಾರಿಯಾಗಿದೆ. ಒಂದು ಮಾನಸಿಕ ಕ್ರಿಯೆಯ ಅಭಿವ್ಯಕ್ತಿಯಾಗಿ, ಕನಸಿನ ಸಾಕಾರವಾಗಿ, ಕಲಾವಿದನ ಸ್ಮೃತಿಪಟಲದಲ್ಲಿ ಮೂಡಿ ಬಂದ ಕಲ್ಪನೆಗಳೇ ಅಮೂರ್ತವಾಗಿ ಇಲ್ಲಿ ತೆರೆದುಕೊಂಡಿವೆ. ಈ ಕಲಾಕೃತಿಯಲ್ಲಿ ವರ್ಣಗಳ ಸಂಯೋಜನೆ, ಕುಂಚದ ರಭಸವಾದ ಬೀಸುಗಳು ಕಲಾವಿದನ ಕಲ್ಪನೆಗೆ ಅಮೂರ್ತರೂಪು ಕೊಟ್ಟಿವೆ. ಆಕೃತಿಯ ಹಿಂಬದಿಯಲ್ಲಿ ಏಕವರ್ಣದ ಲೇಪನವಿದೆ ಅದರ ಮೇಲೆ ಒಂದರ ಮೇಲೊಂದರಂತೆ ವರ್ಣ ಲೇಪನವಿದೆ. ಹೀಗೆ ಆಕೃತಿಯು ವಿಮಾನ ಅಥವಾ ಪಕ್ಷಿಯ ರೆಕ್ಕೆಯಂತೆ ಎಡ ಬಲಕ್ಕೆ ಚಾಚಿಕೊಂಡಿದೆ.

**ಸೃಜನ ಶೀಲ ಭೂದೃಶ್ಯಗಳು : ೨೦೦೨**

ಕಲಾವಿದರು ಪ್ರಕೃತಿಯ ಕುರಿತಾದ ಅನೇಕ ಪ್ರಯೋಗಗಳನ್ನು ನಡೆಸಿದ್ದಾರೆ. ಅಮೂರ್ತ ಚಿತ್ರಗಳಲ್ಲಿ ನಿಸರ್ಗದ ಕುರಿತಾದ ಕೃತಿಗಳು ಹೆಚ್ಚಾಗಿವೆ. ಈ ಕಲಾಕೃತಿಯ ಹಿನ್ನಲೆಯಲ್ಲಿ ಮೂಲ ವರ್ಣಗಳ ಸಂಯೋಜನೆಯಾಗಿವೆ. ಪ್ರತಿ ವರ್ಣವು ಹೊಸ ಬಗೆಯ ಅನುಭವವನ್ನು ನೀಡುತ್ತದೆ. ಆದರೆ ಕಲಾಕೃತಿಗೆ ಯಾವುದೇ ರೀತಿಯ ಶೀರ್ಷಿಕೆ ಇರದೆ ನೋಡುಗನಲ್ಲಿ ವಿನೂತನ ಅನುಭವವನ್ನು ನೀಡುತ್ತದೆ. ಚಿತ್ರದಲ್ಲಿ ಬಹು ವರ್ಣಗಳ ಮೇಳ ಇದೆ. ಇಲ್ಲಿರುವ ಹಲವಾರು ವರ್ಣಗಳು ವಿಚಾರವಂತಿಕೆಯ ಹರವನ್ನು ವಿಸ್ತರಿಸುತ್ತವೆ. ಇಲ್ಲಿ ಅವಕಾಶವನ್ನು ಸಮರ್ಥವಾಗಿ ಬಳಸಿಕೊಂಡು ಕಲಾಕೃತಿಗೆ ವಿಶಾಲ ಅರ್ಥವನ್ನು ನೀಡುವಲ್ಲಿ ಕಲಾವಿದರು ಯಶಸ್ವಿಯಾಗಿದ್ದಾರೆ. ಇಲ್ಲಿನ ರೂಪಾಂಶಗಳು ಪರಿಚಿತ ಲೋಕದ ಆಕೃತಿಗಳಿಗಿಂತ ಅಪರಿಚಿತವಾದ ಅನುಭವಗಳನ್ನು ನೀಡುತ್ತವೆ.

**ಶೀರ್ಷಿಕೆ ರಹಿತ : ೨೦೦೨**

ಈ ಕೃತಿಯು ತೈಲವರ್ಣದಲ್ಲಿ ರಚನೆಗೊಂಡಿದೆ. ಆದರೂ ಪಾರದರ್ಶಕವಾಗಿ ಕಾಣುವಂತೆ ರಚನಾ ವಿಧಾನವನ್ನು ಅನುಸರಿಸಲಾಗಿದೆ. ಇದಕ್ಕಾಗಿ ಕಲಾವಿದರು ಹೆಚ್ಚಿನ ವ್ಯಾಮೋಹ ತೋರಿದಂತೆ ಕಂಡು ಬರುತ್ತದೆ. ಕಲಾಕತಿಗಳಲ್ಲಿ ಪಾರದರ್ಶಕವಾಗಿ ಹೆಚ್ಚು ಲಿನ್ಸಿಡ್ ಆಯಿಲ್ ಬಳಸಿ ಜಲವರ್ಣದ ಚಿತ್ರದಂತೆ ಕೃತಿ ರಚಿಸಿದ್ದಾರೆ. ಅವು ಒಮ್ಮೆಮ್ಮೆ ಓಪೆಕ್ಕಾಗಿರುವಂತೆಯೂ ಗೋಚರವಾಗುತ್ತವೆ. ನಿಸರ್ಗಕ್ಕೆ ಹೊಸ ರೂಪದ ಮೆರಗನ್ನು ಕೊಡಲಾಗಿದೆ. ಈ ಕಲಾಕೃತಿಯಲ್ಲಿ ಒಂದರ ಮೇಲೊಂದರಂತೆ ವರ್ಣಗಳನ್ನು ಲೇಪಿಸಿ ಓಪೆಕ್ ತಂತ್ರಕ್ಕೆ ಅಳವಡಿಸಲಾಗಿದೆ. ಕಲಾಕೃತಿಗೆ ಬಳಸಿರುವ ವರ್ಣಗಳಾದ ಹಳದಿ, ಕೇಸರಿ, ಹಸಿರು, ಕಂದು ಮತ್ತು ಕಪ್ಪು ವರ್ಣಗಳು ಪರಸ್ಪರ ಒಂದಕ್ಕೊಂದು ಸಂಯೋಜನೆಗೊಂಡು ನಿಸರ್ಗಕ್ಕೆ ಹೊಸತನದ ಬೆಳಕು ಚಲ್ಲುವಲ್ಲಿ ಕಲಾವಿದರು ಯಶಸ್ವಿಯಾಗಿದ್ದಾರೆ.

**ನಿಸರ್ಗ ಚಿತ್ರ ಸರಣಿ : ೨೦೦೨**

ಈ ಚಿತ್ರವು ನಿಸರ್ಗದ ರಮ್ಯ ಕಲ್ಪನೆಯನ್ನು ತೋರ್ಪಡಿಸುವುದಲ್ಲದೆ ಅದರ ಅನುಭವದ ನಿಲುವನ್ನು ತಳೆದಿದೆ. ಆಕೃತಿಯ ಹಿನ್ನಲೆಯಲ್ಲಿ ವರ್ಣಗಳು ಆಕಾಶ ಭೂಮಿ ಒಂದಾಗಿರುವಂತೆ ಕಲ್ಪನೆ ಮೂಡಿಸುತ್ತವೆ. ಕ್ಯಾನವಾಸ್‌ಗೆ ಮೊದಲು ನೀಲಿ ವರ್ಣವನ್ನು ಬಳಿದು ನಂತರ ಒಂದರ ಮೇಲೊಂದರಂತೆ ಹಸಿರು, ತಿಳಿಹಳದಿ, ಕಪ್ಪು, ಕೇಸರಿ, ಬಿಳಿ ವರ್ಣಗಳನ್ನು ಲೇಪಿಸಿದ್ದಾರೆ. ಜ್ಯಾಮಿತಿಯ ಆಕೃತಿಯಂತೆ ಇಲ್ಲಿನ ರೂಪಗಳು ಕಂಡು ಬರುತ್ತವೆ. ನೆರಳನ್ನು

ದಟ್ಟ ನೀಲಿ ವರ್ಣದಿಂದ ಮೂಡಿಸಲಾಗಿದೆ. ಕುಂಚದ ಬೀಸುಗಳು ಚಲನೆಯನ್ನು ಪಡೆದುಕೊಂಡಿವೆ.

**ನಿಸರ್ಗ ಚಿತ್ರ : ೨೦೦೨**

ಈ ಕಲಾಕೃತಿಯು ಸಹಿತ ಹಿಂದಿನ ಕಲಾಕೃತಿಯಂತೆ ನಿಸರ್ಗದ ಕಲ್ಪನೆಗೆ ಸೃಜನಶೀಲ ಬೆಳವಣಿಗೆಯ ನಿಲುವಿನ ಜೊತೆಗೆ ಅನುಭವದ ಆಳವನ್ನು ಹರಿಯ ಬಿಟ್ಟಿದ್ದಾರೆ. ಆಕೃತಿಯ ವಿನ್ಯಾಸವು ಜ್ಯಾಮಿತಿಕ ನಕ್ಷೆಯಂತೆ ಪರಿಸರಕ್ಕೆ ಪ್ರತಿಬಿಂಬವನ್ನೇ ಒದಗಿಸಿದೆ. ನಿಸರ್ಗದ ಮೇಲೆ ಬಿದ್ದ ಬೆಳಕು ಪರಿಸರ ಅದರ ಛಾಯೆಯನ್ನು ಹಿಂಬದಿಯಲ್ಲಿ ದಟ್ಟ ನೀಲಿ ವರ್ಣದಿಂದ ಲೇಪಿಸಿ ಇನ್ನಷ್ಟು ಮೆರಗು ಕೊಟ್ಟಿದ್ದಾರೆ. ಪ್ರಕೃತಿಯು ಎಂತವರನ್ನು ಮೈಮರೆಸುತ್ತದೆಂಬುದಕ್ಕೆ ಈ ನಿಸರ್ಗ ಕಲಾಕೃತಿಗಳ ಸರಣಿ ಸಾಕ್ಷಿಯಾಗಿದೆ.

**ನಿಸರ್ಗ : ೨೦೦೨**

ಈ ಕಲಾಕೃತಿಯು ಕೇವಲ ಕಲಾಕೃತಿಯಾಗಿರದೇ ನೋಡುಗರನ್ನು ವಿಚಾರವಂತಿಕೆಯ ನಿಲುವಿನಂಚಿಗೆ ಕರೆದೊಯ್ಯುತ್ತದೆ. ಕಲಾವಿದನ ಕಣ್ಣಲ್ಲಿ ತೇಜೋಮಯವಾದ ತೀಕ್ಷ್ಣ ಬೆಳಕು ಅವರನ್ನು ಆಕರ್ಷಿಸಿದೆ. ಬಣ್ಣಗಳ ಶಕ್ತಿಯನ್ನು, ಗುಣಗಳನ್ನು ಅಳೆಯುವಂಥ ಮಾಪಕ ಕಲಾವಿದರಲ್ಲಿರುತ್ತದೆ. ಕಣ್ಣಿಗೆ ಕಾಣುವ ವಸ್ತುವನ್ನು ಯಥಾವತ್ತಾಗಿ ಚಿತ್ರಿಸದೆ, ಬದಲಾಗಿ ಹೊಸ ಆಯಾಮವನ್ನೆ ಸೃಷ್ಟಿಸಿದ್ದಾರೆ. ಸದಾ ಕ್ರಿಯಾಶೀಲ ಪ್ರವೃತ್ತಿಯನ್ನು ಬೆಳೆಸಿಕೊಂಡ ಕಲಾವಿದರು ಆಕೃತಿಗೆ ಸಮರ್ಪಕವಾದ ನಿರೂಪಣೆಯ ತಂತ್ರ ಪ್ರಾಮುಖ್ಯತೆ ಕೊಟ್ಟಿದ್ದಾರೆ.

ಆಕಾಶ ಭೂಮಿಯನ್ನು ಒಂದೇ ನೆಲೆಯಲ್ಲಿ ಚಿತ್ರಿಸದೇ ಅದಕ್ಕೆ ಹೊಸ ಆಯಾಮವನ್ನೊದಗಿಸುವ ನಿಟ್ಟಿನಲ್ಲಿ ಪ್ರಯತ್ನಿಸಲಾಗಿದೆ. ಆಕಾಶದಲ್ಲಿ ಪಕ್ಷಿಯಂತೆ ಹಾರಾಡುತ್ತಾ ಭೂಮಿಯನ್ನು ಒಂದು ಪಕ್ಷಿ ನೋಡಿದಂತೆ ವಿನ್ಯಾಸಗೊಳಿಸಲಾಗಿದೆ. ಮೇಲ್ನೋಟಕ್ಕೆ ಚಿತ್ರದಲ್ಲಿ ಮನೆಗಳ ಮೇಲ್ಛಾವಣಿ ಕಂಡಂತೆ ವರ್ಣಗಳ ಪಟ್ಟಿಕೆಗಳು ಒಂದನ್ನೊಂದು ಸಂಯೋಜನೆಗೊಳಿಸಿಕೊಂಡಿವೆ.

**ನಿಸರ್ಗ : ೨೦೦೩**

ಪಾಟೀಲರು ಹೇಳುವ ಹಾಗೆ ಒಂದು ಕ್ಯಾನ್ವಾಸಿನ್‌ನಲ್ಲಿ ಕಲಾವಿದ ರೇಖೆಯೊಂದನ್ನು ಮೂಡಿಸುತ್ತಾನೆ. ಈ ರೇಖೆ ಇಡೀ ಕ್ಯಾನ್ವಾವಾಸ್‌ನ್ನು ನಿಯಂತ್ರಿಸಬೇಕು ಕಲಾವಿದನ ಜಾಣ್ಮೆ ರೇಖೆಗಳನ್ನು ಬಳಸಿಕೊಳ್ಳುವ ವಿಧಾನದ ಮೂಲಕ ವ್ಯಕ್ತಗೊಳ್ಳುತ್ತದೆ. ಹೊಸ ಪ್ರಯೋಗವನ್ನು ನಡೆಸುವಾಗ ಅನುಭವಗಳನ್ನು ಹೊರಹಾಕಬೇಕೆಂದಾಗ ಕಲಾವಿದನಿಗೆ ತೃಪ್ತಿಯಾಗಬೇಕು. ವಸ್ತುವನ್ನು ವಿಭಜಿಸುವುದು. ಅದರಲ್ಲಿ ಆಳವನ್ನು ಮೂಡಿಸುವುದು ಜ್ಯಾಮಿತಿಯ ವಿನ್ಯಾಸಗಳನ್ನು ಬಳಸಿಕೊಳ್ಳುವುದು ಇದು ಕಲಾವಿದನ ಸೃಜನಶೀಲತೆಯನ್ನು ಅವಲಂಭಿಸುವಂಥದ್ದು. ಅಂತಹ

ಹಿನ್ನೆಲೆಯ ಚಿತ್ರ ಇದಾಗಿದೆ.

**ನಿಸರ್ಗ ಚಿತ್ರ : ೨೦೦೩**

ತೈಲ ವರ್ಣದ ಈ ನಿಸರ್ಗ ಚಿತ್ರದಲ್ಲಿ ಕಲಾವಿದರ ಅನುಭವದ ಹರವನ್ನು ವಿಸ್ತರಿಸುತ್ತ ನಿಸರ್ಗದ ಮಡಿಲಿಗೆ ಚೈತನ್ಯದದ ಮೆರಗನ್ನು ತುಂಬಿದ್ದಾರೆ. ವರ್ಣ ಸಂಯೋಜನೆಯಲ್ಲಿ ವಿವಿಧ ಜ್ಯಾಮಿತಿಕ ಆಕೃತಿಗಳಂತೆ ಕಾಣುವ ಕುಂಚದ ರಭಸದ ಹೊಡೆತಗಳು ಒಂದನ್ನೊಂದು ಬೆರೆತು ಬಳಸಿರುವ ಬಣ್ಣಗಳು ಕೇಸರಿ, ಕೆಂಪು, ಕಂದು, ನೀಲಿ ಕಪ್ಪು ಹಾಗೂ ತಿಳಿ ಹಳದಿಗಳು ಅಷ್ಪಷ್ಟ ನಿಲುವನ್ನು ತಳೆದರೂ ಆಕೃತಿಯು ಹೊಸ ಪ್ರಯೋಗವನ್ನು ಪಡೆದುಕೊಂಡಿದೆ. ಕರ್ನಾಟಕದ ಸಮಕಾಲೀನ ಕಲೆಗೆ ತಮ್ಮದೇ ಆದ ಮಹತ್ವದ ಸ್ಥಾನವನ್ನು ನೀಡಿದವರು. ಬಾಲ್ಯದಲ್ಲಿ ತಾವು ಕಂಡಂತಹ ಹಳ್ಳಿಯ ಪರಿಸರವನ್ನು ತುಂಬಾ ಪರಿಣಾಮಕಾರಿಯಾಗಿ ಚಿತ್ರಿಸಿದ್ದಾರೆ.

**ನಿಸರ್ಗ : ೨೦೦೩**

ಹಿಂದಿನ ಚಿತ್ರದದಂತೆ ಈ ಕೃತಿಯು ಕೂಡ ವರ್ಣ ಬಳಕೆಯಲ್ಲಿ ಒಂದೇ ಆಗಿದೆ. ಆದರೆ ವಿನ್ಯಾಸದ ನಿಲುವುಗಳು ಮಾತ್ರ ಬೇರೆಯಾಗಿದ್ದು ಆಕೃತಿಯ ಹಿಂಬದಿಯ ಛಾಯೆಯನ್ನು ಇಲ್ಲಿ ಮೂಡಿಸಲಾಗಿದೆ. ಅನುಭವ ಆಳಕಕ್ಕೆ ನಿಲುಕದ ಚಿತ್ರವು ಪ್ರತಿ ಕ್ಷಣಕ್ಕೂ ಹೊಸ ಅರ್ಥವನ್ನು ನೀಡುತ್ತದೆ. ವರ್ಣ ಸಂಯೋಜನಾ ದೃಷ್ಟಿಯಿಂದ ಮನಸ್ಸಿನ ವಿಕಲ್ಪಕಗಳು ಪ್ರತಿಫಲನಗೊಂಡತಿದೆ. ಪ್ರಯೋಗ ಶೀಲ ಪ್ರವೃತ್ತಿಯನ್ನೇ ವಿಕ್ಷನಲ್ಲಿ ತುಂಬುವ ವರ್ಣ ವಿನ್ಯಾಸಗಳು ಚಿತ್ರಕ್ಕೆ ಜೀವಂತಿಕೆಯ ಸ್ವರೂಪವನ್ನು ತಂದಿದೆ.

**ಮಹಿಳೆ ಮತ್ತು ಪರಿಸರ : ೨೦೦೩**

ಕಲಾವಿದರು ಬಾಲ್ಯದಲ್ಲಿ ಕಂಡಂತಹ ಹಳ್ಳಿಯ ಪರಿಸರ ಮತ್ತು ಅಲ್ಲಿಯ ಚಟುವಟಿಕೆಗಳನ್ನು ತಮ್ಮ ಚಿತ್ರಗಳಲ್ಲಿ ಬಳಸಿಕೊಂಡಿದ್ದಾರೆ. ಗ್ರಾಮೀಣ ಸ್ತ್ರೀಯರನ್ನು ಅವರ ಸಂಸ್ಕೃತಿ ಸಂಪ್ರದಾಯಕ್ಕೆ ಪೂರಕವಾಗಿ ಕೇವಲ ರೇಖೆಗಳ ಮುಖಾಂತರ ರಚಿಸಿದ ಕಲಾಕೃತಿ ಇದಾಗಿದೆ. ಕಲಾಕೃತಿಯಲ್ಲಿ ಮಹಿಳೆಯನ್ನು ಅಂಗ ರಚನಾ ಶಾಸ್ತ್ರದ ಕಲ್ಪನೆಯಂತೆ ತುಂಬಾ ಸ್ಪಷ್ಟವಾಗಿ ಮೂಡಿಸಿದ್ದಾರೆ. ಸಂಪ್ರದಾಯಕ ಉಡುಪುಗಳಿಂದ ಅಲಂಕರಿಸಲಾಗಿದೆ. ಮಹಿಳೆಯ ಹಿಂದಿರುವ ಮನೆ ಹಾಗೂ ಸುತ್ತಲಿನ ಬೆಟ್ಟ ಗುಡ್ಡಗಳ ಪರಿಸರವು ಚಿತ್ರಕ್ಕೆ ಯಥಾದರ್ಶನದ ಮೆರಗನ್ನು ಕೊಟ್ಟಿದೆ.

**ಶೀರ್ಷಿಕೆ ರಹಿತ : ೨೦೦೩**

ಸ್ತ್ರೀಯು ನಗ್ನಾಕಾರವಾಗಿ ಕುಳಿತಿರುವ ಶಿರ್ಷಿಕೆ ರಹಿತ ರೇಖಾಚಿತ್ರ ಇದಾಗಿದೆ. ಕಲಾವಿದರು ಸ್ತ್ರೀಯ ಬಗೆಗಿನ ಚಿತ್ರಗಳನ್ನೇ ಹೇರಳವಾಗಿ ರಚಿಸಿದ್ದು ಮನೆಯ ಒಳಾಂಗಣದಲ್ಲಿ

ರಚಿಸಿದ ಚಿತ್ರ ಇದಾಗಿದೆ. ರೇಖೆಗಳು ಸರಾಗವಾಗಿ ಚಲಿಸಿವೆ. ಲಯಬದ್ಧವಾದ ರೇಖೆಗಳು ಜೀವಂತಿಕೆಯುನ್ನು ಪಡೆದುಕೊಂಡಿವೆ. ಸ್ತ್ರೀಯು ಯೌವ್ವನಾವಸ್ಥೆಯ ಮಜುಲುಗಳು ಆದ್ಯತೆಗನುಸಾರವಾಗಿ ಅಭಿವ್ಯಕ್ತಗೊಂಡಿವೆ. ಸ್ತ್ರೀಯ ದೇಹ ಸೌಂದರ್ಯ ಪೂರಿತ ಭಾವವನ್ನು ವ್ಯಕ್ತಪಡಿಸುತ್ತಿದ್ದು ಈರೀತಿಯ ರೇಖಾ ಚಿತ್ರಗಳು ಕಲಾವಿದರ ರಸಿಕತೆಯ ಮನೋಭಾವವನ್ನು ವ್ಯಕ್ತಪಡಿಸುವ ಚಿತ್ರಗಳಂತೆ ಕಂಡು ಬರುತ್ತವೆ.

**ಸಿ. ಜಿ. ಕೆ. ಭಾವಚಿತ್ರ : ೨೦೦೩**

ಖ್ಯಾತ ನಾಟಕ ನಿರ್ದೇಶಕರಾದ ಸಿ.ಜಿ.ಕೆ ಅವರ ಭಾವಚಿತ್ರವನ್ನು ಇಲ್ಲಿ ಪಾಟೀಲರು ರಚಿಸಿದ್ದಾರೆ. ಸೀಮಿತ ಅವಧಿಯಲ್ಲಿ ರಚಿಸಿದ ಈ ಚಿತ್ರದಲ್ಲಿ ರೂಪದರ್ಶಿಯ ಮುಖದ ದುಂಡುತನವನ್ನು ಚಿತ್ರಿಸುವ ಪ್ರಯತ್ನವಿದೆ. ನೋಟವು ಪಾರ್ಶ್ವಭಾಗದಲ್ಲಿ ನಾಟಿದ್ದು, ಚಾಳಿಸಿನ ಪಾರದರ್ಶಕಗುಣವನ್ನು ವಿವರವಾಗಿಯೇ ನಿರ್ವಹಿಸಿದ್ದಾರೆ. ಬಿಳಿಯ ಉಡುಪು ತೆಳುವಾದ ಗುಣವನ್ನು ಹೊಂದಿರುವಂತೆ ಚಿತ್ರಿಸಿರುವುದು ಇವರ ಕಲಾಕ್ಷಮತೆ ತೋರಿಸುತ್ತದೆ. ವರ್ಣದ ಬೀಸುಗಳಲ್ಲಿಯೇ ನೆರಳು, ಬೆಳಕಿನ ಪರಿಣಾಮ ಸೃಷ್ಟಿಸಿದ್ದಾರೆ. ಉಡುಪಿನಲ್ಲಿಯ ನಕ್ಷೆಗಳು ಕೂಡ ನೈಜತೆಗೆ ಹತ್ತಿರವಿರುವಂತೆ ಭಾಸವಾಗುವ ತ್ತವೆ. ಹಿನ್ನೆಲೆ ಲೇಪನವನ್ನು ರೂಪದರ್ಶಿಯ ಭಾವಗಳಿಗೆ ಹೊಂದುವಂತೆ ದಟ್ಟವಾಗಿ ಚಿತ್ರಿಸಲಾಗಿದೆ. ಈ ಕೃತಿಯಲ್ಲಿ ರೂಪದರ್ಶಿಯ ಮುಖದ ಮೇಲಿರುವ ನೆರಿಗೆಗಳು ಚರ್ಮದ ಹೊಳಪು, ಉಬ್ಬು, ತಗ್ಗುಗಳು, ನೆರಳು ಬೆಳಕಿನ ವಿನ್ಯಾಸ ಪರಿಣಾಮಕಾರಿಯಾಗಿ ರಚನೆಗೊಂಡಿದೆ.

**ಮಹಿಳೆ ಮತ್ತು ಆಡು : ೨೦೦೪**

ಪ್ರಸ್ತುತ ಕಲಾಕೃತಿಯಲ್ಲಿ ಮಹಿಳೆಯು ಗುಡ್ಡದ ಮೇಲೆ ಕುಳಿತಿದ್ದು ಆಕೆಯ ಎದುರು ಆಡನ್ನು ರಚಿಸಲಾಗಿದೆ. ಪಾಟೀಲರ ಗ್ರಾಮೀಣ ಪರಿಸರದ ನೆಲೆಯಲ್ಲಿ ರೂಪಗೊಂಡ ಕಲಾಕೃತಿಗಳು ವಿಷಯಾದಾರಿತ ಮೌಲ್ಯವನ್ನು ಹೊಂದಿವೆ. ಅಂತಹ ಚಿತ್ರ ಇದಾಗಿದೆ. ಇಲ್ಲಿ ಬಳಸಿರುವ ವರ್ಣಗಳು ದಟ್ಟತೆಯ ಅನುಭವ ಕೊಡುವಲ್ಲಿ ಸಫಲವಾಗಿವೆ. ನೀಲಿ, ಬಿಳಿ, ಹಳದಿ, ಕೆಂಪು, ಕಂದು ಹಸಿರು ವರ್ಣಗಳು ಚಿತ್ರದ ಸಂಯೋನೆಯಲ್ಲಿ ಬಳಕೆಗೊಂಡಿವೆ. ಪರಿಸರದ ಮಧ್ಯದಲ್ಲಿ ಎತ್ತರವಾದ ದಿಬ್ಬದ ಮೇಲೆ ಕುಳಿತಿರುವ ಸ್ತ್ರೀಯ ಭಾವ ಭಂಗಿ ಆಕರ್ಷಕವಾಗಿದೆ. ಹಿಂಬದಿಯಲ್ಲಿ ತಿಳಿ ಮತ್ತು ದಟ್ಟ ಹಸಿರಿನಿಂದಕೋಡುದ ವರ್ಣಗಾರಿಕೆ ಇದೆ. ಹಾಗೂ ಪರಿಸರದ ಮಧ್ಯದಲ್ಲಿ ಕುಳಿತಿರುವ ಸ್ತ್ರೀಯ ಲಾಲಿತ್ಯ ರೂಪವು ಹಾಗೂ ಮಹಿಳೆ ಧರಿಸಿರುವ ಬಿಳಿ ಮತ್ತು ನೀಲವರ್ಣದ ಪಟ್ಟಿಕೆಯಾಕಾರದ ಉಡುಪುಗಳು ಹಾಗೂ ಹುಣ್ಣಿಮೆಯ

ಅರ್ಧಚಂದಿರನನ್ನು ಬಳಸಿರುವುದು ಕೃತಿಯ ಅಂದವನ್ನು ಹೆಚ್ಚಿಸಿದೆ.

**ಮೂವರು ಸ್ತ್ರೀಯರು : ೨೦೦೪**

ಪಾಟೀಲರು ವರ್ಣದಿಂದ ತೆಳುಕುಂಚ ಬಳಸಿ ವೇಗದ ಚಲನೆಯಿಂದ ಪ್ರಸ್ತುತ ಚಿತ್ರವನ್ನು ರಚಿಸಿದ್ದಾರೆ. ಇದೊಂದು ಕರಡು ಚಿತ್ರವಾಗಿದೆ. ಈ ಕೃತಿಯಲ್ಲಿ ಮೂರು ಜನ ಸ್ತ್ರೀಯರು ಸೇರಿಕೊಂಡು ಯಾವುದೋ ವಿಷಯ ಚರ್ಚಿಸುತ್ತಿದ್ದಾರೆ. ಮಧ್ಯದ ಸ್ತ್ರೀಯ ಭಂಗಿಯು ಹಿಂಬದಿಯಾಗಿ ಕುಳಿತಿದ್ದು ನಗ್ನಾಕಾರದಲ್ಲಿರುವಂತೆ ರಚನೆಯಾಗಿದೆ. ಎಡ ಬಲದ ಸ್ತ್ರೀಯರು ಯಾವುದೋ ವಿಷಯವನ್ನು ಮಧ್ಯದವಳಿಗೆ ಒತ್ತಾಯ ಪೂರ್ವಕವಾಗಿ ತಿಳಿಸುತ್ತಿರುವಂತೆ ಚಿತ್ರಿಸಲಾಗಿದೆ. ಕಲಾಕೃತಿಯಲ್ಲಿ ಸಾಂಕೇತಿಕವಾಗಿ ಹಿನ್ನೆಲೆಯನ್ನು ರೇಖಾ ವಿನ್ಯಾಸದಿಂದ ಚಿತ್ರಿಸಲಾಗಿದೆ. ಇಲ್ಲಿನ ರೇಖೆಗಳು ಜೀವಂತಿಕೆಯಿಂದ ಕೂಡಿದೆ.

**ಕೆ. ಎನ್. ರಾಮಚಂದ್ರನ್‌ರವರ ಭಾವಚಿತ್ರ : ೨೦೦೫**

ಕೆ.ಎನ್.ರಾಮಚಂದ್ರನ್ ರವರು ಒಬ್ಬ ಪ್ರಸಿದ್ಧ ಕಲಾವಿದರು ಇವರು ಅನೇಕ ಕಲಾಕೃತಿಗಳನ್ನು ರಚಿಸಿ ಕರ್ನಾಟಕದ ಖ್ಯಾತ ಕಲಾವಿದರ ಪಟ್ಟಿಯಲ್ಲಿ ಗುರುತಿಸಿಕೊಂಡವರು. ಇವರಿಗೆ ನಿಸರ್ಗ ದೃಶ್ಯಗಳೆಂದರೆ ಎಲ್ಲಿಲ್ಲದ ಆನಂದ ಇವರು ಕ್ಷಣಾರ್ಧದಲ್ಲಿಯೇ ಕುಂಚದ ರಭಸವಾದ ಬೀಸುಗಳಿಂದ ಕಲಾಕೃತಿಯನ್ನು ರಚಿಸುವುದರಲ್ಲಿ ಸಿದ್ಧ ಹಸ್ತರಾಗಿದ್ದಾರೆ. ಇಂತಹ ಮಹಾನ್ ಕಲಾವಿದರ ಭಾವ ಚಿತ್ರವನ್ನು ಪಾಟೀಲರು ರಚಿಸಿದ್ದಾರೆ. ರೂಪದರ್ಶಿಯ ಯಥಾವತ್ತಾದ ಭಾವನೆಯು ಬರುವಂತೆ ನೈಜತೆಯನ್ನು ಪ್ರತಿಬಿಂಬಿಸಲಾಗಿದೆ.

ಸೀಮಿತ ವರ್ಣಗಳು ಕ್ಷಿಪ್ರಗತಿಯ ಚಲನೆಯಿಂದ ಪೂರೈಸಿವೆ. ಆದರೂ ಮುಖದಲ್ಲಿ ಮಂದಹಾಸ ಬೀರಿದೆ. ಬಳಸಿರುವ ವರ್ಣಗಳು ಕೆಂಪು, ಹಳದಿ, ಕಂದು, ಬಿಳಿ, ನೀಲಿ ವರ್ಣಗಳು ಪರಸ್ಪರ ಚಿತ್ರಕ್ಕೆ ಸೌಮ್ಯತೆ, ನಯನಗಾರಿಕೆ ಕೊಟ್ಟಿವೆ. ಕಲಾವಿದರ ನಿಜ ಸ್ವರೂಪವನ್ನು ಬಿಂಬಿಸು ಈ ಚಿತ್ರವು ಕನ್ನಡಕದ ಮೇಲೆ ಬಿದ್ದ ಬೆಳಕು ಹಾಗೆಯೇ ಯಥಾವತ್ತಾಗಿ ಮೂಡಿ ಬಂದಿದೆ. ಮೂಗಿನ ಮೇಲೆ ಬಳಸಿರುವ ಕೆಂಪು ಬಣ್ಣವು ಚಿತ್ರಕ್ಕೆ ಪ್ರಾಧಾನ್ಯತೆಯನ್ನು ತಂದುಕೊಟ್ಟಿದೆ ಕೆಂಪು ನಿಲುವಂಗಿಯು ಕುಂಚದ ಬೀಸುಗಳಿಗೆ ತಾನಾಗಿಯೇ ಒಡಮೂಡಿದಂತಿದೆ.

**ನಿಸರ್ಗ ಚಿತ್ರ : ೨೦೦೫**

ಈ ಚಿತ್ರದಲ್ಲಿ ನಿಸರ್ಗದಲ್ಲಿರುವ ಬೆಟ್ಟಗುಡ್ಡ ಹಾಗೂ ಗಿಡಗಳನ್ನು ಚಿತ್ರಿಸಲಾಗಿದೆ. ಪರಿಸರವು ಈ ಚಿತ್ರದಲ್ಲಿ ಬೆಟ್ಟಗುಡ್ಡವು ವರ್ಣಗಳ ಲೇಪನದಿಂದ ಸಂಯೋಜನೆಗೊಂಡಿದೆ. ಅದರ ಪಕ್ಕದಲ್ಲಿ ನಿಸರ್ಗದ ಸಂಕೇತಕ್ಕೆ ನಿಲುವು ಎಂಬಂತೆ ಒಂದೆರೆಡು ಗಿಡಗಳನ್ನು ತಿಳಿನೀಲಿ, ಹಸಿರು ವರ್ಣದಿಂದ ಸಂಯೋಜಿಸಲಾಗಿದೆ. ನೀಲಾಕಾಶವು ತೆಳುವರ್ಣದಿಂದ ಆವೃತವಾಗಿದೆ.

ವಾತಾವರಣದ ಶಾಂತತೆಯನ್ನು ನಿರೂಪಿಸುವಂತೆ ರಚನೆಗೊಂಡಿದೆ.

**ಸ್ತ್ರೀ : ೨೦೦೫**

ಇಲ್ಲಿನ ಚಿತ್ರದಲ್ಲಿ ಸ್ತ್ರೀಯು ಮನೆಯೊಂದರಲ್ಲಿ ಕುಳಿತಿದ್ದು, ತಲೆಯ ಮೇಲೆ ಕೈಯನ್ನು ಇಟ್ಟುಕೊಂಡಿದ್ದಾಳೆ. ವೇಗವಾಗಿ ಚಿತ್ರಿಸಿ ರೇಖೆಗಳು, ಅದರ ಮೇಲೆ ವರ್ಣಗಳನ್ನು ಕ್ಷಿಪ್ರಗತಿಯಲ್ಲಿ ಲೇಪಿಸಿದಂತೆ ಕಂಡು ಬರುತ್ತದೆ. ಹಳದಿ ವರ್ಣದ ಸ್ತ್ರೀಯು ಕೇಸರಿ ವರ್ಣದ ಕುಪ್ಪಸ ಮತ್ತು ಬಿಳಿ ವರ್ಣದ ಲಂಗವನ್ನುಟ್ಟಿದ್ದಾಳೆ. ರೇಖಾ ಪ್ರಧಾನತೆಯಿಂದ ಕೂಡಿರುವ ಆಕಾರದಲ್ಲಿ ಲಯವನ್ನುಂಟು ಮಾಡಿದರೂ ಸ್ಪಷ್ಟ ಕಲ್ಪನೆಯನ್ನು ಆಕೃತಿಗೆ ವದಗಿಸಿಲ್ಲ. ಹಿಂಬದಿಯಲ್ಲಿ ನೀಲಿ ಕಪ್ಪು ವರ್ಣ ಸಂಯೋಜನೆಯು ಆಕೃತಿಗೆ ಮೆರಗನ್ನು ತಂದುಕೊಟ್ಟಿದೆ. ಕುಂಚದ ಬಿರುಸಿನ ಹೊಡೆತದಿಂದಲೇ ಮೂಡಿಬಂದ ಈ ಕಲಾಕೃತಿಯು ಕ್ಷಣಾರ್ಧದಲ್ಲಿಯೇ ರೂಪಗೊಂಡಂತಿದೆ.

**ವ್ಯಕ್ತಿ ಭಾವಚಿತ್ರ : ೨೦೦೫**

ಪಾಟೀಲರು ಪ್ರಾತ್ಯಕ್ಷಿಕೆ ಸಂದರ್ಭದಲ್ಲಿ ರಚಿಸಿದಂತ ಭಾವಚಿತ್ರ ಇದಾಗಿದೆ. ಚಿತ್ರದ ಹಿನ್ನೆಲೆಯಲ್ಲಿ ಬಳಸಿದ ವರ್ಣವು ಮಸುಕಾಗಿದೆ. ಇಡೀ ಚಿತ್ರಕ್ಕೆ ಹಳದಿ ವರ್ಣದ ದಟ್ಟ ಛಾಯೆಯು ಆವರಿಸಿದಂತೆ ಗೋಚರವಾಗುತ್ತದೆ. ವೇಗದ ಗತಿಯನ್ನು ಪಡೆದುಕೊಂಡ ಕುಂಚದ ಎಳೆತಗಳಿಂದಲೇ ಪ್ರಾತ್ಯಕ್ಷಿಕೆಯ ಮುಕ್ತಾಯವಾದಂತಿದೆ. ಒಂದರಮೇಲೊಂದರಂತೆ ಬಣ್ಣದ ಲೇಪನದ ಸಂಯೋಜನೆಯನ್ನು ಮಾಡಲಾಗಿದೆ. ಕಣ್ಣು ಮೂಗು ಹಾಗೂ ತುಟಿಗಳಿಗೆ ಕೆಂಪು ವರ್ಣ ಲೇಪಿಸಲಾಗಿದೆ. ಅಂಗಾಂಗವನ್ನು ಎದ್ದು ಕಾಣುವಂತೆ ರಚಿಸಿದೆ. ಮಧ್ಯಮ ವಯಸ್ಸಿನ ವ್ಯಕ್ತಿಯ ಮುಖದ ಭಾವವೆಲ್ಲವೂ ಎದ್ದು ಕಾಣುವಂತೆ ಚಿತ್ರಿಸಲಾಗಿದೆ. ಹಾಗೂ ಮೈಮೇಲೆ ಧರಿಸಿದ ನೀಲಿ ವರ್ಣದ ಅಂಗಿಯು ನೈಜತೆಯಿಂದ ಕೂಡಿರುವ ಹಾಗೆ ಕಂಡು ಬರುತ್ತದೆ.

**ಸ್ತ್ರೀ ಭಾವಚಿತ್ರ : ೨೦೦೫**

ಡ್ರೈ ಪೇಸ್ಟಲ್ ವರ್ಣದಿಂದ ನಿರ್ವಹಿಸಿದ ಈ ಕಲಾಕೃತಿಯಲ್ಲಿ ಬಾಹ್ಯ ಚಹರೆಗಳಿಗೆ ಹೆಚ್ಚಿನ ಒತ್ತು ನೀಡಿದ್ದನ್ನು ಕಾಣುತ್ತೇವೆ. ಕುಂಚದ ಬೀಸುಗಳು ನಿಯಮಿತವಾಗಿ ಓಡಾಡಿವೆ. ಚಿತ್ರದ ವರ್ಣಗಳು ರೂಪದರ್ಶಿಯ ನೈಜ ವರ್ಣಗಳಿಗೆ ಹತ್ತಿರವಾಗುವಂತಿವೆ. ಹಿನ್ನೆಲೆಯಲ್ಲಿ ಬಿಳಿ ತೆಳು ವರ್ಣದ ಲೇಪನ ಮಾಡಲಾಗಿದೆ. ಭಾವಚಿತ್ರವು ನಯನಗಾರಿಕೆಯನ್ನು ಹೊಂದಿದ್ದರೂ ಸಹಿತ ಅಲ್ಲಿನ ರಮಣೀಯ ಸೆಳಕುಗಳು ಆಕರ್ಷಿಸುವಂತಿವೆ. ಪೇಸ್ಟಲ್‌ನ ಬೀಸುಗಳಿಂದ ಮುಖದ ಉಬ್ಬು ತಗ್ಗುಗಳನ್ನು ತೋರಿಸುವಂತೆ ರಚಿಸಲಾಗಿದೆ. ಈ ಕೃತಿಯಲ್ಲಿ ಮಹಿಳೆಯ ಮುಖದ ಮೇಲಿನ ಮಂದಹಾಸ, ಗೆರೆಗಳು, ಉಬ್ಬು ತಗ್ಗುಗಳು, ಚರ್ಮದ ಹೊಳಪು, ಸ್ತ್ರೀ ಸಹಜವಾದ ಕೋಮಲತೆ ಹಾಗೂ ನೆರಳು ಬೆಳಕಿನ ವಿನ್ಯಾಸವು ಪರಿಣಾಮಕಾರಿಯಾಗಿ

ರಚನೆಗೊಂಡಿದೆ.

**ಭಾವಚಿತ್ರ : ೨೦೦೬**

ವ್ಯಕ್ತಿಯೊಬ್ಬನ ಭಾವಚಿತ್ರವನ್ನು ಛಾಯಾಚಿತ್ರದ ಆಧಾರದಲ್ಲಿ ರಚಿಸಲಾಗಿದೆ. ಇದು ತೈಲವರ್ಣ ಕಲಾಕೃತಿಯಾಗಿದ್ದು ನೈಜ ಶೈಲಿಯನ್ನು ಪ್ರತಿಬಿಂಬಿಸುವಂತಿದೆ. ವ್ಯಕ್ತಿಯ ಮುಖದಲ್ಲಿ ನುಣುಪುತನ ಹೆಚ್ಚಾಗಿ ಕಾಣುತ್ತಿದ್ದು ವರ್ಣ ಸಂಯೋಜನೆಯಲ್ಲಿ ಹಳದಿ, ಕಂದು, ತೆಳುಹಳದಿ, ಬಿಳಿವರ್ಣ ಬಳಸಿಕೊಳ್ಳಲಾಗಿದೆ. ತಲೆ ಕೂದಲಿಗೆ ಕಪ್ಪು ಮತ್ತು ಕಂದು ವರ್ಣಗಳನ್ನು ಬಳಸಲಾಗಿದೆ. ಮುಖದ ವರ್ಣಗಳು ತುಂಬಾ ತಿಳಿಯಾಗಿ ತೋರಿಸಿದ್ದು ನೆರಳು ಬೆಳಕನ್ನು ಕೂಡ ಉಂಟು ಮಾಡಲಾಗಿದೆ. ವ್ಯಕ್ತಿಯ ಕಣ್ಣುಗಳಲ್ಲಿ ತೇಜೋಮಯವಾದ ಬೆಳಕು ತುಂಬಿರುವಂತೆ ಚಿತ್ರಿಸಲಾಗಿದೆ. ಧರಿಸಿರುವ ಅಂಗಿ ನೀಲಿ ವರ್ಣದ್ದಾಗಿದ್ದು, ಅದು ಕೂಡ ನೈಜವಾಗಿ ಕಾಣುವಂತೆ ಮಾಡಲಾಗಿದೆ.

**ವ್ಯಕ್ತಿ ಚಿತ್ರ : ೨೦೦೬**

ಈ ಕಲಾಕೃತಿಯಲ್ಲಿ ಕಾಲ್ಪನಿಕವಾಗಿ ಛಾಯಾಚಿತ್ರದ ಆಧಾರದಲ್ಲಿ ವ್ಯಕ್ತಿಯ ಭಾವಚಿತ್ರ ರಚಿಸಲಾಗಿದೆ. ಒಂದರ ಮೇಲೊಂದರಂತೆ ವರ್ಣ ಲೇಪನಗಳನ್ನು ಲೇಪಿಸಿರುವುದು ಕಂಡು ಬರುತ್ತದೆ ಇದು ಒಂದು ಒಪೆಕ್ ತಂತ್ರ ಮಾಧ್ಯಮವಾಗಿದೆ. ಬಳಸಿರುವ ಬಣ್ಣಗಳಲ್ಲಿ ಕಂದು, ತೆಳು ಹಳದಿ, ಕೆಂಪು, ಬಿಳಿ, ಕಪ್ಪು ಬಣ್ಣಗಳು ಪ್ರಮುಖವಾಗಿವೆ. ಕಂದು ಬಣ್ಣದ ಲೇಪನವನ್ನು ಮುಖಕ್ಕೆ ಸಂಯೋಜಿಸಲಾಗಿದೆ. ಮುಖಕ್ಕೆ ಒಪ್ಪುವಂತೆ ಕುರುಚಲು ಗಡ್ಡ ಮೀಸೆಗಳು, ಹಾಗೂ ಮುಖದ ಮೇಲೆ ಬಿದ್ದಿರು ಛಾಯೆಯು ಯಥಾವತ್ತಾಗಿ ಮೂಡಿ ಬಂದಿವೆ. ಮೈಮೇಲೆ ಧರಿಸಿರುವ ತಿಳಿ ಹಳದಿ ವರ್ಣದ ಅಂಗಿ ಮತ್ತು ಅದರ ಮೇಲೆ ಧರಿಸಿದ ಕೋಟು ಎಲ್ಲವೂ ಕುಂಚದ ಎಳೆತಗಳಿಂದ ರಚಿಸಿರುವುದು ಕಂಡು ಬರುತ್ತದೆ.

**ಸ್ತ್ರೀಯ ಭಾವ ಚಿತ್ರ : ೨೦೦೬**

ಮಹಿಳೆಯ ಈ ಭಾವ ಚಿತ್ರವನ್ನು ಪ್ರಾತ್ಯಕ್ಷಿಕೆಯ ಸಂದರ್ಭದಲ್ಲಿ ತೈಲ ವರ್ಣದಿಂದ ರಚಿಸಲಾಗಿದೆ. ಈ ಚಿತ್ರದಲ್ಲಿ ಮಹಿಳೆಯ ಭಾವನೆ ಮತ್ತು ನೆರಳು ಬೆಳಕಿನ ವಿನ್ಯಾಸವನ್ನು ಸುಂದರವಾಗಿ ಸೆರೆ ಹಿಡಿದಿದ್ದಾರೆ. ತೇಜಸ್ಸು ತುಂಬಿಕೊಂಡ ಕಣ್ಣುಗಳು, ಮಂದಹಾಸವನ್ನು ಬೀರುವ ನಗು ಭಾವನೆಯನ್ನು ವ್ಯಕ್ತಪಡಿಸುವ ಮುಖ, ಪರಿಣಾಮಕಾರಿಯಾಗಿ ಮೂಡಿಬಂದಿವೆ. ಕಂದು, ಕೆಂಪು, ಕೇಸರಿ, ಹಳದಿ, ಬಿಳಿ, ಕಪ್ಪುನೀಲಿ ವರ್ಣಗಳನ್ನು ಉಪಯೋಗಿಸಲಾಗಿದೆ. ಕ್ಯಾನ್‌ವಾಸ್ ಮೇಲೆ ಈ ಚಿತ್ರವನ್ನು ಚಿತ್ರಿಸಿದ್ದಾರೆ. ಇಲ್ಲಿ ರೂಪದರ್ಶಿ ತೊಟ್ಟಿರುವ ವಿಶಿಷ್ಟ ತಿಳುನೀಲಿ ವರ್ಣದ ಉಡುಪನ್ನು ಮತ್ತು ಬಿದ್ದಿರುವ ಮಡಿಕೆಗಳನ್ನು ಸುಂದರವಾಗಿ ತೋರಿಸಿದ್ದಾರೆ. ಹಿನ್ನಲೆಯ ಬಿಳಿ ವರ್ಣಕ್ಕೆ ಸ್ವಲ್ಪ ನೀಲಿ

ವರ್ಣದಿಂದ ಮಿಶ್ರಣಗೊಳಿಸಿ ನಯಗಾರಿಕೆಯನ್ನು ತಂದಿರುವುದನ್ನು ಇಲ್ಲಿ ಕಾಣ ಬಹುದಾಗಿದೆ.

**ವೆಂಕಟಾಚಲಪತಿಯವರ ಭಾವಚಿತ್ರ : ೨೦೦೬**

ಪಾಟೀಲರು ಭಾವ ಚಿತ್ರಗಳಲ್ಲಿ ನೈಜತೆಯ ಭಾವವನ್ನು ತುಂಬುವುದಲ್ಲದೆ ಅತ್ಯಂತ ಕ್ಷಿಪ್ರವಾಗಿ ರಚಿಸುತ್ತಾರೆ. ಅಂತಹ ವಿಧಾನದ ಭಾವಚಿತ್ರವಿದು. ಶಿಲ್ಪಕಲಾ ಅಕಾಡೆಮಿ ಅಧ್ಯಕ್ಷರಾಗಿದ್ದ ವೆಂಕಟಾಚಲಪತಿಯವರ ಯಥಾವತ್ತಾದ ಮುಖ ಭಾವವು ಇಲ್ಲಿ ರಚನೆಗೊಂಡಿದೆ. ಸೂಕ್ಷ್ಮ ವಿವರಗಳು, ನುಣುಪು ವರ್ಣಲೇಪನ ಇಲ್ಲಿ ಇರದೇ ಹೋದರೂ ವ್ಯಕ್ತಿಯ ಅಂಗಾಂಗಳಿಗೆ ಪೂರಕವಾದ ಬೀಸುಗಳನ್ನು ಬಳಸಿದ್ದು ಕಂಡು ಬರುತ್ತದೆ. ಹಿನ್ನಲೆಗೆ ನೀಲಿ ವರ್ಣದ ಲೇಪನವಿದೆ. ರೂಪದರ್ಶಿಯನ್ನು ಹಿನ್ನೆಲೆ ಬಣ್ಣದೊಂದಿಗೆ ಮಸುಕು ಗೊಳಿಸಿರುವುದರಿಂದ ಈ ಭಾವಚಿತ್ರ ವಿಶಿಷ್ಟವಾಗಿ ಮೂಡಿದೆ. ಬಳಸಿರುವ ವರ್ಣಗಳಲ್ಲಿ ಕಂದು, ಕೆಂಪು, ಹಸಿರು, ಕಪ್ಪು ಪ್ರಮುಖವಾಗಿವೆ. ನೆರಳು ಬೆಳಕಿನ ಛಾಯೆಯನ್ನು ಮೂಡಿಸಲಾಗಿದೆ. ಕೋಟನ್ನು ಕಂದು ವರ್ಣದ ಲೇಪನದಿಂದ ಪೂರೈಸಲಾಗಿದೆ.

**ಗೊಮ್ಮಟೇಶ್ವರ (ತೈಲವರ್ಣ) : ೨೦೦೬**

ಈ ಕಲಾಕೃತಿಯಲ್ಲಿ ತೈಲವರ್ಣದಿಂದ ಗೊಮ್ಮಟೇಶ್ವರನನ್ನು ರಚಿಸಲಾಗಿದೆ. ಮಾಡುವುದರಲ್ಲಿ ಬಹುಮುಖಪಾತ್ರ ವಹಿಸುತ್ತದೆ. ಬಾಹುಬಲಿ ಗೊಮ್ಮಟೇಶ್ವರನಾಗಿದ್ದು ಈತನ ಶಿಲ್ಪ ಚಿತ್ರಗಳು ಸಾಮಾನ್ಯವಾಗಿ ರಚಿಸಲಾಗುತ್ತಿದೆ. ಇಲ್ಲಿ ಪಾಟೀಲರು ಚಿತ್ರ ರೂಪದಲ್ಲಿ ಬಾಹುಬಲಿಯನ್ನು ರಚಿಸಿದ್ದಾರೆ. ತೈಲವರ್ಣದಿಂದ ರಚಿಸಿದ ಈ ಕಲಾಕೃತಿಯಲ್ಲಿ ಕಪ್ಪು, ಬಿಳಿ, ಹಳದಿ, ಕೆಂಪು ವರ್ಣವನ್ನು ಆಕೃತಿಗೆ ಬಳಸಿದ್ದಾರೆ. ಯಾವುದು ಶಾಶ್ವತವಲ್ಲ ಎಂಬುದೇ ಈ ಚಿತ್ರದ ಸಾರಾಂಶ. ಕಪ್ಪು ವರ್ಣವು ಮಾನವನ ಅಂಧಕಾರಬದುಕನ್ನು ಸಂಕೇತಿಸಿದರೆ ನಿಜವಾದ ಜೀವನವನ್ನು ಅರ್ಥಮಾಡಿಕೊಂಡಾಗ ಎಲ್ಲವನ್ನು ತ್ಯಜಿಸಿದಾಗ ತೀರ ಸೌಮ್ಯವಾದ ವರ್ಣಗಳು ಬಳಕೆಗೊಂಡಿರುವುದು ಕಂಡು ಬರುತ್ತದೆ. ಕತ್ತಲಿನಿಂದ ಬೆಳಕಿನೆಡೆಗೆಸಾಗುವ ಮನೋಭಾವವು ವ್ಯಕ್ತವಾಗುವಂತೆ ಕಂಡು ಬರುತ್ತದೆ. ಧ್ಯಾನದಲ್ಲಿ ಮಿಂದ ವ್ಯಕ್ತಿಯ ಮನಸ್ಸು ಶೂನ್ಯದಲ್ಲಿ ಕೇಂದ್ರಿತವಾದಂತೆ ಆಕೃತಿಯನ್ನು ಮಧ್ಯದಲ್ಲಿರಿಸಿ ಅದರ ಕೆಳಗೆ ಗೊಮ್ಮಟೇಶ್ವರನ ಪಾದಗಳನ್ನು ಹಳದಿ ವರ್ಣದಿಂದ ಸಂಯೋಜಿಸಲಾಗಿದೆ. ಹೀಗೆ ಆಕೃತಿಯು ಕಲಾವಿದನ ಸೃಜನಶೀಲ ಪ್ರವೃತ್ತಿಯನ್ನು ಸೂಚಿಸುತ್ತದೆ.

**ಗೊಮ್ಮಟೇಶ್ವರ (ತೈಲವರ್ಣ) : ೨೦೦೬**

ಹಿಂದಿನ ಚಿತ್ರದಂತೆ ಈ ಚಿತ್ರದಲ್ಲಿಯೂ ಸಹ ಗೊಮ್ಮಟೇಶ್ವರನನ್ನು ಮಧ್ಯದಲ್ಲಿರಿಸಿ ಸುತ್ತಲೂ ಸೃಜನಶೀಲ ಆಕಾರದ ಪಟ್ಟಿಕೆಗಳು ಜ್ಯಾಮಿತಿಯ ಆಕಾರವನ್ನು ತೈಲವರ್ಣದಲ್ಲಿ

ನಿರ್ಮಿಸಲಾಗಿದೆ. ಗೊಮ್ಮಟೇಶ್ವರ ಬಿಳಿಯ ವರ್ಣದಲ್ಲಿ ಸಂಯೋಜನೆಗೊಂಡರೆ ಸುತ್ತಲೂ ಹಳದಿ, ಕೆಂಪು, ಹಸಿರು ವರ್ಣದ ದೊಡ್ಡ ಪಟ್ಟಿಯು ಬಿಳಿಯ ಗೊಮ್ಮಟೇಶ್ವರನಿಗೆ ಮೆರಗನ್ನು ಕೊಟ್ಟಿದೆ. ಇದರ ಅರ್ಥವು ಕೂಡ ಜೀವನದ ಎಲ್ಲಾ ಸಮಸ್ಯೆಗಳಿಗೆ ಉತ್ತರವನ್ನು ಹುಡುಕಲು ಹೊರಟ ಮಾರ್ಗವಾಗದೆ. ಸುತ್ತಲೂ ಜೀವನದ ವಿವಿಧ ಸಮಸ್ಯೆಗಳನ್ನು ಹಲವು ವರ್ಣಗಳಿಂದ ಸಾಂಕೇತಿಕವಾಗಿ ವಿನ್ಯಾಸಗೊಳಿಸಲಾಗಿದೆ.

**ವ್ಯಕ್ತಿ ಭಾವಚಿತ್ರ : ೨೦೦೭**

ಪಾಟೀಲರು ತಮ್ಮ ಸ್ನೇಹಿತರೊಬ್ಬರನ್ನು ಭಾವ ಚಿತ್ರದಲ್ಲಿ ಒಡಮೂಡಿಸಿರುವುದು ಇಲ್ಲಿದೆ. ಪೇಸ್ಟಲ್ ಮಾಧ್ಯಮದಿಂದ ರಚಿಸಿದ ಚಿತ್ರ ಇದಾಗಿದೆ. ಮೊದಲು ಜಲವರ್ಣದಿಂದ ತೆಳುವಾಗಿ ಲೇಪನಮಾಡಿ ನಂತರ ಪೇಸ್ಟಲ್‌ನಿಂದ ತಿಕ್ಕಿ ವರ್ಣದಟ್ಟತೆ ತರಲಾಗಿದೆ. ರೂಪದರ್ಶಿಯ ಮುಖದಲ್ಲಿ ತೆಳು ಕೆಂಪು ವರ್ಣವು ಅಂದವನ್ನು ಹೆಚ್ಚಿಸಿದೆ. ಅಂಗಾಂಗಳಿಗೆ ಪೂರಕವಾಗಿ ಬಳಸಿರುವ ವರ್ಣವು ರೂಪದರ್ಶಿಯನ್ನು ನೈಜವಾಗಿ ಅನಾವರಣಗೊಳಿಸಿದೆ. ಚಿತ್ರದಲ್ಲಿ ಬೆಳಕಿನ ಭಾಗವು ಹೆಚ್ಚಾಗಿದೆ. ಹಿನ್ನೆಲೆಯಲ್ಲಿ ಬಿಳಿ ವರ್ಣದ ಬಳಕೆ ವಿಶಿಷ್ಟವಾಗಿದೆ.

**ಕತ್ತಲು : ೨೦೦೮**

ಈ ಚಿತ್ರವು ಅಕ್ರಾಲಿಕ್ ವರ್ಣದಿಂದ ರಚಿಸಲಾಗಿದೆ. ಒಬ್ಬ ಮಹಿಳೆಯು ಕತ್ತಲಲ್ಲಿ ಕುಳಿತಿದ್ದಾಳೆ. ನೈಜವಾಗಿರದಿದ್ದರೂ ವಿಶೇಷವಾಗಿ ತಮ್ಮ ಅಮೂರ್ತ ಶೈಲಿಯಲ್ಲಿ ಮೂಡಿಬಂದಿರುವ ಸ್ತ್ರೀಯ ಆಕಾರ ಪ್ರಮಾಣ ಬದ್ಧತೆಯನ್ನು ಹೊಂದಿದೆ. ಇಲ್ಲಿ ಕಪ್ಪು ವರ್ಣ ಪ್ರಾಧಾನ್ಯತೆಯನ್ನು ಪಡೆದಿದೆ. ಹಾಗೇ ಹಳದಿ ಮತ್ತು ಬಿಳಿಯವರ್ಣವನ್ನು ಇಲ್ಲಿ ವಿಶೇಷವಾಗಿ ಬಳಸಲಾಗಿದೆ. ಮೈಬಣ್ಣವನ್ನು ಬಿಳಿ ವರ್ಣದಿಂದ ನಿರ್ವಹಿಸಲಾಗಿದೆ. ಹಿನ್ನೆಲೆಯನ್ನು ಕಪ್ಪು ವರ್ಣದಿಂದ ರಚಿಸಲಾಗಿದೆ. ಸ್ತ್ರೀಯೊಬ್ಬಳು ಕತ್ತಲಲ್ಲಿ ಕುಳಿತು ಅಮವಾಸ್ಯೆಯ ರಾತ್ರಿಯಲ್ಲಿ ಯೋಚಿಸುವಂತೆ ತೋರುತ್ತಿದೆ. ಸ್ತ್ರೀಯ ಹಿಂದಿರುವ ಎಲ್ಲಾ ನೋವು ನಲಿವುಗಳು ಆಕೆಯ ಭಾವನೆಯಲ್ಲಿವೆ. ಕ್ಯಾನವಾಸನ್ನು ಕಪ್ಪು ವರ್ಣದಿಂದ ಲೇಪನ ಮಾಡಿ ನಂತರ ಅದರ ಮೇಲೆ ಬಿಳಿ ವರ್ಣದಿಂದ ಚಿತ್ರಿಸಿರುವ ತಂತ್ರಗಾರಿಕೆ ಇಲ್ಲಿದೆ. ಸ್ತ್ರೀಯ ಮೇಲ್ಭಾಗದಲ್ಲಿ ಬಿಳಿಯಾದ ಚಂದ್ರನಂತೆ ಸಾಂಕೇತಿಕ ಆಕಾರ ಸೃಷ್ಟಿಸಲಾಗಿದೆ.

**ಎರಡು ಸಾವಿರದಿಂದ ಎರಡು ಸಾವಿರದಾ ಹತ್ತರ ದಶಕದ ಕಲಾಕೃತಿಗಳ ವಿಶ್ಲೇಷಣೆ :**

ಮಾಗಿದ, ಪಕ್ವತೆಯಿಂದ ಕೂಡಿದ, ಅನುಭವಗಮ್ಯವಾದ ಪಾಕವನ್ನು ಎರಕ ಹೊಯ್ದು ರಚಿಸಿದ ವಿಶಿಷ್ಠ ಶೈಲಿಯನ್ನು ಪ್ರತಿನಿಧಿಸುವ ಕಲಾಕೃತಿಗಳು ಈ ದಶಕದಲ್ಲಿ ರಚನೆಯಾಗಿವೆ. ಎರಡು ಸಾವಿರದಿಂದ ಎರಡು ಸಾವಿರದ ಎಂಟನೇ ಇಸ್ವಿವರೆಗಿನ ಕಲಾಕೃತಿಗಳನ್ನು ಮಾತ್ರ

ಇಲ್ಲಿ ಅಧ್ಯಯನಕ್ಕೆ ಆಯ್ದುಕೊಳ್ಳಲಾಗಿದೆ. ಕಾರಣ ಅಧ್ಯಯನವನ್ನು ಬರವಣಿಗೆಗೆ ಅಳವಡಿಸುವ ಹಂತದಲ್ಲಿ ಎರಡು ಸಾವಿರದ ಎಂಟರವರೆಗಿನ ಕಲಾಕೃತಿಗಳು ಮಾತ್ರ ಲಭ್ಯವಾಗಿದ್ದವು. ಇಲ್ಲಿ ಈ ಅವಧಿಯ ಸುಮಾರು ನಲವತ್ತು ಕೃತಿಗಳನ್ನು ವಿಶ್ಲೇಷಣೆಗೆ ಒಳಪಡಿಸಲಾಗಿದೆ. ಈ ದಶಕದಲ್ಲಿಯೂ ಹಿಂದಿನ ವಸ್ತುವಿಷಯಗಳೇ ಮುಂದುವರೆದಿವೆಯಾದರೂ ಭಾವಚಿತ್ರ ಹಾಗೂ ನಿಸರ್ಗ ಚಿತ್ರಗಳನ್ನು ಅತೀ ಹೆಚ್ಚಿನ ಪ್ರಮಾಣದಲ್ಲಿ ರಚನೆ ಮಾಡಿದ್ದಾರೆ. ಈ ಹೊತ್ತಿಗಾಗಲೇ ಅವರು ನಾಡಿನ ಒಬ್ಬ ಖ್ಯಾತ ಭಾವಚಿತ್ರಕಲಾವಿದರಗಿ ರೂಪುಗೊಂಡಿರುವುದು ಅವರ ಕೃತಿಗಳಿಂದ ಕಂಡು ಬರುತ್ತದೆ. ಇದರ ಜೊತೆಗೆ ಅಮೂರ್ತ ಶೈಲಿಯ ನಿಸರ್ಗಚಿತ್ರಗಳು ಸಹಿತ ಈ ಸಂದರ್ಭದಲ್ಲಿ ಹೆಚ್ಚಿನ ಪ್ರಮಾಣದಲ್ಲಿ ಪಾಟೀಲರಿಂದ ರಚಿಸಲ್ಪಟ್ಟಿವೆ. ಜೊತೆಗೆ ಈ ದಶಕದಲ್ಲಿ ವಿಶೇಷವಾಗಿ ಮ್ಯೂರಲ್ ಕಲಾಕೃತಿಗಳನ್ನು ರಚಿಸಿರುವುದು ಇವರ ವೈವಿಧ್ಯ ಆಸಕ್ತಿಗಳನ್ನು ತೋರಿಸುತ್ತದೆ.

ಎಲ್ಲ ಕಾಲದಲ್ಲಿಯೂ ಸ್ತ್ರೀ ಚಿತ್ರಗಳು, ಭಾವಚಿತ್ರ, ನಿಸರ್ಗಚಿತ್ರ ಮತ್ತು ಪ್ರಸಿದ್ಧ ವ್ಯಕ್ತಿಗಳ ಭಾವಚಿತ್ರಗಳನ್ನು ರಚಿಸುತ್ತ ಬರದಿದ್ದರೂ ಈ ದಶಕದ ಕೃತಿಗಳು ಉತ್ತಮ ಮಟ್ಟದಲ್ಲಿವೆ. ಅನುಭವದ ಆಳ ಹೆಚ್ಚಾಗುತ್ತ ಹೋದಂತೆ ಸಂಕ್ಷಿಪ್ತತೆ ಮತ್ತು ಸಾಂಕೇತಿಕತೆಗಳು ವ್ಯಕ್ತಿಯಲ್ಲಿ ಕಂಡುಬರುತ್ತವೆ. ಇಂತಹ ಪರಿವರ್ತನೆ ಎಲ್ಲ ರಂಗಗಳಲ್ಲಿಯೂ ಕಂಡುಬರುತ್ತದೆ. ಸಾಹಿತ್ಯ ಮತ್ತು ಕಲಾ ಕ್ಷೇತ್ರದಲ್ಲಿ ಇದು ಇನ್ನಷ್ಟು ಪರಿಣಾಮಕಾರಿಯಾಗಿ ಗೋಚರಿಸುವುದು. ಅಂತಹ ಹಿನ್ನೆಲೆ ಕೃತಿಗಳು ಈ ದಶಕದಲ್ಲಿ ಪಾಟೀಲರಿಂದ ಮೂಡಿಬಂದಿವೆ.

ಎರಡು ಸಾವಿರದಿಂದ ಎರಡು ಸಾವಿರದಾ ಹತ್ತದವರೆಗಿನ ಈ ದಶಕದ ಕಲಾಕೃತಿಗಳಲ್ಲಿ ಮಳೆಗಾಲ, ತಂತ್ರ, ವೀಣೆ ನುಡಿಸುವ ಮಹಿಳೆ, ಗ್ರಾಮೀಣ ಮಹಿಳೆ, ಪತಿಪತ್ನಿ, ಮಹಿಳೆ ಮತ್ತು ಪರಿಸರ, ಮಹಿಳೆ ಮತ್ತು ಆಡು, ಮೂವರು ಸ್ತ್ರೀಯರು, ಗೊಮ್ಮಟೇಶ್ವರ, ಕತ್ತಲು ಮುಂತಾದ ಕೃತಿಗಳು ಮುಖ್ಯವಾಗಿವೆ. ಒಂದೇ ವಿಷಯದ ವಿವಿಧ ಕಲಾಕೃತಿಗಳು ಈ ಸಂದರ್ಭದಲ್ಲಿ ರಚನೆಯಾಗಿವೆ. 'ನಿಸರ್ಗ ಚಿತ್ರ' ಎಂಬ ಶಿಷಿಕೆಯ ಹನ್ನೆರಡು ಕೃತಿಗಳು ರಚನೆಯಾಗಿದ್ದು ಹಲವು ರೀತಿಯಲ್ಲಿವೆ. ಕೆಲವು ಜಲವರ್ಣದಿಂದ ಮತ್ತೆ ಕೆಲವು ತೈಲವರ್ಣದಿಂದ ಇನ್ನೂ ಕೆಲವು ಇಂಡಿಯನ್ ಇಂಕ್‌ನಿಂದ ಕೆಲವು ಮಿಶ್ರಮಾಧ್ಯಮದಿಂದಲೂ ರಚಿಸಲ್ಪಟ್ಟಿವೆ.

ಜಲವರ್ಣದಿಂದ ರಚಿಸಿದ ನಿಸರ್ಗ ಚಿತ್ರಗಳು ವರ್ಣದ ಹರಡುವಿಕೆಯ ವಿಧಾನದಿಂದ ರಚಿಸಿವೆ. ಕಾಗದವು ಹಸಿ ಇರುವಾಗ ವರ್ಣದ್ರವ್ಯಗಳನ್ನು ಲೇಪಿಸಿ ನೀರಿನೊಂದಿಗೆ ಹರಡಿಕೊಳ್ಳುವ ವಿಧಾನ ಇಲ್ಲಿದೆ. ಸಹಜವಾಗಿ ವರ್ಣ ಹರಡುವಿಕೆಯಿಂದ ಉಂಟಾದ ಅಮೂರ್ತ ಆಕಾರಗಳಿಗೆ ಒಂದು ರೂಪಕೊಟ್ಟು ಚಿತ್ರ ರಚಿಸಲಾಗಿದೆ. ಹಿಂದಿನ ದಶಕಗಳಿಗಿಂತ ಈ ದಶಕದಲ್ಲಿ ರಚನೆ

ಮಾಡಿದ ಈ ಬಗೆಯ ಚಿತ್ರಗಳು ಪ್ರೌಢವಾಗಿವೆ.

ತೈಲವರ್ಣದಲ್ಲಿ ರಚಿಸಿದ ನಿಸರ್ಗಚಿತ್ರಗಳು ಅಪಾರದರ್ಶಕ ವಿಧಾನವನ್ನು ಅನುಸರಿಸಿವೆ. ಕುಂಚದ ದಪ್ಪನಾದ ಲೇಪನಗಳಿಂದ ಅಮೂರ್ತಹಿನ್ನೆಲೆಯಲ್ಲಿ ಕೃತಿಗಳು ರಚಿಸಲ್ಪಟ್ಟವೆ. ಮಳೆಗಾಲ ಎಂಬ ಶಿರ್ಷಿಕೆಯ ಜಲವರ್ಣದ ಅಮೂರ್ತ ಕೃತಿಯಲ್ಲಿ ಬಣ್ಣಗಳ ಜಾರುವಿಧಾನವನ್ನು ಅನುಸರಿಸಲಾಗಿದೆ. ಕಪ್ಪಾದ ಮೋಡಗಳು, ಜೋರಾಗಿ ಬೀಳುತ್ತಿರುವ ಮಳೆ, ಆಕಾಶ ಭೂಮಿಗಳು ಒಂದಾಗಿರುವಂತೆ ಕಂಡುಬರುತ್ತಲಿದೆ. ವೀಣೆ ನುಡಿಸುತ್ತಿರುವ ಮಹಿಳೆ ಕಲಾಕೃತಿಯಲ್ಲಿ ನೈಜಶೈಲಿ ಕಂಡು ಬರದೇ ಅಮೂರ್ತವಾಗಿರುವ ಅಸ್ಪಷ್ಟವಾದ ಆಕಾರಗಳನ್ನು ಚಿತ್ರಿಸಲಾಗಿದೆ. ಗ್ರಾಮೀಣ ಸ್ತ್ರೀಯರ ಚಿತ್ರವು ರೇಖಾಪ್ರಧಾನವಾಗಿದೆ. ಇಲ್ಲಿ ರಚಿಸಲ್ಪಟ್ಟಿರುವ ಸ್ತ್ರೀಯರು ಪಾರಂಪರಿಕ ವೇಷಭೂಷಣಗಳಿಂದ ಅಲಂಕೃತರಾಗಿದ್ದಾರೆ. ಹಿನ್ನೆಲೆಯಲ್ಲಿ ಹಳ್ಳಿಯ ಪರಿಸರ, ಗಿಡಮರಗಳು, ವಸ್ತುಗಳು ಚಿತ್ರಿಸಿವೆ.

'ಪತಿಪತ್ನಿ' ಕೃತಿಯಲ್ಲಿ ನಗ್ನವಾಗಿರುವ ಇಬ್ಬರು ಸ್ತ್ರೀಪುರುಷರು ಮಿಥುನ ಕ್ರಿಯೆಯಲ್ಲಿ ತೊಡಗಿದ್ದಾರೆ. ಹಿನ್ನೆಲೆಯಲ್ಲಿ ಅಮೂರ್ತವಾಗಿರುವ ಪರಿಸರ ರಚಿಸಲ್ಪಟ್ಟಿದೆ. ಮಹಿಳೆ ಮತ್ತು ಪರಿಸರ ಮೂವರು ಮಹಿಳೆಯರು ಕೃತಿಗಳು ಸ್ತ್ರೀ ಸಂವೇದನೆಗಳನ್ನು ವ್ಯಕ್ತಪಡಿಸುತ್ತವೆ. ಮಹಿಳೆ ಮತ್ತು ಪ್ರಕೃತಿ ಎರಡೂ ಫಲವಂತಿಕೆಯ ಸಂಕೇತಗಳಾಗಿದ್ದು ಎರಡೂ ದಬ್ಬಾಳಿಕೆಗೆ ಒಳಗಾಗಿವೆ. ನಿರಂತರವಾಗಿ ಪ್ರಕೃತಿ ಮತ್ತು ಮಹಿಳೆಯ ಮೇಲೆ ಶೋಷಣೆ ಮಾಡಲಾಗುತ್ತದೆ ಎನ್ನುವ ಸಂದೇಶವನ್ನು ಇವು ನೀಡುತ್ತವೆ. ಈ ಎರಡೂ ಕಲಾಕೃತಿಗಳಲ್ಲಿ ರಚಿಸಲ್ಪಟ್ಟಿರುವ ಮಹಿಳೆಯರ ಆಕಾರಗಳು ನಗ್ನವಾಗಿವೆ. ಇದರಂತೆ ಇನ್ನುಳಿದ ಮಹಿಳಾ ಸಂಬಂಧಿ ಕೃತಿಗಳಲ್ಲಿಯೂ ಸಹಿತ ನಗ್ನ ಆಕಾರಗಳನ್ನು ರಚಿಸಿರುವುದು ಕಂಡುಬರುತ್ತದೆ.

ಪಾಟೀಲರು ಗ್ರಾಮೀಣ ಪ್ರದೇಶದವರಾಗಿರುವುದರಿಂದ ಅಲ್ಲಿನ ವೃತ್ತಿಗಳು ಅವರ ಕಲಾಕೃತಿಗಳಲ್ಲಿ ಅನಾವರಣಗೊಂಡಿವೆ. ಅದರಲ್ಲೂ ಆಡು ಕಾಯುವ ಮಹಿಳೆಯರು ನಿರಂತರವಾಗಿ ಇವರ ಮನಸ್ಸನ್ನು ಕಲಕಿ ಕಲಾಕೃತಿಗಳಲ್ಲಿ ಒಡಮೂಡಿದ್ದಾರೆ. ಪ್ರತಿ ದಶಕದಲ್ಲಿಯೂ ಆಡು ಕಾಯುತ್ತಿರುವ ಮಹಿಳೆಯರ ಚಿತ್ರಗಳನ್ನು ರಚಿಸಿದ್ದರೂ ಅವೆಲ್ಲ ಅವರ ಅನುಭವಗಳನ್ನಾಧರಿಸಿ ಭಿನ್ನ ಭಿನ್ನವಾಗಿ ಚಿತ್ರಿಸಲ್ಪಟ್ಟಿವೆ. ಈ ದಶಕದಲ್ಲಿಯೂ ಮಹಿಳೆಯರು ಆಡು ಕಾಯುತ್ತಿರುವ ಚಿತ್ರಗಳನ್ನು ರಚಿಸಿದ್ದು, ರೇಖಾ ಪ್ರಧಾನವಾಗಿವೆ. ಇಲ್ಲಿನ ಅಂತಹ ಒಂದು ಕೃತಿಯಲ್ಲಿ ಮೂವರು ಸ್ತ್ರೀಯರು ಕಾಡಿನಲ್ಲಿ ಗಿಡದ ಬುಡದಲ್ಲಿ ನಿಂತುಕೊಂಡಿದ್ದಾರೆ. ಅವರೆಲ್ಲ ಪಾರಂಪರಿಕ ವೇಷಭೂಷಣಗಳಿಂದ ಅಲಂಕೃತರಾಗಿದ್ದಾರೆ. ದೂರದಲ್ಲಿ ಆಡುಗಳು ಮೇಯುತ್ತಿವೆ. ಹಿನ್ನೆಲೆಯಲ್ಲಿ

ಗಿಡ, ಮರ, ಗುಡ್ಡ, ಬೆಟ್ಟ, ಹುಲ್ಲುಗಾವಲು ಸುಂದರವಾಗಿ ಮೂಡಿಬಂದಿದೆ.

'ಕತ್ತಲು' ಎಂಬ ಕೃತಿಯಲ್ಲಿ ಅಮೂರ್ತವಾಗಿರುವ ಮನುಷ್ಯಾಕಾರಗಳನ್ನು ರಚಿಸಲಾಗಿದ್ದು ಹಿನ್ನೆಲೆಯಲ್ಲಿ ಕತ್ತಲು ಆವರಿಸಿರುವಂತೆ ಕಪ್ಪು ಮತ್ತು ದಟ್ಟವರ್ಣಗಳನ್ನು ಲೇಪಿಸಲಾಗಿದೆ. ಮನುಷ್ಯನ ಬಾಳಿನಲ್ಲಿ ಕಷ್ಟಗಳು ಹೆಚ್ಚಾಗಿ ಬಂದಾಗ ಆತನ ಜೀವನ ಕತ್ತಲಾವರಿಸಿರುವಂತೆ ಭಾಸವಾಗುತ್ತದೆ ಎಂಬುದನ್ನು ತೋರಿಸಲು ಕಪ್ಪು ವರ್ಣವನ್ನು ಸಾಂಕೇತಿಕವಾಗಿ ಲೇಪಿಸಲಾಗಿದೆ. ಈ ದಶಕದ ವಿಭಿನ್ನ ಕಲಾಕೃತಿಗಳೆಂದರೆ, ಗೊಮ್ಮಟೇಶ್ವರ ಚಿತ್ರಗಳಾಗಿವೆ. ಇಲ್ಲಿ ಎರಡು ಕೃತಿಗಳನ್ನು ಪರಿಗಣಿಸಲಾಗಿದೆ. ಗೊಮ್ಮಟೇಶ್ವರನನ್ನು ಮಧ್ಯದಲ್ಲಿ ನಿಲ್ಲಿಸಿ ಆತನ ಸುತ್ತಲೂ ಚಿಕ್ಕ ಆಕಾರದ ಗೊಮ್ಮಟ ಮೂರ್ತಿಗಳನ್ನು ಚಿತ್ರಿಸಲಾಗಿದೆ. ಮಧ್ಯದಲ್ಲಿ ಬೃಹತ್ ಪ್ರಮಾಣದ ಪಾದಗಳಿದ್ದು ಸುತ್ತಲೂ ಹಾವಿನ ಹುತ್ತುಗಳು ಆವರಿಸಿವೆ. ವರ್ಣಲೇಪನವು ತಂಪು ಅನುಭವ ಕೊಡುವಂತೆ ಲೇಪಿಸಿರುವುದು ಪಾಟೀಲರ ಕಲಾ ಪಕ್ವತೆಯನ್ನು ಬಿಂಬಿಸುತ್ತದೆ.

ಎಂದಿನಂತೆ ಈ ದಶಕದಲ್ಲಿಯೂ ಮಿತ್ರರು, ಪ್ರಸಿದ್ಧರು ಇವರ ಕುಂಚಗಳಿಂದ ರೂಪು ಪಡೆದಿದ್ದಾರೆ. ಅಂತಹ ಭಾವಚಿತ್ರಗಳಲ್ಲಿ ಕೆ.ಎಸ್.ರಾಮಚಂದ್ರನ್, ಹಾಗೂ ಶಿಲ್ಪಕಲಾ ಅಕಾಡೆಮಿ ಅಧ್ಯಕ್ಷರಾಗಿದ್ದ ವೆಂಕಟಾಚಲಪತಿಯವರ ಚಿತ್ರಗಳು ಪ್ರಮುಖವಾಗಿವೆ. ಮತ್ತೆ ಕೆಲವು ವ್ಯಕ್ತಿ ಚಿತ್ರಗಳು ಬೇರೆ ಬೇರೆ ಛಾಯಾ ಚಿತ್ರಗಳ ಆಧಾರದಲ್ಲಿ ರಚನೆಗೊಂಡಿದ್ದರೆ, ಇನ್ನೂ ಕೆಲವು ಗ್ರಾಮೀಣ ಪುರುಷರು ಮತ್ತು ಸ್ತ್ರೀಯರನ್ನು ಕುರಿತಾಗಿವೆ. ಇವುಗಳಲ್ಲಿ ಕೆಲವು ಭಾವಚಿತ್ರಗಳು ನೈಜಶೈಲಿಯಲ್ಲಿ ರಚನೆಗೊಂಡಿದ್ದರೆ, ಮತ್ತೆ ಕೆಲವು ಅಮೂರ್ತ ಶೈಲಿಯಲ್ಲಿ ರಚಿಸಿವೆ. ಅದೇ ಪ್ರಕಾರ ವರ್ಣ ಲೇಪನದಲ್ಲಿ ಕೆಲವು ಸಂದರ್ಭದಲ್ಲಿ ಪಾರದರ್ಶಕ ವಿಧಾನದಿಂದ ಲೇಪನ ಮಾಡಿದ್ದರೆ. ಮತ್ತೆ ಕೆಲವು ಭಾವಚಿತ್ರಗಳಲ್ಲಿ ಅಪಾರದರ್ಶಕ ವಿಧಾನ ಅನುಸರಿಸಲಾಗಿದೆ. ಇಲ್ಲಿ ರಚನಾವಿಧಾನವೂ ವಿಭಿನ್ನವಾಗಿದೆ. ಕೆಲವು ಸೂಕ್ಷ್ಮವಿವರಗಳಿಂದ ಕೂಡಿದ್ದರೆ, ಇನ್ನುಳಿದವು ಕುಂಚದ ದೊಡ್ಡ ದೊಡ್ಡ ಎಳೆತಗಳಿಂದ ಪೂರ್ಣಗೊಂಡಿವೆ. ಜಲವರ್ಣ, ತೈಲವರ್ಣ, ಪೇಸ್ಟಲ್, ಮಿಶ್ರಮಾಧ್ಯಮಗಳು ಇಲ್ಲಿ ಬಳಕೆಗೊಂಡಿವೆ.

'ತಂತ್ರ' ಎಂಬ ಕೃತಿಯಲ್ಲಿ ಪಾಟೀಲರು ಹಲವಾರು ಸಂಕೇತಗಳನ್ನು ಬಳಸಿದ್ದಾರೆ. ಇಲ್ಲಿ ವ್ಯಕ್ತಿಗಳು ಚರ್ಚೆಯಲ್ಲಿ ತೊಡಗಿದ್ದು ಹಿನ್ನೆಲೆಯಲ್ಲಿ ವಿವಿಧ ಬಗೆಯ ಸಂಕೇತಗಳು ರಚನೆಗೊಂಡಿವೆ. ಇಲ್ಲಿ ಯಾವುದೇ ಆಕಾರ, ಅಥವಾ ಹಿನ್ನೆಲೆಯ ಸಂಕೇತಗಳು ಸ್ಪಷ್ಟವಾಗಿರುವ ವಿನ್ಯಾಸವನ್ನು ಹೊಂದಿರದೇ ಇದ್ದರೂ ನಿಗೂಢವಾದ ಅರ್ಥವಂತಿಕೆಯನ್ನು ಒಳಗೊಂಡಂತೆ ತೋರುತ್ತದೆ. ಪ್ರಾಗೈತಿಹಾಸ ಚಿತ್ರಗಳಲ್ಲಿ ಕಂಡುಬರುವ ಅರ್ಥೈಯಿಸಲಾರದ ಮಂಡಲ ಚಿತ್ರವನ್ನು

ಇದು ನೆನಪಿಸುತ್ತದೆ.

ಹಿಂದಿನ ದಶಕದ ಭಾವಚಿತ್ರಗಳಲ್ಲಿ ಕಂಡುಬರುವ ರಚನಾ ವಿಧಾನಕ್ಕೂ ಈ ದಶಕದ ಭಾವಚಿತ್ರ ರಚನಾ ವಿಧಾನಕ್ಕೂ ಸಂಪೂರ್ಣ ಭಿನ್ನತೆ ಇದೆ. ಹಿಂದಿನ ಭಾವಚಿತ್ರಗಳಲ್ಲಿ ಸೂಕ್ಷ್ಮವಿವರಗಳನ್ನು ಕುಂಚಗಳ ಚಿಕ್ಕ ಚಿಕ್ಕ ಲೇಪನಗಳಿಂದ ಹಾಗೂ ನೆರಳು ಬೆಳಕಿನ ಮೂಲಕ ಪೂರೈಸುತ್ತ ಬಂದಿದ್ದರೆ, ಈ ದಶಕದಲ್ಲಿ ಕುಂಚದ ದೊಡ್ಡ ದೊಡ್ಡ ಎಳೆತಗಳಿಂದ ಸೂಕ್ಷ್ಮ ವಿವರಗಳನ್ನು ಮರೆಮಾಚಿ ಚಿತ್ರಿಸಲಾಗಿದೆ. ಈ ಸಂದರ್ಭದಲ್ಲಿ ಒಂದೇ ವರ್ಣದಲ್ಲಿ ವಿವಿಧ ಛಾಯೆಗಳನ್ನು ಉಂಟು ಮಾಡುವ ವಿಶಿಷ್ಟ ವಿಧಾನವನ್ನು ಕಂಡುಕೊಂಡಿರುವುದು ಕೃತಿಗಳಿಂದ ತಿಳಿದು ಬರುತ್ತದೆ. ಒಟ್ಟಾರೆ ಈ ದಶಕದ ಕೃತಿಗಳನ್ನು ಅವಲೋಕಿಸಿದಾಗ ಮಾಗಿದ ಪ್ರೌಢತೆ, ಪಕ್ವತೆ, ಅನುಭವದ ಅನಾವರಣಗಳು ಮುಪ್ಪರಿಗೊಂಡಿರುವುದು ಗೋಚರಿಸುತ್ತದೆ.

**ಸಮಗ್ರ ಚಿತ್ರಗಳ ವಿಶ್ಲೇಷಣೆ :**

ಎಂ. ಬಿ. ಪಾಟೀಲರ ಒಟ್ಟು ಕಲಾಕೃತಿಗಳನ್ನು ಮೇಲಿನಂತೆ ದಶಕವಾರು ವಿಂಗಡಣೆ ಮಾಡಿ ವಿಶ್ಲೇಷಣೆಗೆ ಒಳಪಡಿಸಿದಾಗ ಹಲವಾರು ಮಹತ್ವದ ಅಂಶಗಳು ಕಂಡುಬರುತ್ತವೆ. ವ್ಯಕ್ತಿಯೊಬ್ಬನು ಬೆಳವಣಿಗೆ ಹೊಂದಿದಂತೆ ಆತನ ವಯಸ್ಸು ಮತ್ತು ಬುದ್ಧಿಮಟ್ಟಗಳು ಬೆಳೆಯುವುದರ ಜೊತೆಗೆ ಅನುಭವದ ಪಕ್ವತೆಯಿಂದಾಗಿ ಆಂತರಿಕ ವಿಚಾರಗಳು ಮಾಗುತ್ತವೆ. ಈ ಹಿನ್ನೆಲೆಯಲ್ಲಿ ಅವರ ಕ್ರಿಯಾ ಚಟುವಟಿಕೆಗಳು ಸಹಿತ ಮೌಲಿಕತೆಯನ್ನು ಪಡೆದುಕೊಳ್ಳುತ್ತ ಸಾಗುತ್ತದೆ. ಹಾಗಾಗಿ ಬೆಳವಣಿಗೆಗೆ ಅನುಸಾರವಾಗಿ ದಶಕವಾರು ವಿಂಗಡಿಸಿಕೊಂಡು ವಿಶ್ಲೇಷಿಸಲಾಗಿದೆ.

ಯಾವುದೇ ವಸ್ತುವನ್ನು ಅಥವಾ ದೃಶ್ಯವನ್ನು ಇಲ್ಲವೆ ವ್ಯಕ್ತಿಯನ್ನು ಎಲ್ಲ ಕಾಲದಲ್ಲಿಯೂ ಒಂದೇ ತೆರನಾಗಿ ಪರಿಭಾವಿಸಲಿಕ್ಕೆ ಆಗಲಾರದು. ಪ್ರತಿವಸ್ತು, ಪ್ರತಿಜೀವಿ, ಘಟನಾವಳಿಗಳು ಕ್ಷಣಕ್ಷಣಕ್ಕೂ ಬದಲಾಗುತ್ತ ಸಾಗುವುದು ಪ್ರಕೃತಿ ನಿಯಮವಾಗಿದೆ. ಇಂತಹ ಬದಲಾವಣೆಯನ್ನು ಕಲಾವಿದರು ತಮ್ಮ ಕೃತಿಗಳ ಮೂಲಕ ಸೆರೆಹಿಡಿಯಬೇಕು ಎನ್ನುವುದು ಇಂಪ್ರಸ್‌ನೀಸಂ, ಕಲಾಪಂಥದವರ ನಿಲುವಾಗಿತ್ತು[8] ಅಲ್ಲದೇ ಒಂದು ವಸ್ತು ಒಬ್ಬನೇ ವ್ಯಕ್ತಿಗೆ ಎಲ್ಲ ಸಂದರ್ಭಗಳಲ್ಲಿ ಒಂದೇ ರೀತಿಯಾಗಿ ತೋರಿಬರುವದಿಲ್ಲ ಕಾಲ ಬದಲಾದಂತೆ ಅದನ್ನು ನೋಡುವ ಮತ್ತು ಪರಿಭಾವಿಸುವ ರೀತಿ ಸಹಿತ ಬೇರೆಯಾಗುತ್ತದೆ. ಹಾಗಾಗಿ ಈ ಬದಲಾವಣೆಯನ್ನು ಕಲಾವಿದರು ಚಿತ್ರಿಸಬೇಕೆಂದು ಎಕ್ಸಪ್ರೆಸ್‌ನೀಸಂ ಕಲಾ ಪಥದವರ ನಿಲುವಾಗಿತ್ತು[9] ಎಂಬುದನ್ನು ನಾವಿಲ್ಲಿ ನೆನಪಿಸಿಕೊಳ್ಳಬಹುದು.

೫. ಎನ್. ಮರಿಶಾಮಾಚಾರ್ : ಕಲಾಕೋಶ : ಪುಟ-೩೭೦
೬. ನೇಮಿರಾಜ ಶೆಟ್ಟಿ : ಪೋಸ್ಟ ಮಾಡರ್ನಿಜಂ : ಪುಟ-೨೬

ಈ ನಿಟ್ಟಿನಲ್ಲಿಯೇ ಪಾಟೀಲರ ಕೃತಿಗಳನ್ನು ದಶಕವಾರು ವಿಂಗಡಿಸಿಕೊಂಡು ಕಾಲಕಾಲಕ್ಕೆ ಒಂದು ವಸ್ತು ಅವರ ಕೃತಿಗಳಲ್ಲಿ ಹೇಗೆ ಬದಲಾವಣೆ ಹೊಂದುತ್ತ ಬಂದಿತು ಎಂಬುದನ್ನು ಗಮನಿಸಲಾಗಿದೆ. ಅಲ್ಲದೇ ಕಾಲದಿಂದ ಕಾಲಕ್ಕೆ ಚಿತ್ರರಚನಾ ವಿಧಾನಗಳು, ಚಿತ್ರಶೈಲಿ, ಸಂಯೋಜನಾ ರೀತಿ, ಅಭಿವ್ಯಕ್ತಿ ಪಡಿಸುವ ಪರಿಕಲ್ಪನೆಗಳು ಹೇಗೆ ಪಕ್ವತೆಯನ್ನು ಪಡೆಯುತ್ತ ಬಂದವು ಎಂಬುದನ್ನು ಕಂಡುಕೊಳ್ಳಲಾಗಿದೆ.

ವಿದ್ಯಾರ್ಥಿ ಹಂತದ ರಚನೆಯಲ್ಲಿ ಪ್ರಭಾವ ಬೀರಿದ ಕಲಾ ಶಿಕ್ಷಕರ ಅನುಕರಣೆಗಳು, ಆ ಸಂದರ್ಭದಲ್ಲಿ ಹೆಚ್ಚು ಪ್ರಚಲಿತದಲ್ಲಿದ್ದ ಕಲಾಶೈಲಿಗಳ ಪ್ರಭಾವಕ್ಕೆ ಒಳಗಾಗಿರುವುದು ಕಂಡು ಬರುತ್ತದೆ. ಎಂ. ಬಿ. ಪಾಟೀಲರು ಮುಂಬೈನ ನೂತನ ಕಲಾಮಂದಿರದ ವಿದ್ಯಾರ್ಥಿಯಾಗಿದ್ದು ಅದರ ಮುಖ್ಯಸ್ಥರಾಗಿದ್ದ ಕಲಾಗುರು ಜಿ.ಎಸ್.ದಂಡಾವತಿಮಠ ಅವರ ಪ್ರಭಾವ ಪಾಟೀಲರ ಭಾವಚಿತ್ರಗಳಲ್ಲಿ ಕಂಡುಬರುತ್ತದೆ. ನುಣುಪಾಗಿರುವ ವರ್ಣಲೇಪನ, ಪ್ರಭಾವಕಾರಿಯಾಗಿರುವ ನೆರಳು ಬೆಳಕಿನ ವಿನ್ಯಾಸ, ಸೂಕ್ಷ್ಮವಿವರಗಳು ಪ್ರಾರಂಭಿಕ ಚಿತ್ರಗಳಲ್ಲಿ ಕಂಡುಬರುತ್ತವೆ. ಅಲ್ಲದೆ ಮುಂಬೈ ಪ್ರಾಂತ್ಯದಲ್ಲಿ ಪ್ರತ್ಯೇಕವಾದ ಅಕಾಡಮಿಕ್ ಶೈಲಿಯೊಂದು ಅಂದಿನ ದಿನಗಳಲ್ಲಿ ಪ್ರಚಲಿತದಲ್ಲಿದ್ದು ಅದರ ಪ್ರಭಾವಕ್ಕೆ ಸಹಿತ ಪಾಟೀಲರ ಪ್ರಾರಂಭಿಕ ಚಿತ್ರಗಳು ಒಳಗಾಗಿವೆ.

ದಶಕದಿಂದ ದಶಕಕ್ಕೆ ಅವರ ಚಿತ್ರರಚನಾ ಶೈಲಿ, ವಿಷಯವನ್ನು ನಿರೂಪಿಸುವ ರೀತಿ, ವರ್ಣವಿನ್ಯಾಸ, ರೇಖೆಯ ಹರವು ಎಲ್ಲವೂ ಬದಲಾಗುತ್ತ ಬಂದಿರುವುದು ತಿಳಿದುಬರುತ್ತದೆ. ಈಗಾಗಲೇ ಗಮನಿಸಿದಂತೆ ಪ್ರಾರಂಭಿಕ ದಶಕದ ಕೃತಿಗಳು ವಿವರಣಾಯುಕ್ತವಾಗಿವೆ. ಎರಡನೆಯ ದಶಕದ ಕಲಾಕೃತಿಗಳಲ್ಲಿ ತನ್ನತನವನ್ನು ಕಂಡುಕೊಳ್ಳುವ ಪ್ರಯತ್ನ ದಟ್ಟವಾಗಿದೆ. ಜೊತೆಗೆ ತಾರುಣ್ಯದ ಆ ದಿನಗಳಲ್ಲಿ ಸಹಜವಾಗಿರುವ ಭಾವನಾತ್ಮಕ ಸಂಗತಿಗಳ ಬಗ್ಗೆ ಸಂಬಂಧಿಸಿರುವ ಕೃತಿಗಳು ರಚನೆಗೊಂಡಿವೆ. ಸ್ತ್ರೀ ಪ್ರೇಮ, ಪ್ರೀತಿ, ಕಾಮ, ಸೌಂದರ್ಯ, ತನ್ನತನವನ್ನು ತೋರಿಸಿಕೊಳ್ಳುವ ನಿಲುವುಗಳು ಈ ವಯಸ್ಸಿನಲ್ಲಿ ಸಹಜವಾಗಿದ್ದು ಅಂತಹ ವಿಷಯಕ್ಕೆ ಸಂಬಂಧಿಸಿರುವ ಚಿತ್ರಗಳು ಈ ದಶಕದಲ್ಲಿ ಪಾಟೀಲರಿಂದ ರಚನೆಯಾಗಿವೆ.

ಮಹಿಳೆಯ ಕನಸು, ಪ್ರೇಮ, ನಗ್ನಸ್ತ್ರೀ, ಪ್ರಕೃತಿ ಮತ್ತು ಸ್ತ್ರೀ, ಇವುಗಳನ್ನು ನೋಡಿದಾಗ ಇದು ಮನದಟ್ಟಾಗುತ್ತದೆ. ಅಲ್ಲದೆ ದುಡಿಯಬೇಕು, ಸುಂದರವಾದ ಹೆಂಡತಿಯೊಂದಿಗೆ ಬದುಕು ಸಾಗಿಸಬೇಕು, ಜೀವನದಲ್ಲಿ ಬರುವ ಕಷ್ಟನಷ್ಟಗಳನ್ನು ಹೇಗೆ ಎದುರಿಸಬೇಕು, ಬದುಕಿಗಾಗಿ ಯಾವ

ವೃತ್ತಿ ಅವಲಂಬಿಸಬೇಕು ಎಂಬಂತಹ ಸಂಗತಿಗಳು ಸಹಿತ ಈ ವಯೋಮಾನದಲ್ಲಿ ಸಹಜವಾಗಿರುತ್ತವೆ. ಅವುಗಳನ್ನಾಧರಿಸಿಯೂ ಪಾಟೀಲರು ಈ ದಶಕದಲ್ಲಿ ಚಿತ್ರಿಸಿದ್ದಾರೆ.

ಮೂರನೆಯ ದಶಕದಲ್ಲಿನ ಕೃತಿಗಳಲ್ಲಿ ಪ್ರೌಢತೆಯೆಡೆಗೆ ಸಾಗುತ್ತಿರುವ ಸೂಚನೆಗಳು ಕಂಡುಬರುತ್ತವೆ. ಮದುವೆಯ ನಂತರ ಸಾಂಸಾರಿಕ ಬದುಕಿನಲ್ಲಿ ಭದ್ರತೆಯ ವಿಚಾರಗಳ ಜೊತೆಗೆ ವಿರಹ, ನೋವು, ನಲಿವು, ಸುಖ, ದುಖಃ ಇವೆಲ್ಲ ವಿಚಾರಗಳು ಸಾಮಾನ್ಯವಾಗಿದ್ದು ಅಂತಹ ಸಂಗತಿಗಳ ಹಿನ್ನೆಲೆಯಲ್ಲಿ ಈ ದಶಕದ ಕೃತಿಗಳು ರಚಿಸಲ್ಪಟ್ಟಿವೆ. ರೈತನ ಕುಟುಂಬ, ಸ್ವಭಾವಚಿತ್ರ, ವಿರಹ, ದೋಣಿ, ರಾತ್ರಿ, ಬದುಕಿನ ಕರಾಳತೆ, ಯೋಚನೆಯಲ್ಲಿ ಕುಳಿತ ಸ್ತ್ರೀ, ಸಂಗಾತಿ ನೆನಪು, ದಂಪತಿಗಳು ಎನ್ನುವ ಕೃತಿಗಳಲ್ಲಿ ಈ ರೀತಿಯ ಆಶಯಗಳು ಕಂಡುಬರುತ್ತವೆ.

ಪಾಟೀಲರು ಗ್ರಾಮೀಣ ಬದುಕಿನ ಸೊಗಡನ್ನು ಉಂಡು ಬೆಳೆದವರಾಗಿರುವುದರಿಂದ ಅಂತಹ ಹಿನ್ನೆಲೆಯ ಕೃತಿಗಳು ಹೆಚ್ಚಾಗಿ ರಚನೆಗೊಂಡಿವೆ. ತಾವು ಆಡಿ, ಹಾಡಿ, ಬೆಳೆದ ಹಳ್ಳಿಯ ಪರಿಸರ, ಬಾಲ್ಯದ ನೆನಪುಗಳು ಅವರನ್ನು ಸದಾಕಾಲ ಕಾಡಿವೆ. ಹಾಗಾಗಿಯೇ ಅವರ ಹೆಚ್ಚಿನ ಕೃತಿಗಳಲ್ಲಿ ಹಳ್ಳಿಯ ಪರಿಸರ, ಅಲ್ಲಿನ ಸಂಸ್ಕೃತಿ, ಜೀವನ ವಿಧಾನ ಮುಂತಾದವು ಬಾರಿ ಬಾರಿ ಒಡಮೂಡಿವೆ. ಜಾಗತಿಕವಾಗಿ ಪ್ರಖ್ಯಾತರಾಗಿರುವ ಹೆಚ್ಚಿನ ಕಲಾವಿದರು ತಮ್ಮ ಚಿತ್ರಗಳಿಗೆ ಗ್ರಾಮೀಣ ಪರಿಸರ, ಪರಂಪರೆ, ಅಲ್ಲಿನ ಜೀವನ ವಿಧಾನ, ಅಲ್ಲಿನ ಜನಪದ ಕಲೆಗಳಿಂದ ಪ್ರೇರಣೆ ಪಡೆದಿರುವುದು ಕಂಡುಬರುತ್ತದೆ.

ಪಾಬ್ಲೋ ಪಿಕಾಸೋ 'ಅರ್ಲೆಸ್' ಹಳ್ಳಿ ಪರಿಸರ ಮತ್ತು ಅಲ್ಲಿನ ಜನಪದ ಚಿತ್ರಕಲೆಯಿಂದ ಪ್ರಭಾವಿತನಾಗಿ[೭] ಕ್ಯೂಬಿಜಂ ಶೈಲಿಯ ಕಡೆಗೆ ಆಕರ್ಷಿತನಾಗಿರುವಂತೆ ವಿನ್ಸೆಂಟ್ ವ್ಯಾನ್‌ಗಾಗ್ ಸಹಿತ ಹಳ್ಳಿಯ ಪರಿಸರದಲ್ಲಿಯೇ ತನ್ನ ಬದುಕನ್ನು ರೂಪಿಸಿಕೊಂಡವನಾಗಿದ್ದಾನೆ.[೮] ಪಾಲ್‌ಗಾಗಿನ್‌ನ ಕಲಾಶೈಲಿಗೆ ಮಹತ್ವ ಬಂದದ್ದೇ ಆತ ತಾಹಿತಿ ದ್ವೀಪದ ಜನಾಂಗ ಮತ್ತು ಅಲ್ಲಿನ ಪರಿಸರ, ಸಂಸ್ಕೃತಿಗಳನ್ನು ಚಿತ್ರಿಸಿದ ಮೇಲೆ ಎಂಬುವುದು ಗಮನಿಸುವ ಅಂಶವಾಗಿದೆ.[೯] ಅದೇ ರೀತಿ ಕರ್ನಾಟಕದ ಖ್ಯಾತ ಚಿತ್ರಕಾರರಲ್ಲಿ ಒಬ್ಬರಾಗಿದ್ದ ಆರ್.ಎಂ.ಹಡಪದ ಅವರು ಸಹಿತ ಗ್ರಾಮೀಣ ಪರಿಸರದಿಂದ ಪ್ರಭಾವಿತಗೊಂಡಿರುವುದು ಅವರ ಕೃತಿಗಳಿಂದ ತಿಳಿದು ಬರುತ್ತದೆ. ತಾವು ಹುಟ್ಟಿ ಬೆಳೆದ ಬಾದಾಮಿ ಪ್ರದೇಶದ ಜನಜೀವನ, ಅಲ್ಲಿಯ ಗುಡ್ಡ ಬೆಟ್ಟಗಳು ಅವರ ಪ್ರೇರಕ ಶಕ್ತಿಯಾಗಿದ್ದವು. ಮತ್ತೊಬ್ಬ ಖ್ಯಾತ ಕಲಾವಿದರಾದ ಶಂಕರಗೌಡ ಬೆಟದೂರ

---

೭. ಎನ್. ಮರಿಶಾಮಾಚಾರ್ : ದೃಶ್ಯಕಲಾವಿದರು : ಪುಟ-೪೦
೮. ಎನ್. ಮರಿಶಾಮಾಚಾರ್ : ಚಿತ್ರಕಲಾ ಪ್ರಪಂಚ : ಪುಟ-೧೨೯
೯. ಬಿ. ಪಿ. ಬಾಯಿರಿ : ಪಾಶ್ಚಾತ್ಯ ಕಲೆ ಮತ್ತು ಕಲಾವಿದರು : ಪುಟ-೭೮

ಸಹಿತ ಗ್ರಾಮೀಣ ಪರಿಸರವನ್ನು ಪ್ರೀತಿಸಿ ಅದನ್ನು ಕಲೆಯಲ್ಲಿ ಅಳವಡಿಸಿಕೊಂಡವರಾಗಿದ್ದಾರೆ. ಈ ಹಿನ್ನೆಲೆಯಲ್ಲಿ ಎಂ. ಬಿ. ಪಾಟೀಲರು ಸಹಿತ ಗ್ರಾಮೀಣ ಪರಿಸರ, ಸಂಸ್ಕೃತಿ, ಜನಜೀವನಗಳಿಂದ ನಿರಂತರ ಸ್ಫೂರ್ತಿ ಪಡೆದವರಾಗಿದ್ದಾರೆ ಎಂದು ಹೇಳಬಹುದು. ಅವರ

ಈ ಬಗೆಯ ಕೃತಿಗಳಲ್ಲಿ ವೈವಿಧ್ಯತೆ ಇದೆ. ಹಳ್ಳಿಯ ಪರಿಸರಕ್ಕೆ ಸಂಬಂಧಿಸಿದಂತೆ ರಚನೆಗೊಂಡ ಕೃತಿಗಳಲ್ಲಿ 'ನಿಸರ್ಗ ಚಿತ್ರ' ಎಂಬ ಶಿರ್ಷಿಕೆಯ ಅಡಿಯಲ್ಲಿ ಹಳ್ಳಿಯ ಪರಿಸರವನ್ನು ಆಧುನಿಕ ಶೈಲಿಯಲ್ಲಿ ಅಮೂರ್ತವಾಗಿ ಅನಾವರಣಗೊಳಿಸಿದ್ದಾರೆ. ಪ್ರಾರಂಭಿಕ ಹಂತದ ಕೃತಿಗಳು ಮೂರ್ತವಾಗಿದ್ದರೆ, ಬರುಬರುತ್ತ ಅಮೂರ್ತದೆಡೆಗೆ ಸಾಗಿವೆ. ಅಲ್ಲಿನ ಮನೆಗಳು, ಗುಡಿಸಲುಗಳು, ಗಿಡಮರಗಳು, ಗುಡ್ಡಬೆಟ್ಟಗಳು, ಹುಲ್ಲುಗಾವಲು, ದನಕರುಗಳು, ಆಡು, ಕುರಿ, ಕೋಳಿಗಳು, ಹೊಲ, ಗದ್ದೆಗಳು ಹೀಗೆ ಹತ್ತು ಹಲವು ಸಂಗತಿಗಳು ಚಿತ್ರಿಸಲ್ಪಟ್ಟಿವೆ. ಅದರಂತೆ ಅಲ್ಲಿನ ಸಂಪ್ರದಾಯಗಳಿಗೆ ಸಂಬಂಧಿಸಿದಂತೆ ಇರುವ ಚಿತ್ರಗಳಲ್ಲಿ ಮದುವೆ, ಹಾಡು, ಕುಣಿತ, ಉತ್ಸವ, ಜಾತ್ರೆಯಂತಹ ವಿಷಯಗಳಿಗೆ ಸಂಬಂಧಿಸಿದ ಕೃತಿಗಳು ರಚನೆಗೊಂಡಿವೆ.

ಪಾಟೀಲರು 'ಸ್ತ್ರೀ' ನಿಲುವುಗಳ ಕುರಿತಾಗಿ ಹಲವಾರು ಕೃತಿಗಳನ್ನು ರಚಿಸಿದ್ದಾರೆ. ಇಲ್ಲಿಯೂ ಅವರ ವಯೋಮಾನ ಬೆಳವಣಿಗೆಯಾದಂತೆ ಸ್ತ್ರೀಯನ್ನು ನೋಡುವ ಅವರ ದೃಷ್ಟಿಕೋನಗಳು ಬದಲಾಗುತ್ತ ಬಂದಿರುವುದು ಕಂಡುಬರುತ್ತದೆ. ಪ್ರಾರಂಭಿಕ ಹಂತದಲ್ಲಿ ತಾಯಿ ಮಗು, ವಿಷಯದ ಮೇಲೆ ಚಿತ್ರಗಳು ರಚಿಸಲ್ಪಟ್ಟಿದ್ದರೆ, ತಾರುಣ್ಯದಲ್ಲಿ ಪ್ರೀತಿ, ಪ್ರೇಮ, ನಗ್ನತೆ, ಪ್ರೇಮ ಸಂದೇಶ, ಮೈಥುನಗಳಂತಹ ವಿಷಯುಗಳಿಗೆ ಸ್ತ್ರೀ ಚಿತ್ರಗಳನ್ನು ಅನಾವರಣಗೊಳಿಸಿದ್ದಾರೆ. ಮುಂದೆ ಪ್ರೌಢಾವಸ್ಥೆಯಲ್ಲಿ ಸ್ತ್ರೀ ನಿಲುವುಗಳ ಕುರಿತಾಗಿ ಅವರ ವಿಚಾರಸರಣಿ ಬದಲಾದಂತೆ ಕಂಡುಬರುತ್ತದೆ. ಸ್ತ್ರೀ ಸ್ವಾತಂತ್ರ್ಯವಾದ ಕಡೆಗೆ ಅವರ ಮನಸ್ಸು ಹರಿದಿರುವುದು ಕಲಾಕೃತಿಗಳ ವಿಶ್ಲೇಷಣೆಯಿಂದ ತಿಳಿದುಬರುತ್ತದೆ. ಮಹಿಳೆಯರು ಗುಂಪಾಗಿ ಚರ್ಚಿಸುತ್ತಿರುವುದು, ಯೋಚನಾಮಗ್ನ ಮಹಿಳೆಯರು ಮುಂತಾಗಿ ಹಲವು ಚಿತ್ರಗಳಿದ್ದು ಮೇಲಿನ ಸಂದೇಶವನ್ನು ಪ್ರತಿಬಿಂಬಿಸುತ್ತವೆ.

ಸಾಮಾನ್ಯವಾಗಿ ಎಲ್ಲ ಕಲಾವಿದರು ತಮ್ಮ ಬಾಲ್ಯದ ನೆನಪುಗಳನ್ನು ಕೃತಿಗಳಲ್ಲಿ ಅಳವಡಿಸಿರುವುದು ಕಂಡುಬರುತ್ತದೆ. ಅದೇ ರೀತಿಯಲ್ಲಿ ಪಾಟೀಲರು ತಾವು ಹಳ್ಳಿಯಲ್ಲಿ ಅನುಭವಿಸಿದ ಬಾಲ್ಯದ ತುಂಟಾಟ, ವಿನೋದ, ಪ್ರಭಾವಬೀರಿದ ಘಟನಾವಳಿಗಳನ್ನು ಕೃತಿಯ ಮೂಲಕ ಅನಾವರಣಗೊಳಿಸಿದ್ದಾರೆ. ಮುಂಬೈನಲ್ಲಿ ಕಲಾ ಅಧ್ಯಯನ ಮಾಡಿದ ಅಂದಿನ ಸಂದರ್ಭದ ಹೆಚ್ಚಿನ ಕಲಾವಿದರು ಅಕಾಡಮಿಕ್ ಶೈಲಿಯ ರಚನಾವಿಧಾನದಿಂದ ಹೊರಬರದೇ

ಇರುವುದು ಕಂಡುಬರುತ್ತದೆ. ಆದರೆ ಎಂ. ಬಿ. ಪಾಟೀಲರು ತಮ್ಮ ಕಲಾ ಅಧ್ಯಯನದ ನಂತರ ಕೆಲವೇ ದಿನಗಳಲ್ಲಿ ಪಾಶ್ಚಾತ್ಯ ನವ್ಯಪ್ರಭಾವಳಿಗೆ ತಮ್ಮನ್ನು ತೆರೆದುಕೊಂಡಿರುವುದು ವಿಶೇಷವಾಗಿದೆ. ಇದಕ್ಕೆ ಕಾರಣ ಐವತ್ತರ ದಶಕದಲ್ಲಿ ಮುಂಬೈನಲ್ಲಿ ಹೆಚ್ಚು ಕ್ರಿಯಾಶೀಲವಾಗಿದ್ದ ಪ್ರೊಗ್ರೇಸಿವ್ ಆರ್ಟ್ ಗುಂಪಿನ ಕಲಾವಿದರ ಪ್ರಭಾವ ಎನ್ನಬಹುದು.

ಪಾಟೀಲರು ನವ್ಯಪ್ರಭಾವಗಳಿಗೆ ತಮ್ಮನ್ನು ತೆರೆದುಕೊಂಡ ಮೇಲೆ ಅವರ ಅಕಾಡೆಮಿಕ್ ಚಿತ್ರವಿಧಾನವು ಹಿಂದೆ ಸರಿದಂತೆ ತೋರುತ್ತದೆ. ಯಾವುದೇ ಕೃತಿ ರಚನೆ ಮಾಡಿದರೂ ಅಲ್ಲಿ ಅಮೂರ್ತ ಪ್ರಭಾವ ದಟ್ಟವಾಗಿ ಆವೃತಗೊಂಡಿರುತ್ತದೆ. ಪಾಟೀಲರು ಭಾವಚಿತ್ರರಚನೆಯಲ್ಲಿ ವಿಶೇಷವಾಗಿ ತಮ್ಮನ್ನು ಗುರುತಿಸಿಕೊಂಡಿದ್ದಾರೆ. ಕೆಲವು ಭಾವಚಿತ್ರಗಳನ್ನು ಛಾಯಾಚಿತ್ರಗಳ ಆಧಾರದಲ್ಲಿ ರಚಿಸಲಾಗಿದ್ದರೆ ಮತ್ತೆ ಕೆಲವು ರೂಪದರ್ಶಿಯನ್ನು ಎದುರಿಗಿಟ್ಟುಕೊಂಡು ಚಿತ್ರಿಸಲ್ಪಟ್ಟಿವೆ. ಪ್ರತಿ ದಶಕದಲ್ಲಿಯೂ ಇವರ ಭಾವಚಿತ್ರರಚನಾ ವಿಧಾನ ಬದಲಾಗುತ್ತ ಬಂದಿದೆ.

ಇವರ ಭಾವಚಿತ್ರಗಳಲ್ಲಿ ಮಕ್ಕಳು, ಮಧ್ಯವಯಸ್ಕರು, ಮುದುಕರು, ಅದರಲ್ಲೂ ಹೆಚ್ಚಾಗಿ ಗ್ರಾಮೀಣ ಮಹಿಳೆಯರು ಸೇರಿದ್ದಾರೆ. ಇದರ ಜೊತೆಗೆ ಆಯಾ ಕಾಲಮಾನದಲ್ಲಿ ಪ್ರಸಿದ್ಧರಾಗಿರುವ ವ್ಯಕ್ತಿಗಳು, ಮಿತ್ರರು, ಇವರ ಭಾವಚಿತ್ರಗಳಲ್ಲಿ ಮೂಡಿಬಂದಿದ್ದಾರೆ. ಜವಾಹರಲಾಲ ನೆಹರು, ಶಾಮಲಾಭಾವೆಯವರ ತಂದೆ, ಆರ್.ಎಂ. ಹಡಪದ, ಜೆ.ಎಂ.ಎಸ್.ಮಣಿ, ದೇವರಾಜ ಅರಸ್ ಇಂತಹ ಭಾವಚಿತ್ರಗಳನ್ನು ಇಲ್ಲಿ ಹೆಸರಿಸಬಹುದು. ಗ್ರಾಮೀಣ ಮಹಿಳೆಯರ ಕುರಿತಾಗಿರುವ ಭಾವಚಿತ್ರಗಳಲ್ಲಿ ಮತ್ತು ಪುರುಷರ ಭಾವಚಿತ್ರಗಳಲ್ಲಿ ಅವರ ವೇಷಭೂಷಣಗಳಿಗೆ ಹೆಚ್ಚು ಪ್ರಾಮುಖ್ಯತೆ ಕೊಟ್ಟಿದ್ದಾರೆ.

ಪಾಟೀಲರು ಭಾವಚಿತ್ರಕಲಾವಿದರಾಗಿ ರೂಪುಗೊಂಡಂತೆ, ನಂತರದ ದಿನಗಳಲ್ಲಿ ಅವರೊಬ್ಬ ಆಧುನಿಕ ಶೈಲಿಯ ಕಲಾವಿದರಾಗಿಯು ಹೆಸರು ಮಾಡಿದ್ದಾರೆ. ಅವರ ಅಮೂರ್ತ ಶೈಲಿಯ ಚಿತ್ರಗಳು ಇದಕ್ಕೆ ಉತ್ತಮ ಉದಾಹರಣೆಯಾಗಿವೆ. ಇವರ ಸಮಗ್ರ ಚಿತ್ರಗಳನ್ನು ವಿಶ್ಲೇಷಣೆ ಮಾಡಿದಾಗ ಇವರು ಗ್ರಾಮೀಣ ಪರಿಸರ ಮತ್ತು ಮಹಿಳಾ ಸಂಬಂಧಿ ವಿಷಯಗಳಿಗೆ ಹೆಚ್ಚು ಪ್ರಾಮುಖ್ಯತೆಯನ್ನು ಕೊಟ್ಟಿರುವುದು ಕಂಡುಬರುತ್ತದೆ. ಆದರೆ ವಿಶೇಷವಾಗಿರುವ ಅಂಶವೆಂದರೆ ಕಾಲಕಾಲಕ್ಕೆ ಈ ವಿಷಯಗಳನ್ನು ಅನಾವರಣಗೊಳಿಸುವ ವಿಧಾನಗಳಲ್ಲಿ ಸರಳೀಕೃತ ಗೊಂಡಿರುವುದು ಮತ್ತು ಪ್ರಬುದ್ಧತೆ ಮೂಡಿರುವುದು ತಿಳಿದು ಬರುತ್ತದೆ. ಈ ಹಿನ್ನೆಲೆಯಲ್ಲಿ ಅವರನ್ನು ಕರ್ನಾಟಕದ ಪಿಕಾಸೋ ಎಂದು ಕರೆಯಬಹುದಾದಷ್ಟು ಶಕ್ತಿಶಾಲಿ ಚಿತ್ರಗಳು ಅವರಿಂದ ರಚನೆಗೊಂಡಿರುವುದು ಗೋಚರಿಸುತ್ತದೆ.



* * * * *



ನಿಸರ್ಗಚಿತ್ರ, 2001, 12X18



ನಿಸರ್ಗಚಿತ್ರ, 2001, 12X18





ನಿಸರ್ಗಚಿತ್ರ, 2001, 12X18



ನಿಸರ್ಗಚಿತ್ರ, 2001, 12X18





ನಿಸರ್ಗಚಿತ್ರ, 2001, 12x18



ನಿಸರ್ಗಚಿತ್ರ, 2001, 12x18





ನಿಸರ್ಗಚಿತ್ರ, 2001, 12X18



ವ್ಯಕ್ತಿಚಿತ್ರ, 2001, 18X24





ಪತಿ ಪತ್ನಿ, 2001, 18X24



ಶಿರ್ಷಿಕೆ ರಹಿತ, 2002, 18X24





ಸೂರ್ಯನ ಹಿಂದೆ, 2001, 24X24



ತಂತ್ರ, 2001, 24X24



# ಎರಡು ಸಾವಿರದಿಂದ ಎರಡುಸಾವಿರದಾ ಹತ್ತರದಶಕದ ಕಲಾಕೃತಿಗಳು



ವೀಣೆಯನ್ನು ನುಡಿಸುತ್ತಿರುವ ಮಹಿಳೆ, 2002, 60X36



ಗ್ರಾಮೀಣ ಸ್ತ್ರೀಯರು, 2002, 60X36





ನಿಸರ್ಗ ಸರಣಿ ಚಿತ್ರಗಳು, 2002, 24x30



ನಿಸರ್ಗ ಸರಣಿ ಚಿತ್ರಗಳು, 2002, 24x30





ಸೃಜನಶೀಲ ಭೂದೃಶ್ಯಗಳು, 2002, 24x30




ಶಿರ್ಷಿಕೆ ರಹಿತ ಭೂದೃಶ್ಯಗಳು, 2002, 24x24





ನಿಸರ್ಗ ಸರಣಿ ಚಿತ್ರಗಳು, 2002, 24X30



ನಿಸರ್ಗ ಸರಣಿ ಚಿತ್ರಗಳು, 2003, 24X30





ನಿಸರ್ಗ ಸರಣಿ ಚಿತ್ರಗಳು, 2003, 24x30



ನಿಸರ್ಗ ಸರಣಿ ಚಿತ್ರಗಳು, 2003, 24x30





ಸಿ.ಜಿ.ಕೆ ಭಾವಚಿತ್ರ, 2003, 24X24



ಮಹಿಳೆ ಮತ್ತು ಆಡು, 2004, 24X30





ಮೂವರು ಸ್ತ್ರೀಯರು, 2004, 24X30



ಕೆ. ಎಸ್. ರಾಮಚಂದ್ರನ್ ಅವರ ಭಾವಚಿತ್ರ, 2005, 24X30





ನಿಸರ್ಗಚಿತ್ರ, 2005, 12X18

ಸ್ತ್ರೀ, 2005, 24X30



ವ್ಯಕ್ತಿ ಭಾವಚಿತ್ರ, 2005, 24x30



ಸ್ತ್ರೀ ಭಾವಚಿತ್ರ, 2005, 12x18





ಭಾವಚಿತ್ರ, 2006, 24x24



ಭಾವಚಿತ್ರ, 2006, 24x24





ಸ್ತ್ರೀ ಭಾವಚಿತ್ರ, 2006, 24x30



ವೆಂಕಟಾಚಲಪತಿಯವರ ಭಾವಚಿತ್ರ, 2006, 24x30





ಗೊಮ್ಮಟೇಶ್ವರ ತೈಲಚಿತ್ರ, 2006, 24x30



ಗೊಮ್ಮಟೇಶ್ವರ ತೈಲಚಿತ್ರ, 2006, 24X30





ವ್ಯಕ್ತಿಚಿತ್ರ, 2008, 24X30



ಸ್ಥಿರಚಿತ್ರಣ, 2008, 24X24



**ಚಿ**ತ್ರಕಲಾ ಕ್ಷೇತ್ರದಲ್ಲಿ ಶೈಲಿಗೆ ಪ್ರಾಮುಖ್ಯತೆ ಇರುವಂತೆ ಆಯಾ ಕಲಾವಿದರ ಮೇಲೆ ಬೀರಿದ ಪ್ರಭಾವ, ಕಲಾರಚನೆಗೆ ಉಂಟಾದ ಪ್ರೇರಣೆ ಹಾಗೂ ಕೃತಿ ರಚನೆಯಲ್ಲಿ ಅನುಸರಿಸಿದ ತಾಂತ್ರಿಕತೆಗಳು ಸಹಿತ ಅಷ್ಟೇ ಮೌಲಿಕ ಪಾತ್ರವಹಿಸುತ್ತವೆ.[೧] ಹಾಗಾಗಿ ಕಲಾವಿದರ ಕುರಿತಾಗಿರುವ ಅಧ್ಯಯನಗಳಲ್ಲಿ ಇಂತಹ ಸಂಗತಿಗಳ ಬಗ್ಗೆ ತಿಳಿದುಕೊಳ್ಳುವುದು ತೀರಾ ಮಹತ್ವದ್ದಾಗಿದೆ ಎನ್ನಬಹುದು.

ಯಾವುದೇ ಕಲಾಪ್ರಕಾರ, ಮತ್ತು ಕಲೆಯನ್ನು ಗುರುತಿಸುವಲ್ಲಿ ಶೈಲಿ ಪ್ರಮುಖವಾಗಿದೆ. ಒಂದು ಕಲಾಕೃತಿಗಿಂತ ಇನ್ನೊಂದು ಕೃತಿ ಯಾವ ರೀತಿಯಲ್ಲಿ ಭಿನ್ನವಾಗಿದೆ. ಎಂಬುದನ್ನು ನಿರ್ಧರಿಸುವಾಗ ಅದರ ರಚನಾ ಶೈಲಿ ಮಹತ್ವದ ಪಾತ್ರವಹಿಸುತ್ತದೆ. ಒಂದು ಕಲಾಕೃತಿಯ ಒಟ್ಟುರೂಪ, ಅದರಲ್ಲಿನ ಆಕಾರಗಳು, ರೇಖೆಗಳು ವರ್ಣಲೇಪನ, ರಚನಾ ವಿಧಾನ, ಚಿತ್ರ ಸಂಯೋಜನೆ ಹೀಗೆ ಹತ್ತು ಹಲವು ಸಂಗತಿಗಳನ್ನು ಶೈಲಿ ಒಳಗೊಂಡಿರುತ್ತದೆ. ಒಂದೊಂದು ಬಗೆಯ ಶೈಲಿಯಲ್ಲಿ ಒಂದೊಂದು ರೀತಿಯಲ್ಲಿ ಇಂತಹ ಅಂಶಗಳು ಬಿಂಬಿತವಾಗಿರುತ್ತವೆ.[೨] ರಾಜಸ್ಥಾನಿ, ಮೊಗಲ್, ಪಹಾಡಿ, ದಖನಿ, ಸುರಪುರ, ಮೈಸೂರು

---

೧. ಡಾ. ಯಾದಪ್ಪ. ಪರದೇಶಿ : ಉತ್ತರ ಕರ್ನಾಟಕದ ಭಿತ್ತಿಚಿತ್ರಕಲೆ : ಪುಟ-೫೪
೨. ಡಾ. ಎಸ್. ಸಿ. ಪಾಟೀಲ : (ಸ) ಚಿತ್ರಕಲೆ ಮತ್ತು ಪೂರಕ ಕ್ಷೇತ್ರಗಳು : ಪುಟ-೨೮

ಇವೆಲ್ಲ ಚಿತ್ರಶೈಲಿಗಳು ಕಿರುರೂಪ ಚಿತ್ರಗಳಾಗಿದ್ದರೂ ಪ್ರತಿಯೊಂದು ಚಿತ್ರಶೈಲಿಗಳು ಭಿನ್ನತೆಯಿಂದ ಕೂಡಿವೆ.[೩] ಪ್ರತಿಯೊಂದು ಕಲಾಶೈಲಿಯಲ್ಲಿ ಕಲಾಕೃತಿಗಳ ಒಟ್ಟುರೂಪ, ಆಕಾರಗಳು, ರೇಖಾವಿನ್ಯಾಸ, ವರ್ಣಲೇಪನ, ಚಿತ್ರ ಸಂಯೋಜನೆಗಳು ಬೇರೆ ಬೇರೆಯಾಗಿದ್ದು ಪ್ರತಿಯೊಂದು ಚಿತ್ರಶೈಲಿಯು ಪ್ರತ್ಯೇಕತೆಯನ್ನು ಹೊಂದಿವೆ. ಭಿತ್ತಿಚಿತ್ರಗಳು, ಹಸ್ತಪ್ರತಿಚಿತ್ರಗಳು, ಮಾತ್ರವಲ್ಲದೆ ಶಿಲ್ಪಗಳು ಹಾಗೂ ವಾಸ್ತುಕಲೆಗಳನ್ನು ಕುರಿತು ವಿವೇಚಿಸುವಾಗಲೂ ಶೈಲಿ ಎಂಬುದನ್ನು ಮೊದಲು ಗಮನಿಸಬೇಕಾಗುತ್ತದೆ.

ಚಿತ್ರಕಲಾ ಕ್ಷೇತ್ರದಲ್ಲಿ ಕಾಲಕಾಲಕ್ಕೆ ಬೇರೆ ಬೇರೆ ಶೈಲಿಗಳು ಹುಟ್ಟಿಕೊಂಡಿದ್ದು, ಅವುಗಳನ್ನು ಆಧರಿಸಿ ಕಲಾವಿದರು ಕೃತಿಗಳನ್ನು ರಚಿಸುತ್ತ ಬಂದಿರುವುದು ಕಂಡು ಬರುತ್ತದೆ. ಕಲಾವಿದನ ಶೈಲಿಯು ರೂಪುಗೊಳ್ಳಲು ಆತನ ಕಾಲದಲ್ಲಿ ಪ್ರಚಲಿತದಲ್ಲಿರುವ ಕಲಾಶೈಲಿ, ಜೊತೆಗೆ ಆಯಾ ಕಲಾವಿದನ ಅನುಭವಗಳು, ಸಾಧನೆ, ಪ್ರಭಾವ, ಪ್ರೇರಣೆ, ಪ್ರಾದೇಶಿಕ ಅಂಶಗಳು, ಸಂಸ್ಕೃತಿ ಮತ್ತು ಸಾಮಾಜಿಕ ಆಗುಹೋಗುಗಳು ಸಹಿತ ಕಾರಣವಾಗಿರುತ್ತವೆ.[೪]

ಕಲಾವಿದನೊಬ್ಬ ತನ್ನನ್ನು ಗುರುತಿಸಿಕೊಳ್ಳುವುದು ತನ್ನದೇ ಆದ ಪ್ರತ್ಯೇಕ ಶೈಲಿಯಿಂದಾಗಿ. ಇತರೆಲ್ಲ ಕಲಾವಿದರಿಗಿಂತ ಭಿನ್ನವಾಗಿ, ವಿಶಿಷ್ಟವಾಗಿ ಹಾಗೂ ಪರಿಣಾಮಕಾರಿಯಾಗಿ ಯಾವ ರೀತಿಯಲ್ಲಿ ಅಭಿವ್ಯಕ್ತಿಸಬೇಕು ಎಂಬ ಆದಮ್ಯ ತುಡಿತ ಮಿಡತಗಳು ಹಾಗೂ ಕಲಾವಿದನ ನಿರಂತರ ಹುಡುಕಾಟದ ಫಲಸ್ವರೂಪವೇ ಪ್ರತ್ಯೇಕ ಕಲಾಶೈಲಿ ಎಂಬುದು ವಿದ್ವಾಂಸರ ಅಭಿಪ್ರಾಯವಾಗಿದೆ.[೫]

ಯಾವುದೇ ಕಲಾಕೃತಿ ಅಥವಾ ಕಲಾಶೈಲಿಯ ಮೇಲೆ ಬೀರಿದ ಪ್ರಭಾವವು ಅದರ ಬದಲಾವಣೆಯಲ್ಲಿ ಪ್ರಮುಖ ಪಾತ್ರವಹಿಸುತ್ತದೆ. ಯಾವುದೇ ಒಂದು ಕಲಾಶೈಲಿಯಲ್ಲಿ ಚಿತ್ರ ರಚಿಸುವ ಕಲಾವಿದ ಮತ್ತೊಂದು ಕಲಾಶೈಲಿಯ ವೀಕ್ಷಣೆಯಿಂದ ಅಥವಾ ಇನ್ನೊಬ್ಬ ಕಲಾವಿದನ ಕೃತಿಗಳಿಂದ ಪ್ರಭಾವಿತನಾಗಬಹುದು. ಇದರಿಂದ ಕೃತಿ ಹಾಗೂ ಶೈಲಿಗಳು ಬದಲಾಗುತ್ತ ಹೋಗುವುದು ಸಾಮಾನ್ಯ ಅಂಶವಾಗಿದೆ.[೬]

ಎಂ.ಬಿ.ಪಾಟೀಲರು ಸಹಿತ ಪ್ರಾರಂಭಿಕ ಹಂತದಲ್ಲಿ ಅಕಾಡಮಿಕ್ ಶೈಲಿಯಿಂದ ಪ್ರಭಾವಿತಗೊಂಡು ಕಲಾಕೃತಿಗಳನ್ನು ರಚಿಸಿದ್ದಾರೆ. ನಂತರದ ದಿನಗಳಲ್ಲಿ ಪಾಶ್ಚಾತ್ಯ ನವ್ಯಕಲಾ ಶೈಲಿಗಳ ಪ್ರಭಾವಕ್ಕೊಳಗಾಗಿ ಆಧುನಿಕ ಶೈಲಿಯ ಅಮೂರ್ತ ಚಿತ್ರಗಳನ್ನು ರಚಿಸತೊಡಗಿದರು. ಮತ್ತೆ ಕೆಲವು ಸಂದರ್ಭಗಳಲ್ಲಿ ಗ್ರಾಮೀಣ ಜನಪದ ಚಿತ್ರಕಲೆಗಳಿಂದ ಪ್ರಭಾವಿತಗೊಂಡಿರುವದು

---

೩. ಡಾ. ಯಾದಪ್ಪ. ಪರದೇಶಿ : ಉತ್ತರ ಕರ್ನಾಟಕದ ಭಿತ್ತಿಚಿತ್ರಕಲೆ : ಪುಟ-೧೮೯
೪. ಡಾ. ಎಸ್. ಸಿ. ಪಾಟೀಲ : ವರ್ಣಸಂಚಯ : ಪುಟ-೪೨
೫. ಡಾ. ಲಕ್ಷ್ಮೀದೇವಿ ಗವಾಯಿ : ಕಲಾವಿದ ಎಂ. ಎ. ಚೆಟ್ಟಿ ಕಲೆ ಮತ್ತು ಬದುಕು : ಪುಟ-೧೧೫
೬. ಡಾ. ಎಸ್. ಸಿ. ಪಾಟೀಲ : ಸಾಧನೆಯ ಸಮುಚ್ಚಯ ಶಿವಲಿಂಗಪ್ಪ : ಪುಟ-೬೦

ಸಹಿತ ಗಮನಕ್ಕೆ ಬರುತ್ತದೆ. ಯಾವ ಸಂದರ್ಭ ಮತ್ತು ಯಾವ ಪ್ರಭಾವಗಳಿಗೆ ಎಂ.ಬಿ.ಪಾಟೀಲರು ಒಳಗಾದರು. ಅವರು ಚಿತ್ರಶೈಲಿಯನ್ನು ಕಾಲಕಾಲಕ್ಕೆ ಬದಲಾಯಿಸಿಕೊಳ್ಳಲು ಯಾವ ಪ್ರಭಾವಗಳು ಕಾರಣವಾದವು ಎಂಬುದನ್ನು ಇಲ್ಲಿ ಉದಾಹರಣೆಗಳೊಂದಿಗೆ ಸ್ಥೂಲವಾಗಿ ಬಿಂಬಿಸಲಾಗಿದೆ.

ಕಲೆಯಲ್ಲಿ ಶೈಲಿ, ಪ್ರಭಾವಗಳಂತೆ ಅದನ್ನು ರಚಿಸಲು ಆತನಿಗೆ ಉಂಟಾದ ಸ್ಫೂರ್ತಿ ಅಥವಾ ಪ್ರೇರಣೆಗಳು ಸಹಿತ ಅಷ್ಟೇ ಮಹತ್ವದ್ದಾಗಿವೆ. ಕಾರಣ ಸ್ಫೂರ್ತಿ ಅಥವಾ ಪ್ರೇರಣೆಗಳಿಲ್ಲದೆ ಕಲಾವಿದ ಯಾವುದೇ ಕೃತಿ ರಚಿಸಲಾರ. ಕಲಾವಿದರು ತಮ್ಮ ಕಲಾಕೃತಿಗಳ ರಚನೆಗೆ ಹೇಗೆ ಮತ್ತು ಎಲ್ಲಿ ಸ್ಫೂರ್ತಿ ಅಥವಾ ಪ್ರೇರಣೆ ಉಂಟಾಯಿತೆಂದು ಹೇಳುತ್ತಲೆ ಬಂದಿದ್ದಾರೆ.[೭] ಹಾಗೆ ಎಂ.ಬಿ.ಪಾಟೀಲರಿಗೆ ಅವರ ಕಲಾಕೃತಿ ರಚನೆಗೆ ಪ್ರೇರಣೆಗಳೇನು ಎಂಬುದನ್ನು ಇಲ್ಲಿ ಚರ್ಚಿಸಲಾಗಿದೆ.

ಕಲೆ ಮತ್ತು ಕಲಾಕೃತಿ ರಚನೆಯಲ್ಲಿ ಅದರಲ್ಲಿ ಅನುಸರಿಸಿರುವ ತಾಂತ್ರಿಕತೆ ಬಹುಮುಖ್ಯ ಪಾತ್ರವಹಿಸುತ್ತದೆ. ಚಿತ್ರಕಲೆಯಲ್ಲಿ ಇತರೆಲ್ಲ ಕಲಾಪ್ರಕಾರಗಳಿಗಿಂತ ಹೆಚ್ಚಿನ ಪ್ರಮಾಣದ ತಾಂತ್ರಿಕತೆಯ ಪರಿಜ್ಞಾನ ಕಲಾವಿದನಿಗೆ ಇರಬೇಕಾಗುತ್ತದೆ. ಚಿತ್ರಕಲಾಕೃತಿಯು ಯಾವುದೇ ಶೈಲಿಯಲ್ಲಿರಬಹುದು. ಅಥವಾ ಯಾವುದೇ ವಸ್ತುವಿಷಯಗಳಿಗೆ ಸಂಬಂಧಿಸಿರಬಹುದು. ಅದರಲ್ಲಿ ತಾಂತ್ರಿಕ ಅಂಶಗಳು ಪ್ರಮುಖ ಪಾತ್ರವಹಿಸುತ್ತವೆ. ಅಂದರೆ ಕಲಾಕೃತಿಯಲ್ಲಿನ ಆಕಾರಗಳು, ಸಂಯೋಜನೆ, ಪ್ರಸ್ತುತ ಪಡಿಸುವ ರೀತಿ, ಸ್ಥಳಾವಕಾಶ, ವರ್ಣಲೇಪನ, ನೆರಳು ಬೆಳಕಿನ ಪರಿಣಾಮ ರೇಖಾವಿನ್ಯಾಸ, ರಚನಾಶೈಲಿ ಕೃತಿಯ ಒಟ್ಟುರೂಪ ಇಂತಹ ಎಲ್ಲ ತಾಂತ್ರಿಕ ಅಂಶಗಳನ್ನು ಕಲಾವಿದ ತನ್ನ ಕೃತಿಯಲ್ಲಿ ಯಾವ ರೀತಿಯಲ್ಲಿ ಪರಿಣಾಮಕಾರಿಯಾಗಿ ಬಳಸಿಕೊಳ್ಳುತ್ತಾನೆ ಅಷ್ಟೇ ಶ್ರೇಷ್ಠಮಟ್ಟದಲ್ಲಿ ಆ ಕಲಾಕೃತಿ ಮೂಡಿಬರುತ್ತದೆ.[೮] ಪ್ರಸ್ತುತ ಎಂ.ಬಿ.ಪಾಟೀಲರು ತಮ್ಮ ಕಲಾಕೃತಿ ರಚನೆಯಲ್ಲಿ ಅನುಸರಿಸಿದ ತಾಂತ್ರಿಕತೆಯ ಅಂಶಗಳನ್ನು ಉದಾಹರಣೆಗಳೊಂದಿಗೆ ಇಲ್ಲಿ ವಿಶ್ಲೇಷಣೆ ಮಾಡಲಾಗಿದೆ.

ಪಾಟೀಲರು ಆಧುನಿಕ ನೆಲೆಯಲ್ಲಿ ತಮ್ಮನ್ನು ಗುರುತಿಸಿಕೊಳ್ಳುತ್ತಿದ್ದರೂ ಪ್ರಾರಂಭಿಕ ದಿನಗಳಲ್ಲಿ ಅಕಾಡಮಿಕ್ ಶೈಲಿಯಲ್ಲಿ ಚಿತ್ರ ರಚಿಸುತ್ತಿದ್ದರು. ಹಾಗಾಗಿ ಅವರ ಕೃತಿ ರಚನೆಯ ತಾಂತ್ರಿಕತೆಯಲ್ಲಿ ಕಾಲಕಾಲಕ್ಕೆ ಬದಲಾವಣೆ, ಅನ್ವೇಷಣೆಗಳು ಕಂಡು ಬರುತ್ತವೆ. ಅವರ ಬಹುಸಂಖ್ಯೆಯ ಕಲಾಕೃತಿಗಳಲ್ಲಿ ಉತ್ತರ ಕರ್ನಾಟಕದ ಜನಸಾಮಾನ್ಯರ ಅದರಲ್ಲೂ ಗ್ರಾಮೀಣ ಬದುಕಿನ ಚಿತ್ರಣವನ್ನು ಕಾಣಬಹುದಾಗಿದೆ. ಇಲ್ಲಿ ವಿಷಯಗಳು ಸರಳವಾಗಿದ್ದರೂ ಅಲ್ಲಿ

೭. ಡಾ. ಲಕ್ಷ್ಮೀದೇವಿ ಗವಾಯಿ : ಕಲಾವಿದ ಎಂ. ಎ. ಚೆಟ್ಟಿ ಕಲೆ ಮತ್ತು ಬದುಕು : ಪುಟ-೧೧೦
೮. ಡಾ. ಶಶಿಕಲಾ ಹೂಗಾರ : ಕರ್ನಾಟಕದ ತೊಗಲುಗೊಂಬೆ ಚಿತ್ರಕಲೆ : ಪುಟ-೩೮

ಅನುಸರಿಸಿರುವ ರಚನಾ ಶೈಲಿ, ತಾಂತ್ರಿಕತೆಗಳಿಂದಾಗಿ ವಿಶಿಷ್ಟ ಅನುಭವ ಕೊಡುತ್ತವೆ. ಪಾಟೀಲರು ಮಹಿಳೆಯ ಸರಣಿಯ ಚಿತ್ರಗಳಲ್ಲಿ ಕ್ಯಾನವಾಸ್‌ನ ಸ್ಥಳಾವಕಾಶವನ್ನು ವೈವಿಧ್ಯ ರೀತಿಯಲ್ಲಿ ವಿಭಜಿಸಿಕೊಂಡು ಮನೆಯ ಒಳ ಹಾಗೂ ಹೊರಭಾಗದ ಕಲ್ಪನೆ ಬರುವಂತೆ ದೃಶ್ಯವನ್ನು ಕಟ್ಟಿ ಕೊಡುತ್ತಾರೆ. ಒಂದು ಚಿತ್ರದಲ್ಲಿ ಮನೆಯ ಮುಂಭಾಗದಲ್ಲಿ ಮಹಿಳೆಯೊಬ್ಬಳು ಕುಳಿತಿರುವಂತೆ ಚಿತ್ರಿಸಲಾಗಿದೆ. ಇಲ್ಲಿ ಹಿನ್ನೆಲೆಯ ಸ್ಥಳಾವಕಾಶವನ್ನು ಚೌಕ, ಆಯತ, ತ್ರಿಕೋನಗಳಂತೆ ವಿಭಜಿಸುವ ಮೂಲಕ ಮನೆಯ ಗೋಡೆ, ಬಾಗಿಲು, ಕಿಟಕಿ, ಆಕಾಶಗಳನ್ನು ಚಿತ್ರಿಸಲಾಗಿದೆ ಇದು ಕೃತಿಯಲ್ಲಿನ ತಾಂತ್ರಿಕ ಮೌಲ್ಯಕ್ಕೆ ಸಾಕ್ಷಿಯಾಗಿದೆ.

ಚಿತ್ರದ ಇಡೀ ಅವಕಾಶದಲ್ಲಿ ಹೆಚ್ಚಿನ ಭಾಗ ಕಲಾಕೃತಿಯಲ್ಲಿನ ಮುಖ್ಯ ಆಕಾರವು ಆವರಿಸಿಕೊಂಡಿದೆ. ಮುಖ್ಯ ಆಕಾರವಾದ ಮಹಿಳೆ ಮೇಲೆ ನೋಡುಗರ ದೃಷ್ಟಿ ಕೇಂದ್ರಿಕರಿಸುವುದಕ್ಕೆ ಈ ಪ್ರಯತ್ನ ಮಾಡಲಾಗಿದೆ. ಜೊತೆಗೆ ಅದಕ್ಕೆ ಪ್ರಖರ ವರ್ಣಗಳನ್ನು ಲೇಪಿಸಿರುವುದು ಸಹಿತ ಇದೆ ಉದ್ದೇಶಕ್ಕಾಗಿ ಎಂಬಂತೆ ಗೋಚರಿಸುತ್ತದೆ. ಮಹಿಳೆಯ ಕುಪ್ಪಸ, ನಂತರ ದೇಹದ ಇತರ ಭಾಗಗಳತ್ತ ಹರಿಯುತ್ತದೆ. ರೂಪಾಂತರದ ಪರಿಸರವನ್ನು ಸೃಷ್ಟಿಸಲಿಕ್ಕಾಗಿ ಅಲ್ಲಲ್ಲಿ ಚದುರಿದಂತೆ ಗುಡಿಸಲು, ಗಿಡ, ಮನೆ ಮುಂತಾದ ಆಕಾರಗಳಲ್ಲಿ ರಚಿಸಿ ಗ್ರಾಮಿಣ ವಿನ್ಯಾಸದ ಚೌಕಟ್ಟು ಕೊಡಲಾಗಿದೆ. ಒಟ್ಟು ಕಲಾಕೃತಿಯ ಯಾವೊಂದು ವಸ್ತುವಾಗಲಿ ಅಥವಾ ರೂಪವಾಗಲಿ ಪ್ರತ್ಯೇಕತಾ ಭಾವವನ್ನು ಮೂಡಿಸದೆ ಇಡೀ ಚಿತ್ರಕ್ಕೆ ಆಂತರಿಕ ಸಂಬಂಧವನ್ನು ಸೃಷ್ಟಿಸುತ್ತದೆ. ಈ ಕೃತಿಯ ರೂಪ, ರಚನಾ ಶೈಲಿ, ದಟ್ಟ ಬಾಹ್ಯ ರೇಖೆ, ವಿವರ ಪೂರ್ಣ ರಚನೆ, ಅಕಾಡೆಮಿಕ್ ನೆಲೆಯಲ್ಲಿ ಗೋಚರವಾಗುತ್ತದೆ. ಎಂ. ಬಿ. ಪಾಟೀಲರ ಗ್ರಾಮಿಣ ಮಹಿಳೆ ಕುರಿತ ಹಲವಾರು ಚಿತ್ರಗಳು ಅವರ ಶೈಲಿ, ತಾಂತ್ರಿಕತೆ ಮತ್ತು ಪ್ರೇರಣೆಗಳಿಗೆ ಒಳ್ಳೆಯ ಉದಾಹರಣೆಯಾಗಿವೆ. ಪಾಟೀಲರ ಗ್ರಾಮೀಣ ಮಹಿಳೆ ಕಲಾಕೃತಿಯಲ್ಲಿ ಎಂ.ಎಫ್ ಹುಸೇನ್ ಅವರ ಪ್ರಭಾವ ಕಂಡುಬರುತ್ತದೆ.

ಇಲ್ಲಿ ಗ್ರಾಮೀಣ ಸಂಸ್ಕೃತಿಯ ರೂಪವಾಗಿ ಹೆಣ್ಣು ಹಾಗೂ ಮಿಥುನ ಸಂಕೇತವಾಗಿ ಗಂಡು ಕೋಳಿಗಳು, ಹುಸೇನರ ಕುದುರೆಯಂತೆ ರೂಪಕವಾಗಿ ನಿಲ್ಲುತ್ತವೆ. ಕಲಾಕೃತಿಯಲ್ಲಿ ದೇಹ ರಚನೆಯ ಶೃಂಗಾರ ಎತ್ತರದ ನಿತಂಬಗಳು, ಅದರ ಮಧ್ಯೆ ಪುಟ್ಟ ನಡುವು, ಬೀಸುಗೈ ರವಿಕೆ, ಹೊದಿಕೆ, ಕೊರಳ ಆಭರಣ, ಅಮೂರ್ತ ರೂಪದ ಪುಟ್ಟ ತುಟಿ, ಗಮನ ಸೆಳೆಯುತ್ತವೆ. ಈ ತಂತ್ರಗಾರಿಕೆ ಮೂಲಕವೇ ಗ್ರಾಮೀಣ ಸಂಸ್ಕೃತಿಯ ಪ್ರತಿಬಿಂಬವನ್ನು ಕಟ್ಟಿಕೊಡಲು ಪಾಟೀಲರು ಪ್ರಯತ್ನಿಸಿದ್ದಾರೆ. ವಸ್ತುವಿನ ನೈಜ ಆಕಾರಗಳನ್ನು ಸೃಜನಾತ್ಮಕವಾಗಿ ಹೇಗೆ ನಿರೂಪಿಸಬಹುದು

ಎಂಬುದಕ್ಕೆ ಅವರ ರೆಖಾಚಿತ್ರಗಳು ಉತ್ತಮ ಉದಾಹರಣೆಗಳಾಗಿವೆ. ಪಾಟೀಲರು ತಮ್ಮ ಸ್ಕೆಚ್‌ಗಳನ್ನು ಪ್ರಾಚೀನ ಭಿತ್ತಿ ಚಿತ್ರ ಮತ್ತು ಕಿರುರೂಪ ಚಿತ್ರಗಳಿಗೆ ಪೂರಕವಾಗಿರುವಂತೆ ಪ್ರಾರಂಭಿಕ ಹಂತದಲ್ಲಿ ರಚಿಸುತ್ತಿದ್ದರು. ಪಾಟೀಲರ ಕೆಲವು ಕೃತಿಗಳನ್ನು ಪರಿಶೀಲಿಸಿದಾಗ ಆಧುನಿಕ ಶೈಲಿಯಲ್ಲಿ ರಚನೆಗೊಂಡಿದ್ದರೂ ಅದರಲ್ಲಿ ಉತ್ತರ ಕರ್ನಾಟಕದ ಜನಪದೀಯ ಚಿತ್ರಕಲೆಯ ರೇಖಾವಿನ್ಯಾಸ, ವರ್ಣಲೇಪನಗಳ ಪ್ರೇರಣೆ ಬರುತ್ತದೆ.

ಪಾಟೀಲರ ಕೃತಿಗಳಲ್ಲಿ ವೈವಿಧ್ಯತೆಯಿದೆ. ಸನ್ನಿವೇಶ ಹಾಗೂ ಮಾನವ ದೇಹದ ವೈಭವೀಕರಣಗಳನ್ನು ಗೌಣವಾಗಿಸಿರುವುದು ಪ್ರತಿಯೊಂದು ಚಿತ್ರದಲ್ಲಿ ಕಂಡು ಬರುತ್ತದೆ. ಹಾಗೂ ಮಾನವ ಶರೀರದ ಅಂಗ ಸೌಷ್ಠವದ ಸರಳೀಕರಣ ಇವರ ವೈಶಿಷ್ಟವಾಗಿದೆ. ವರ್ಣಸಂಯೋಜನೆ, ನೆರಳು, ಬೆಳಕು ರೇಖೆಯ ವಿನ್ಯಾಸಗಳಲ್ಲಿ ಕ್ಯೂಬಿಜಂ ಶೈಲಿಯ ಪರಿಣಾಮಗಳು ಗೋಚರಿಸುತ್ತವೆ.

ಪಾಟೀಲರು ಜಲವರ್ಣವನ್ನು ವಾಶ್ ಮಾದರಿಯಲ್ಲಿ ಬಳಸಿ, ರೇಖೆಗಳನ್ನು ಪ್ರಧಾನವಾಗಿ ಇಟ್ಟುಕೊಂಡು ಕೆಲವು ಚಿತ್ರಗಳನ್ನು ತಮ್ಮ ಪ್ರಾರಂಭಿಕ ದಿನಗಳಲ್ಲಿ ರಚಿಸಿದ್ದಾರೆ. ಈ ವಿಧಾನ ಬಹುತೇಕ ಬಂಗಾಳ ಕಲಾಶೈಲಿಯ ಪ್ರೇರಣೆಯಾಗಿದೆ. ಅಜಂತಾ ಭಿತ್ತಿಚಿತ್ರಗಳ ಪ್ರೇರಣೆಯಿಂದಲೂ ಇವರ ಕಲಾಕೃತಿಗಳು ಕೆಲವು ಸಂದರ್ಭದಲ್ಲಿ ರಚನೆಗೊಂಡಿವೆ. ಅವರು ರಚಿಸಿರುವ ಭಾವಚಿತ್ರಗಳಲ್ಲಿ ಈ ಶೈಲಿ ಕಾಣುತ್ತದೆ. ಮುಂಬೈ ಕಲಾ ಶಾಲೆಯಲ್ಲಿ ಅಂದಿನ ದಿನಗಳಲ್ಲಿ ಅಜಂತಾ ಚಿತ್ರಗಳ ಪ್ರೇರಣೆಯಿಂದ ಹೆಚ್ಚಿನ ಜನರು ಚಿತ್ರಿಸುತ್ತಿದ್ದುದು ಸಾಮಾನ್ಯ ಸಂಗತಿಯಾಗಿತ್ತು

ತಮ್ಮ ಕಲಾಶಿಕ್ಷಣವನ್ನು ಮುಂಬೈಯಲ್ಲಿ ಪಡೆದ ಪಾಟೀಲರು. ಅಲ್ಲಿನ ಆಧುನಿಕ ಕಲಾಬುದಕಿನಲ್ಲಿ ದಿಕ್ಕುದೆಸೆಗಳು ಅರಿಯದಾದಾಗ ಜಿ. ಎಸ್. ದಂಡಾವತಿಮಠರವರ, ಮಾರ್ಗದರ್ಶನ, ಪ್ರೇರಣೆಗಳ ಸಹಾಯದಿಂದ ಪರಿವರ್ತನೆ ಕಂಡುಕೊಂಡರು. ಪಾಟೀಲರ ಚಿತ್ರ ಶೈಲಿಯಲ್ಲಿ ಬೇರೆ ಬೇರೆ ಕಲಾವಿದರು ಮತ್ತು ಕಲಾ ಪಂಥಗಳ ಅನುಕರಣೆ ಕೆಲವು ಸಂದರ್ಭದಲ್ಲಿ ಕಂಡು ಬಂದರೂ ಅಲ್ಲಿ ಅವರ ಸ್ವಂತಿಕೆ ಇರುತ್ತದೆ. ಅವರಲ್ಲಿರುವ ಕಲಾನುಭವ ಪ್ರತಿಯೊಂದು ಕೃತಿ ರಚನೆಯ ಪ್ರಾರಂಭದಲ್ಲೇ ಅವರನ್ನು ಅವರದ್ದೇ ಆದ ದಿಕ್ಕಿನಲ್ಲಿ ಸಾಗುವಂತೆ ಪ್ರೇರೆಪಿಸುತ್ತದೆ. ಇತರರ ಕೃತಿಗಳ ಛಾಯೆಯಿರದೇ ಆಕಾರಗಳಲ್ಲಿ, ರೇಖಾ ವಿನ್ಯಾಸದಲ್ಲಿ ಬಣ್ಣಲೇಪನದಲ್ಲಿ ಹಾಗೂ ಪ್ರಸ್ತುತ ಪಡಿಸುವಲ್ಲಿ ಭಿನ್ನ ರೀತಿಯ ಸಂಯೋಜನೆ ಇವರ ಕೃತಿಗಳಲ್ಲಿರುತ್ತದೆ. ಇವರ ಭಾವಚಿತ್ರ ರಚನೆಯಲ್ಲಿ ಅಕಾಡೆಮಿಕ್ ಚೌಕಟ್ಟಿರುತ್ತದೆ. ವಿವಿಧ

ಅಂಗಗಳ ಪ್ರಮಾಣವನ್ನು ನೈಜದಿಂದ ಹೊರತು ಪಡಿಸಿ, ಕೆಲಸಲ ಕುಗ್ಗಿಸಿ, ಕೆಲಸಲ ಹಿಗ್ಗಿಸಿ, ಮೂರನೆಯ ಆಯಾಮದ ಭ್ರಮೆಯನ್ನು ತಮ್ಮ ಕಲಾಕೃತಿಗಳಲ್ಲಿ ಮೂಡಿಸಿರುವುದು ಒಂದು ವಿಶೇಷ.

ವರ್ಣ ಸಂಯೋಜನೆಯಲ್ಲಿ ಪಾರದರ್ಶಕ ಅಪಾರದರ್ಶಕ ಎರಡೂ ವಿಧಾನಗಳನ್ನು ಇವರು ಕರಗತ ಮಾಡಿಕೊಂಡಿರುವುದು ಇವರ ಕೃತಿಗಳಿಂದ ಕಂಡು ಬರುತ್ತದೆ. ಪಾಟೀಲರು ಹಳದಿ ಮತ್ತು ಕೆಂಪು ಬಣ್ಣಗಳನ್ನು ಹೆಚ್ಚಾಗಿ ಬಳಸಿದ್ದಾರೆ. ಇದು ಅವರ ಗ್ರಾಮ್ಯ ಸಂಸ್ಕೃತಿಯ ಪ್ರಭಾವವೆಂದು ತೋರುತ್ತದೆ. ಕಲಾಕೃತಿಯನ್ನು ರಚಿಸುವ ಮೊದಲು ಪಾಟೀಲರು ನೆಲದ ಮೇಲೆ ಕ್ಯಾನವಾಸ್ ಹಾಗೂ ಬಣ್ಣದ ಸಾಮಗ್ರಿಗಳನ್ನು ಹರಡಿಕೊಳ್ಳುತ್ತಾರೆ. ಚಿತ್ರಗಳನ್ನು ರಚಿಸಲು ಪ್ರಾರಂಭಿಸಿದರೆ ಒಮ್ಮೊಮ್ಮೆ ಇಡೀ ರಾತ್ರಿ ಕೆಲಸಮಾಡುತ್ತಾರೆ. ಮುಂಜಾನೆಗಿಂತಲೂ ಮಧ್ಯಾಹ್ನದ ವೇಳೆಯನ್ನು ಕೃತಿ ರಚನೆಗೆ ಹೆಚ್ಚಾಗಿ ಬಳಸಿಕೊಳ್ಳುತ್ತಾರೆ. ಕೃತಿ ರಚನೆಯಲ್ಲಿ ಪಾಟೀಲರು ಮೊದಲು ವಸ್ತುವಿನ ಬಗಗೆ ನಿರ್ಧರಿಸುತ್ತಾರೆ. ಕೃತಿಯೊಂದಕ್ಕೆ ಇಷ್ಟೇ ಕಾಲ ಅಗತ್ಯ ಎಂಬುದೇನಿಲ್ಲ. ಒಮ್ಮೊಮ್ಮೆ ಕೃತಿಗಳನ್ನು ಅರ್ಧ ಗಂಟೆಯಲ್ಲೂ ಮಾಡಬಹುದು. ನಾಲ್ಕು ಐದು ದಿನಗಳು ಆಗಬಹುದು. ಒಂದೇ ದಿನದಲ್ಲಿ ಅನೇಕ ಕೃತಿಗಳನ್ನು ಮಾಡಬಹುದು. ಹೀಗಾದಾಗ ಅವುಗಳ ಬಣ್ಣಗಳಲ್ಲಿ ವ್ಯತ್ಯಾಸಗಳಿರುತ್ತವೆ ಎನ್ನುತ್ತಾರೆ. ಕಲಾವಿದನ ಆ ಕ್ಷಣದ ಭಾವನೆಗಳನ್ನು ಆಧರಿಸಿ ಕೆಲಸ ಮಾಡುತ್ತಾರೆ.

ಪಾಟೀಲರು ಆಧುನಿಕ ಅಮೂರ್ತ ಶೈಲಿಯಲ್ಲಿ ಹಳ್ಳಿ ಹಾಗೂ ನಗರಗಳ ನಿಸರ್ಗ ಚಿತ್ರಗಳನ್ನು ರಚಿಸಿದ್ದಾರೆ. ಇದರಲ್ಲಿ ಖಚಿತತೆ ಇರುವುದಿಲ್ಲ. ಈ ದೃಶ್ಯ ಇದೇ ಸ್ಥಳ ಅಥವಾ ಊರಿನದು ಎಂದು ಹೇಳಲಿಕ್ಕಾಗದು. ಅದನ್ನು ನಾವು ಬೇಕಾದ ಹಾಗೆ ಕಲ್ಪಿಸಿ ಕೊಳ್ಳಬಹುದು. ಇದಕ್ಕೆ ಇಲ್ಲಿನ ಶೈಲೀಕರಣವೇ ಕಾರಣ. ಒಂದರ ಹಿಂದೊಂದರಂತೆ ಅಡ್ಡಾದಿಡ್ಡಿಯಾಗಿ, ಸಾಲುಸಾಲಾಗಿ ಹರಡಿರುವ ಕಟ್ಟಡಗಳ ಸರಳೀಕೃತ, ಶೈಲಿಕೃತ ಆಕೃತಿಗಳು ! ಚದುರಿದಂತಿರುವ ಗಿಡ ಮರಗಳು, ಗುಡ್ಡ ಬೆಟ್ಟಗಳು ಇವರ ನಿಸರ್ಗ ಚಿತ್ರಗಳಲ್ಲಿವೆ. ಹಾಗಿದ್ದರೂ ಇವು ಯಾವುದೇ ವಾಸ್ತವ ಸ್ಥಳ ಒಂದರ ಯಥಾವತ್ ಚಿತ್ರವಲ್ಲ. ಯಥಾದರ್ಶನಕ್ಕೆ ಅನುಗುಣವಾಗಿ ದೂರದ ದೃಶ್ಯಗಳನ್ನು ಚಿಕ್ಕದಾಗಿಸುತ್ತಾ ಸಾಗಿರುವದರಿಂದ ಇಲ್ಲಿ ದೂರದ ಆಳದ ಭಾವನೆ ಆಗುವಂತಿದೆ. ಪಾಟೀಲರು ಜಲವರ್ಣ, ಅಕ್ರಾಲಿಕ್, ಎರಡೂ ಮಾಧ್ಯಮಗಳನ್ನು ದುಡಿಸಿಕೊಂಡಿದ್ದಾರೆ. ಅಲ್ಲದೆ ಜಲವರ್ಣದ ಹರಿಯುವ ಗುಣ ಹಾಗೂ ತೈಲವರ್ಣಗಳ ಅಪಾರದರ್ಶಕತೆಗಳನ್ನು ಏಕಕಾಲದಲ್ಲಿ ಒಂದೇ ಕೃತಿಯಲ್ಲಿ ತಂದಿದ್ದಾರೆ. ಜೊತೆಗೆ ಪದರ

ಪದರಗಳಾಗಿ ಬಣ್ಣ ಹಚ್ಚಿ ಕೃತಿ ರಚಿಸಿಸಿದ್ದಾರೆ. ಕೆಲವಡೆ ಒಣಕುಂಚಗಳನ್ನು ತಿಕ್ಕುವ ವಿಧಾನದಲ್ಲಿ ವರ್ಣಗಳನ್ನು ನಿರ್ವಹಿಸಿರುವುದರಿಂದ ಒಳ್ಳೆಯ ಮೈವಳಿಕೆಗಳು ಉಂಟಾಗಿವೆ. ಪಾಟೀಲರು ತಮ್ಮ ಕಲಾತಂತ್ರದಲ್ಲಿ ಭಾವಚಿತ್ರ ರಚನೆಗೆ ವಿಶಿಷ್ಟ ಆದ್ಯತೆ ಕೊಟ್ಟಿದ್ದಾರೆ. ಪ್ರಭಾವ, ಪ್ರೇರಣೆಗಳು ಹಾಗೂ ಅನುಭವದ ಸಮ್ಮಿಶ್ರಣ ಪಾಕವನ್ನು ಭಾವಚಿತ್ರ ರಚನೆಯಲ್ಲಿ ಎರಕ ಹೊಯ್ದಿದ್ದಾರೆ. ಸಂಯೋಜನೆಯ ತತ್ವಗಳು, ಯಥಾದರ್ಶನದ ನಿಯಮಗಳು, ಆಧುನಿಕ ಶೈಲಿಗಳು, ಗ್ರಾಮೀಣ ಜನಪದ ಪ್ರಭಾವಗಳು ಇವರ ಭಾವಚಿತ್ರ ರಚನೆಯಲ್ಲಿ ಕಾಲಕಾಲಕ್ಕೆ ಕಂಡು ಬಂದಿವೆ. ವಿಶೇಷವಾಗಿ ಪ್ರಾರಂಭಿಕ ಹಂತದ ಭಾವಚಿತ್ರಗಳು ಅಕಾಡಮಿಕ್ ಶೈಲಿಯಲ್ಲಿ ರಚನೆಯಾಗಿವೆ.

ನೈಜವಾದ ಭಾವಚಿತ್ರ ರಚಿಸುವಾಗ ವ್ಯಕ್ತಿಯ ಆಕಾರ, ಅವನ ಮುಖದ ಲಕ್ಷಣ, ಕಣ್ಣು ಕಿವಿ, ಬಾಯಿ, ತುಟಿ, ಕೂದಲು, ದೇಹ ರಚನೆ ಹೀಗೆ ಪ್ರತಿಯೊಂದನ್ನು ನೋಡಿ ಪ್ರಮಾಣ ಬದ್ಧವಾಗಿ ಚಿತ್ರಿಸಿಕೊಂಡು ನಂತರ ವರ್ಣ ಲೇಪನದಲ್ಲಿ ನೆರಳು ಬೆಳಕನ್ನು ಚಿತ್ರಿಸಬೇಕು. ಈ ಸಂದರ್ಭದಲ್ಲಿ ರೂಪದರ್ಶಿಯ ಹೋಲಿಕೆ, ಭಾವನೆಗಳು ಮಹತ್ವದ್ದಾಗಿವೆ. ಪಾಟೀಲರ ಭಾವಚಿತ್ರ ರಚನೆ ಹಾಗೂ ವ್ಯಕ್ತಿಚಿತ್ರ ರಚನಾ ವಿಧಾನಗಳು ವೈವಿಧ್ಯಮಯ ಪ್ರಭಾವಗಳಿಗೆ ಒಳಗಾಗಿವೆ. ಅಂತಹ ಪ್ರಭಾವಗಳು ಅವರ ಕಲಾಕೃತಿಗಳಲ್ಲಿ ಕಾಲಕಾಲಕ್ಕೆ ಅನಾವರಣ ಗೊಂಡಿರುವುದು ಕಂಡು ಬರುತ್ತದೆ. ಅದೇ ರೀತಿ ಅವರ ಒಟ್ಟು ಚಿತ್ರಕಲಾ ಬದುಕು ಹತ್ತು ಹಲವು ಪ್ರಭಾವಗಳಿಗೆ ಒಳಗಾಗಿದ್ದು ತಿಳಿದು ಬರುತ್ತದೆ.

ಪಾಟೀಲರು ಬಾಲ್ಯದಲ್ಲಿಯೇ ತಮ್ಮ ಗ್ರಾಮದ ಪರಿಸರದಿಂದ ಪ್ರಭಾವಿತರಾಗಿದ್ದರು. ಅವರು ಬಾಲ್ಯದಲ್ಲಿ ತಮಗೆ ಸಿಕ್ಕ ಇದ್ದಿಲು, ಮಣ್ಣು, ಬಣ್ಣದ ಪೇಪರ್‌ಗಳಲ್ಲಿ ತಮಗೆ ತೋಚಿದ ಆಕೃತಿಗಳನ್ನು ಮಾಡುತ್ತಿದ್ದರು ಸಾಮಾನ್ಯವಾಗಿ ಬಾಲ್ಯದ ದಿನಗಳಲ್ಲಿ ಪ್ರತಿಯೊಬ್ಬ ವ್ಯಕ್ತಿಯು ಇಂತಹ ಕಲೆಯಿಂದ ಪ್ರಭಾವಿತನಾಗಿರುತ್ತಾನೆ. ಮುಂಬೈನ ಕಲಾಶಾಲೆಯಲ್ಲಿ ಜಿ. ಎಸ್. ದಂಡಾವತಿಮಠರವರು ಹಲವಾರು ರೀತಿಯಿಂದ ಸಹಾಯ ಮಾಡುತ್ತಾ ಕಲೆ ಹಾಗೂ ವೈಯಕ್ತಿಕ ಜೀವನದಲ್ಲಿ ಪಾಟೀಲರ ಮೇಲೆ ಪ್ರಭಾವ ಬೀರಿದರು. ಆಗ ಮುಂಬೈ ಮಹಾನಗರ ಒಂದು ಸಾಂಸ್ಕೃತಿಕ ಕೇಂದ್ರವೆನಿಸಿಕೊಂಡಿತ್ತು. ಅಲ್ಲಿ ಪ್ರತಿದಿನ ಏನಾದರೂ ಒಂದು ಸಾಂಸ್ಕೃತಿಕ ಕಾರ್ಯಕ್ರಮಗಳು ನಡೆದೇ ಇರುತ್ತಿದ್ದವು. ಹೀಗಾಗಿ ಮುಂಬೈ ನಗರ ಪಾಟೀಲರ ಜೀವನದಲ್ಲಿ ಕಲೆಯ ದೃಷ್ಟಿಯಿಂದ ಸಾಕಷ್ಟು ಪ್ರಭಾವ ಬೀರಿತ್ತು. ಅಲ್ಲಿರುವ ಜೆ. ಜೆ. ಕಲಾಶಾಲೆ ಹಾಗೂ ಹಲವಾರು ಕಲಾವಿದರ ಕಲಾಕೃತಿಗಳಿಂದಲೂ ಅವರು ಪ್ರಭಾವಿತರಾದರು. ಕಲಾ ಶಿಕ್ಷಣದಲ್ಲಿ ದಂಡಾವತಿಮಠರಲ್ಲದೆ ಇತರ ಶಿಕ್ಷಕರಿಂದಲೂ ತುಂಬಾ ಪ್ರಭಾವಿತನಾಗಿದ್ದೇನೆ ಎಂದು ಅವರು

ಹೇಳಿಕೊಳ್ಳುತ್ತಾರೆ. ಪಾಟೀಲರು ಹೇಳುವಂತೆ ಅಲ್ಲಿನ ಕಿರಿಯ ಕಲಾವಿದರು, ಕಲಾ ಶಾಲೆಯಲ್ಲಿ ಕಲಿಯುತ್ತಿದ್ದ ವಿದ್ಯಾರ್ಥಿಗಳಿಂದಲೂ ಪ್ರಭಾವಿತರಾಗಿದ್ದಾರೆ. ಇವರು ತಮ್ಮ ಕಲಾ ಪ್ರದರ್ಶನ ಮಾಡಿದ ಪ್ರತಿ ಬಾರಿಯೂ ಹೊಸತನ್ನು ಕಲಿಯುತ್ತಿದ್ದರು. ಅಲ್ಲಿನ ಕಲಾವಿಮರ್ಶೆಯನ್ನು ಗಮನಿಸುತ್ತಿದ್ದೆ ಎಂದು ಹೇಳುತ್ತಾರೆ.

ಒಂದು ಪ್ರದರ್ಶನದಲ್ಲಿ ನೆಡೆದಿರಬಹುದಾದ ದೋಷಗಳನ್ನು ಮುಂದಿನ ಪ್ರದರ್ಶನದಲ್ಲಿ ಸಾಧ್ಯವಾದಷ್ಟು ತಿದ್ದಿಕೊಳ್ಳಲು ಪ್ರಯತ್ನಿಸುತ್ತಿದ್ದರಲ್ಲದೆ ಕಲಾವಿಮರ್ಶೆಯಲ್ಲಿ. ಬಂದಂತಹ ಸಲಹೆ ಸೂಚನೆಗಳನ್ನು ಅನುಸರಿಸಿ ಕೃತಿ ರಚಿಸುವ ಪ್ರಯತ್ನ ಮಾಡುತ್ತಿದ್ದರು. ಇದರಿಂದಾಗಿ ಅವರು ಒಬ್ಬ ಕಲಾವಿದನಾಗಿ ಬೆಳೆಯಲು ಸಾಧ್ಯವಾಯಿತು. ಅಕಾಡಮಿಕ್ ಶೈಲಿಯಲ್ಲಿ ಕಲಾಶಿಕ್ಷಣ ಪಡೆದಿದ್ದರೂ ಪಾಶ್ಚಾತ್ಯ ಕಲಾ ಪರಂಪರೆಯನ್ನು ಅಭ್ಯಾಸ ಮಾಡಿದರು. ಕಲಾವಾದಗಳನ್ನು ಅಭಿವ್ಯಕ್ತಿಸಲು ಪ್ರಯತ್ನಿಸಿದರು.

ಪಾಟೀಲರು ಹತ್ತು ಹಲವು ರೀತಿಯ ಪ್ರಭಾವಗಳಿಗೆ ಒಳಗಾದರೂ ಆ ಪ್ರಭಾವವನ್ನು ತಮ್ಮ ಸ್ವಂತಿಕೆಯಲ್ಲಿ ಪರಿವರ್ತಿಸುವ ಸೃಜನಶೀಲತೆ ಪಾಟೀಲರಿಗಿದೆ. ಕರ್ನಾಟಕ ಕಲಾಕ್ಷೇತ್ರದಲ್ಲಿ ಪ್ರಖ್ಯಾತರಾದ ಆರ್. ಎಂ. ಹಡಪದ, ಹಿರೇಗೌಡರ್, ಅಕ್ಕಿ, ಅಂದಾನಿ, ಖಂಡೇರಾವ್, ಕಾಚಾಪೂರ್, ವಿಜಯಸಿಂಧೂರ್, ವಾಸುದೇವ, ಪೀಟರ್ ಲೂಯಿಸ್, ಚಿ.ಸು.ಕೃಷ್ಣಶೆಟ್ಟಿ, ಮುಂತಾದವರ ಒಡನಾಟ, ಕಲಾ ಬದುಕಿನಲ್ಲಿ ಸ್ನೇಹಮಯ ಪ್ರಭಾವ ಆಗಿದೆ ಎನ್ನುತ್ತಾರೆ.

ಚಿತ್ರಕಲೆಯಲ್ಲಿ ನವ್ಯಶೈಲಿಯ ಅವಿಷ್ಕಾರವಾದ ಮೇಲೆ ಪ್ರೇಕ್ಷಕರ ದೃಷ್ಟಿಯಲ್ಲಿ ಅದು ಹೆಚ್ಚು ಸರಳವೆನ್ನಿಸುವ ಬದಲು ಇನ್ನಷ್ಟು ನಿಗೂಢವೆನಿಸತೊಡಗಿದೆ. ಸಾಹಿತ್ಯದಲ್ಲಿನ ಉತ್ತಮ ಕೃತಿಗಳನ್ನು ಓದಿ ಅರಗಿಸಿಕೊಳ್ಳಬೇಕಾದರೆ ಹೇಗೆ ಒಂದು ಮಟ್ಟದ ಅಭ್ಯಾಸ ಅಗತ್ಯವೋ ಹಾಗೆಯೇ ಚಿತ್ರಕಲೆಯನ್ನು ಸಹ ಅಳೆದು, ಮೆಚ್ಚಿಕೊಳ್ಳಲು ಆ ಕ್ಷೇತ್ರದಲ್ಲಿ ಅಭ್ಯಾಸ ಅಗತ್ಯ ನವ್ಯಶೈಲಿಯ ಕಲಾವಿದರು ಎದುರು ಕಂಡ ಬಿಂಬವನ್ನು ಯಥಾವತ್ತಾಗಿ ಕೃತಿಯಲ್ಲಿ ನಿರೂಪಿಸದೇ ಅದನ್ನು ತನ್ನ ಅನುಭವಕ್ಕೆ ಬಂದಂತೆ ಹಾಗು ವಸ್ತುವಿನಾಚೆಗೆ ಇರುವ ಅದರ ಮತ್ತೊಂದು ರೂಪವನ್ನು ರಚಿಸಲು ಪ್ರಯತ್ನಿಸುತ್ತಾನೆ ಎಂಬುದು ಇವರ ಅನಿಸಿಕೆಯಾಗಿದೆ. ಪಾಟೀಲರು ಅಭಿವ್ಯಕ್ತಿ ಕ್ರಮಕ್ಕೆ ಕಟ್ಟು ಪಾಡುಗಳನ್ನು ವಿಧಿಸಿದ್ದೇ ಆಗಿದ್ದರೆ ಇಂದು ಅವರು ಕರ್ನಾಟಕದ ಶ್ರೇಷ್ಠ ಕಲಾವಿದರಾಗಿ ಬೆಳೆಯುತ್ತಿರಲಿಲ್ಲ. ಇದಕ್ಕಿಂತಲೂ ಹೆಚ್ಚಾಗಿ ಕರ್ನಾಟಕದ ಆಧುನಿಕ ಕಲಾ ಪ್ರಪಂಚವೂ ಬೆಳೆಯುತ್ತಿರಲಿಲ್ಲ ವೆಂಬುದನ್ನು ಗಮನಿಸಬೇಕಾಗುತ್ತದೆ. ಪಾಟೀಲರು ವಾರ್ತಾ ಮತ್ತು ಪ್ರಚಾರ ಇಲಾಖೆಯಲ್ಲಿ ಇದ್ದರೂ, ಪ್ರಚಾರ ಮಾಧ್ಯಮಗಳಿಂದ ದೂರವಿದ್ದರು. ಅವರಿಗೆ

ಮಾಧ್ಯಮದವರು ಕೇಳುವ ಪ್ರಶ್ನೆಗಳಿಗೆ ಉತ್ತರಿಸುವ ವ್ಯವಧಾನವಿರಲಿಲ್ಲ. ಮಾಧ್ಯಮದವರು ಪಾಟೀಲರನ್ನು ಅವರ ಶೈಲಿಯಲ್ಲಿ ಪರಿಚಯಿಸುವ ಕೆಲಸವನ್ನು ಮಾಡಲಿಲ್ಲ. ಪಾಟೀಲರಿಗೆ ಪ್ರಚಾರಕ್ಕಾಗಿ ಕೈ ಒಡ್ಡುವ ಅದಕ್ಕಾಗಿ ಮತ್ತೊಬ್ಬರಿಂದ ಪ್ರಭಾವ ಬೀರುವ ತಂತ್ರ ಗೊತ್ತಿರದೇ ಇದ್ದುದರಿಂದ ಆ ಹಲವು ಅವಕಾಶಗಳಿಂದ ವಂಚಿತರಾದರು. ವಿವಿಧ ಮಾಧ್ಯಮಗಳು, ತಂತ್ರಗಳ ಮೂಲಕ ವೈವಿದ್ಯತೆಯನ್ನು ತಮ್ಮ ಬಂಡವಾಳವನ್ನಾಗಿಸಿಕೊಂಡ ಇವರ ಕೃತಿಗಳನ್ನು ಯಾವುದಾದರೂ ಒಂದು ನಿರ್ಧಿಷ್ಟ ಸೂತ್ರದಡಿಯಲ್ಲಿ ವರ್ಣಿಸುವುದು. ಅಸಾಧ್ಯ ಎಂದು ಹೇಳಬಹುದು.

ಪಾಟೀಲರು ಕಲೆಯನ್ನು ಜನಪರವಾಗಿ, ಬದುಕಿನ ಸಾರ್ಥಕತೆಗಾಗಿ ಎಂದು ಕೊಂಡು ಬಳಸಿಕೊಂಡವರು. ತಮ್ಮ ನಿರಂತರ ಕಲಾಸೃಷ್ಟಿಯಲ್ಲಿ ವೈವಿಧ್ಯಮಯ, ಕಲಾಕೃತಿಗಳನ್ನು ರಚಿಸುವ ಮೂಲಕ ಇದನ್ನು ಸಾಬೀತು ಮಾಡಿದ್ದಾರೆ. ಸಾಮಾಜಿಕ ನಿಲುವಿನ ಕೃತಿಗಳನ್ನು ರಚಿಸುತ್ತಲೇ ಇದ್ದಾರೆ. ಹೀಗಾಗಿ ಸಾಮಾಜಿಕ ನಿಲುವಿನ ಕಲಾಸೃಷ್ಠಿಗಳಲ್ಲಿ ಸರಳವಾದ ರಚನೆಗೆ ಹೆಚ್ಚಿನ ಪ್ರಾಶಸ್ತ್ಯವನ್ನು ಪ್ರಕಟಿಸಿದ್ದಾರೆ. ಸಾಮಾಜಿಕ ಒಲವನ್ನು ದೃಶ್ಯದ ಮೂಲಕ ಅಭಿವ್ಯಕ್ತಗೊಳಿಸುವುದು ಸುಲಭವಾದುದಲ್ಲ. ಪಾಟೀಲರು ಬಹುತೇಕ ಇಲ್ಲಿ ಸಂಕೇತಗಳ ಮೂಲಕವೇ ಸಾಮಾಜಿಕ ಚಿಂತನೆಗಳನ್ನು ಅಭಿವ್ಯಕ್ತಗೊಳಿಸಿರುವುದು ಕಂಡುಬರುತ್ತದೆ. ಚಿತ್ರದ ವಸ್ತುವಿಗೆತಕ್ಕಂತೆ  ಸಂಕೇತಗಳನ್ನು ಸತ್ವಯುತವಾಗಿ ದುಡಿಸಿಕೊಳ್ಳುವುದರಿಂದ ಕಲಾಕೃತಿಗಳು ಗಟ್ಟಿಗೊಳ್ಳುತ್ತವೆ. ಇಲ್ಲಿನ ಕಲಾಕೃತಿಗಳ ರೂಪಗಳು ಮತ್ತು ರಚನಾ ಶೈಲಿಗಳು ಆಧುನಿಕ ಸಂದರ್ಭದ ಕೃತಿಗಳಿಗಿಂತ ತೀರ ಸರಳವಾಗಿವೆ. ಸಾಮಾಜಿಕ ವಸ್ತುವಿನ ಅಭಿವ್ಯಕ್ತಿಯಲ್ಲಿ ಸತ್ವ ಚೈತನ್ಯ ಇರುವುದರಿಂದಲೇ ಇವು ಸತ್ವಯುತವಾಗಿವೆ.

ಕಲಾವಿದನೊಬ್ಬನನ್ನು ಅರ್ಥಮಾಡಿಕೊಳ್ಳಲು ಅವನ ರೇಖಾಚಿತ್ರಗಳನ್ನು ವಿಶ್ಲೇಷಿಸಬೇಕು ಎನ್ನಲಾಗುತ್ತದೆ. ರೇಖಾಚಿತ್ರಗಳನ್ನು ಪೂರ್ಣ ಪ್ರಮಾಣದ ಕಲೆ ಎಂದು ಪರಿಗಣಿಸದೇ ಇದ್ದ ಕಾಲವೊಂದಿತ್ತು. ಆದರೆ ಕ್ರಮೇಣ ಅದರ ಮಹತ್ವ ಅರಿವಾಗಿ, ಇಂದು ಅತ್ಯಂತ ಸರಳವಾದ ರೇಖಾ ಚಿತ್ರಕ್ಕೂ ಒಂದು ವರ್ಣ ಚಿತ್ರಕ್ಕೆ ಇರುವಷ್ಟೇ ಮೌಲಿಕತೆ ಉಂಟಾಗಿದೆ. ಸಾಂಪ್ರದಾಯಿಕ ಮತ್ತು ಅಕಾಡಮಿಕ್ ಶೈಲಿಯಲ್ಲಿ ಯಾವುದೇ ಮಾಧ್ಯಮ ವೊಂದರಲ್ಲಿ ಕೃತಿ ರಚಿಸುವ ಮೊದಲು ಅದರ ಕರಡು ಚಿತ್ರಗಳನ್ನು ರೇಖಾ ಪ್ರಧಾನವಾಗಿ ರಚಿಸಿಕೊಳ್ಳಲಾಗುತ್ತಿತ್ತು, ಆದರೆ ಕ್ರಮೇಣ ರೇಖಾಚಿತ್ರಕ್ಕೆ ತನ್ನದೇಆದ ವಿಶಿಷ್ಟ ಪರಿಣಾಮ ಬೀರುವ ಶಕ್ತಿಯಿದೆ ಎಂಬುದನ್ನರಿತ ಕಲಾವಿದರು ಅದನ್ನೇ ಒಂದು ಪೂರ್ಣ ಪ್ರಮಾಣದ ಕಲೆ ಎಂದು

ಸ್ವೀಕರಿಸಲಾರಂಭಿಸಿದರು. ಇತ್ತೀಚಿನ ಭಾರತದ ಸಮಕಾಲೀನ ಕಲೆಯಲ್ಲಿ ಕಂಡು ಬರುವ ಹಲವಾರು ಒಲವುಗಳಲ್ಲಿ ರೇಖಾಚಿತ್ರವನ್ನು ಪೂರ್ಣ ಹಾಗೂ ತೃಪ್ತಿಕರ ಅಭಿವ್ಯಕ್ತಿಯ ಸಾಧನವನ್ನಾಗಿ ಆರಿಸಿಕೊಂಡದ್ದು ಗಮನಾರ್ಹ ಅಂಶ. ಏಕೆಂದರೆ ಪೂರ್ಣತೆಯನ್ನು ಅಭಿವ್ಯಕ್ತಿಸುವುದಕ್ಕಿಂತ ಸೂಚ್ಯವಾಗಿ ಹೇಳುವುದೆ ಕಲಾವಿದರ ಆಶಯವಾಗುತ್ತಿರುವುದರಿಂದ ಈ ಮಾಧ್ಯಮ ಅದಕ್ಕೆ ಸಮರ್ಥವಾಗಿದೆ ಎನ್ನುವ ಭಾವನೆ ಬೆಳೆಯುತ್ತಿದೆ. ಇಂತಹ ಆಧುನಿಕ ಮನೋಭಾವ ಹೊಂದಿದ ಕಲಾವಿದರಲ್ಲಿ ಪಾಟೀಲರು ಒಬ್ಬರಾಗಿದ್ದಾರೆ.

ಪಾಟೀಲರ ಕೃತಿಗಳಲ್ಲಿ ಅತ್ಯಂತ ಸೂಕ್ಷ್ಮ ಹಾಗೂ ನವಿರಾದ ರೇಖೆಗಳಿದ್ದು ಚಿತ್ರವನ್ನು ಆಧುನಿಕ ದೃಷ್ಟಿಯಿಂದ ನೋಡುವ ಪ್ರಯತ್ನವಿದೆ. ಅವರು ಕಲಾಕೃತಿಯೊಂದಕ್ಕೆ ಅಗತ್ಯವಾದ ಕಲಾತ್ಮಕ ಗುಣಗಳನ್ನು ಸಂದರ್ಭ ಚಿತ್ರಗಳಲ್ಲಿ ಸೀಮಿತಗೊಳಿಸಿ ಅವನ್ನು ಕಲಾಕೃತಿಯನ್ನಾಗಿಸುವ ಪ್ರಯತ್ನ ಮಾಡಿದ್ದಾರೆ. ಕೆಲವು ಕೃತಿಗಳಲ್ಲಿ ಮೈಯಲ್ಲಿನ ಮಾಂಸವೇ ಮಾತನಾಡುವಂತಿವೆ. ಪಾಟೀಲರ ರೇಖಾ ಚಿತ್ರಗಳು ನಿರಾತಂಕ ಅಭಿವ್ಯಕ್ತಿಯ ಮಾಧ್ಯಮ ಎನ್ನವುದನ್ನು ಗೋಚರಿಸುತ್ತದೆ. ಕಲಾಕೃತಿಗಳಲ್ಲಿ ತೀವ್ರಗತಿಯಿಂದ ಹಿಡಿದು ಅಲ್ಲಲ್ಲಿ ನಿಲ್ಲುತ್ತ ವಿಶಿಷ್ಟ ಪರಿಣಾಮ ಬೀರುವ ಇವರ ರೇಖೆಗಳು, ನಿರ್ಧಿಷ್ಟ ಭಾವನೆಯೊಂದನ್ನು ಅಭಿವ್ಯಕ್ತಿಸುತ್ತವೆ. ಇತ್ತೀಚಿನ ಇವರ ಕೃತಿಗಳಲ್ಲಿ ಮಾನವ ಹಾಗೂ ಪ್ರಾಣಿಗಳ ಭಾವೈಕ್ಯತೆಯನ್ನು ಕಾಣುತ್ತೇವೆ. ಅಂತೆಯೇ ಪುರಾಣ, ಜನಪದೀಯ ಅಂಶಗಳು ಹಾಗೂ ಶಿಲ್ಪಕಲೆಗಳ ಸಮನ್ವಯ ಇವರ ರೇಖಾ ಚಿತ್ರಗಳಲ್ಲಿದೆ. ತಮ್ಮ ಎಂದಿನ ನಿಶ್ಚಿತ ಶೈಲಿಯಲ್ಲಿ ಅಂದರೆ ತಮ್ಮ ವರ್ಣಚಿತ್ರಗಳಲ್ಲಿ ರೂಪಿಸಿದಂತಹ ಆಕೃತಿ, ವಸ್ತು, ಸಂಯೋಜನೆಗಳನ್ನು ರೇಖಾಮಾಧ್ಯಮದಲ್ಲಿಯೂ ಸೃಷ್ಟಿಸಿದ್ದಾರೆ.

**ಭಿತ್ತಿ ಚಿತ್ರಕಲೆಯ ಶೈಲಿ :**

ಭಿತ್ತಿ ಚಿತ್ರ ರಚನೆಯಲ್ಲಿ ಪ್ರಾಚೀನ ಪರಂಪರೆ ಭಾರತದಲ್ಲಿ ಶ್ರೀಮಂತವಾಗಿ ಬೆಳೆದು ಬಂದಿದೆ. ಭಿತ್ತಿ ಹಸಿ ಇರುವಾಗ ಚಿತ್ರ ರಚಿಸುವುದು, ಹಾಗೂ ಭಿತ್ತಿ ಒಣಗಿದ ಮೇಲೆ ಚಿತ್ರ ರಚಿಸುವ ಪದ್ಧತಿಗಳು ಪ್ರಚಲಿತದಲ್ಲಿದ್ದುದು ತಿಳಿದು ಬರುತ್ತದೆ. ಹಿಂದೆ ಭಿತ್ತಿಚಿತ್ರ ಎಂದರೆ ಕೇವಲ ಗೋಡೆ ಮೇಲಿನ ವರ್ಣಚಿತ್ರಗಳನ್ನು ಮಾತ್ರ ಪರಿಗಣಿಸಲಾಗುತ್ತಿತ್ತು. ಆದರೆ ಇಂದಿನ ಆಧುನಿಕ ಸಂದರ್ಭದಲ್ಲಿ ಭಿತ್ತಿಚಿತ್ರ ಎಂದರೆ ಚಿತ್ರ, ಶಿಲ್ಪ, ಸಮ್ಮಿಶ್ರ ಮಾಧ್ಯಮಗಳನ್ನೊಳಗೊಂಡ ಗೋಡೆಯ ಮೇಲೆ ರಚಿಸಿದ ಕಲಾಕೃತಿ ಎಂದು ಪರಿಗಣಿಸಲಾಗುತ್ತದೆ. ಅಂದರೆ ಭಿತ್ತಿ ಚಿತ್ರಕ್ಕೆ ಹಿಂದಿದ್ದ ಸೀಮಿತ ವ್ಯಾಪ್ತಿ ಇಂದು ವಿಶಾಲವಾಗಿದೆ. ಆಧುನಿಕ ಸಂದರ್ಭದಲ್ಲಿ ಭಿತ್ತಿಚಿತ್ರಗಳನ್ನು ವರ್ಣಗಳಿಂದ, ಶಿಲ್ಪಗಳಿಂದ, ಸಿಮೆಂಟನಿಂದ, ಪ್ಲಾಸ್ಟರ ಮಾಧ್ಯಮದಿಂದ, ಕಟ್ಟಿಗೆಯಿಂದ, ಗಾಜು,

ಲೋಹ, ಮಡಿಕೆ ಚೂರುಗಳು, ಸೂಡುಬಿಲ್ಲೆಗಳು, ಹೀಗೆ ಹತ್ತು ಹಲವು ಮಾಧ್ಯಮಗಳಲ್ಲದೆ ಮಿಶ್ರ ಮಾಧ್ಯಮಗಳಿಂದಲೂ ಭಿತ್ತಿಚಿತ್ರ ರಚನೆ ಮಾಡಲಾಗುತ್ತದೆ. ಇದೆ ರೀತಿಯ ಆಧುನಿಕ ತಂತ್ರಗಾರಿಕೆಯಲ್ಲಿ ಪಾಟೀಲರು ಹಲವಾರು ಭಿತ್ತಿಚಿತ್ರಗಳನ್ನು ರಚನೆ ಮಾಡಿದ್ದಾರೆ. ಅವರ ಭಿತ್ತಿಚಿತ್ರ ತಂತ್ರಗಾರಿಕೆಯನ್ನು ಕೆಲವು ಕಲಾಕೃತಿಗಳ ಉದಾಹರಣೆಗಳೊಂದಿಗೆ ಸ್ಥೂಲವಾಗಿ ವಿವೇಚಿಸಲಾಗಿದೆ.

ಪಾಟೀಲರು ಜಲವರ್ಣದಿಂದ ಮಿಶ್ರ ಮಾಧ್ಯಮಗಳಿಂದಲೂ ಭಿತ್ತಿ ಚಿತ್ರವನ್ನು ರಚಿಸಿದ್ದಾರೆ. ಇನ್ನೂ ಕೆಲವು ಸಂದರ್ಭದಲ್ಲಿ ಟೆಂಪರಾ, ಟೆರ್ರಾಕೂಟ ತಂತ್ರ ವಿಧಾನಗಳಲ್ಲಿ ಭಿತ್ತಿ ಚಿತ್ರವನ್ನು ರಚಿಸಿದ್ದಾರೆ. ಇಂತಹ ಎಲ್ಲಾ ತಂತ್ರ ವಿಧಾನದಲ್ಲಿ ಪಾಟೀಲರು ಸುಮಾರು ೧೦ ರಿಂದ ೪೧ ಅಡಿ ಎತ್ತರದ ಭಿತ್ತಿ ಚಿತ್ರವನ್ನು ಸಹಿತ ರಚಿಸಿದ್ದಾರೆ. ತಮ್ಮ ಜೀವನದುದ್ದಕ್ಕೂ ಹಲವಾರು ಭಿತ್ತಿ ಚಿತ್ರವನ್ನು ರಚಿಸಿದ್ದಾರೆ. ಗೋಡೆ, ರಟ್ಟು, ಬೋರ್ಡ, ಬಸ್ಸು ಹೀಗೆ ಅನೇಕ ಮಾಧ್ಯಮದ ಮೇಲೆ ಭಿತ್ತಿ ಚಿತ್ರವನ್ನು ರಚಿಸಿದ್ದಾರೆ. ಮನೆಯೊಂದರ ಗೋಡೆಯ ಮುಂಭಾಗದಲ್ಲಿ ರಚಿಸಿದ ಪ್ರಮುಖ ಭಿತ್ತಿಚಿತ್ರಕೃತಿಯೊಂದು ಸಿಮೆಂಟ್ ಮಾಧ್ಯಮದಲ್ಲಿ ರಚಿಸಲ್ಪಟ್ಟಿದೆ. ಈ ಭಿತ್ತಿ ಚಿತ್ರವು ಪ್ರಕೃತಿಯ ಸೌಂದರ್ಯವನ್ನು ಪ್ರತಿಬಿಂಬಿಸುತ್ತದೆ. ಪ್ರಕೃತಿಯಲ್ಲಿ ಇರುವ, ಸೂರ್ಯ, ನೀರು, ಗಾಳಿ, ಪ್ರಾಣಿ, ಪಕ್ಷಿ, ಮನುಷ್ಯ ಎಲ್ಲವನ್ನು ಮಾಧ್ಯಮಕ್ಕೆ ತಕ್ಕಂತೆ ಅವಕಾಶದಲ್ಲಿ ಹಂಚಿಕೆಯನ್ನು ಮಾಡಿ ಸಂಯೋಜನೆ ಮಾಡಿದ್ದಾರೆ. ಜ್ಯಾಮಿತಿಯ ನಕ್ಷೆಯನ್ನು ಉಪಯೋಗಿಸಿ ಆಕಾರಗಳನ್ನು ರಚಿಸಲಾಗಿದೆ. ಗುಲಾಬಿ, ಬಿಳಿ, ಹಳದಿ ಬಣ್ಣಲೇಪಿಸಿದ ಈ ಭಿತ್ತಿ ಅತ್ಯಂತ ಸುಂದರವಾಗಿದೆ.

**ವುಡ್ ಬರ್ನಿಂಗ್ ಚಿತ್ರಗಳ ತಾಂತ್ರಿಕತೆ :**

ಕಟ್ಟಿಗೆಯ ಫಲಕದ ಮೇಲೆ ಸುಟ್ಟು ಮಾಡಲಾಗುವ ಚಿತ್ರಗಳನ್ನು ಉಡ್ ಬರ್ನಿಂಗ್ ಕಲಾಕೃತಿಗಳೆಂದು ಕರೆಯುತ್ತಾರೆ. ಅಲ್ಲದೆ ಬ್ಲೂಟಾರ್ಚ್‌ರ್ ಎಂತಲೂ ಕರೆಯುತ್ತಾರೆ. ಇಲ್ಲಿ ಮೊದಲಿಗೆ ಪ್ಲೈವುಡ್ ಮೇಲೆ ನಮಗೆ ಬೇಕಾದ ಚಿತ್ರವನ್ನು ರಚಿಸಿ, ಅದಕ್ಕೆ ಬ್ಲೂ ಟಾರ್ಚ್‌ನಿಂದ ಬರ್ನ್ ಮಾಡಬೇಕು. ಮೊದಲು ಚಾಕ್ ಪೌಡರನ್ನು ಹಾಕಿ ಅದರಿಂದ ಚಿತ್ರ ರಚಿಸಿ ಚಿತ್ರದ ಹೊರರೇಖೆಯನ್ನು ಸುಡಬೇಕು. ರೇಖೆ ಇದ್ದ ಸ್ಥಳ ಬಿಳಿಯಾಗಿ ಹಾಗೆ ಉಳಿದು, ಉಳಿದ ಭಾಗ ಸುಟ್ಟು ಕಪ್ಪಗೆ ಆಗಿರುತ್ತದೆ. ಇದು ಸುಂದರವಾಗಿ ಕಂಡು ಬರುತ್ತದೆ. ಇದಲ್ಲದೆ ಅನೇಕ ವಸ್ತುಗಳನ್ನು ಬಳಸಿ ಕಾಲಿ ಸ್ಥಳ ತುಂಬಲಾಗುತ್ತದೆ. ಇದಕ್ಕಾಗಿ ಸ್ಟೀಲ್ ತುಂಡು, ನಟ್, ಬೊಲ್ಟ್, ಮಳೆ, ಅನೇಕ ಆಕಾರದ ವಸ್ತು ಬಳಸಿ ಬರ್ನ್ ಮಾಡಿ ತ್ರಿ

ಆಯಾಮ ತರಲಾಗುತ್ತದೆ. ಪಾಟೀಲರು ವರ್ಣಚಿತ್ರಗಳ ಜೊತೆಗೆ ಇಂತಹ ವುಡ್ ಬರ್ನಿಂಗ್ ಕಲಾಕೃತಿಗಳನ್ನು ಪರಿಣಾಮಕಾರಿಯಾಗಿ ರಚಿಸಿದ್ದಾರೆ.

**ಅಮೂರ್ತ ಚಿತ್ರಕಲೆಯ ತಾಂತ್ರಿಕತೆ :**

ಪಾಟೀಲರು ಅಕಾಡಮಿಕ್ ಶೈಲಿಯಲ್ಲಿ ಚಿತ್ರಿಸುತ್ತಿದ್ದವರು ನಂತರ ಆಧುನಿಕ ಶೈಲಿಯಲ್ಲಿ ಮತ್ತು ಅಮೂರ್ತ ಶೈಲಿಯಲ್ಲಿ ಚಿತ್ರಿಸತೊಡಗಿದರು. ಇವರು ಅಕಾಡೆಮಿಕ್ ಶೈಲಿಯಿಂದ ಹೊರಬರಲು ಮತ್ತು ಅದರಲ್ಲಿ ಹೊಸತನವನ್ನು ಕಂಡುಕೊಳ್ಳಲು ಹಲವಾರು ಪ್ರಯೋಗಗಳನ್ನು ಮಾಡಿದ್ದಾರೆ. ಅಂತಹ ಪ್ರಯೋಗಗಳಲ್ಲಿ ಅಮೂರ್ತ ಚಿತ್ರಗಳೂ ಸಹಿತ ಒಂದಾಗಿವೆ. ಅಮೂರ್ತಕಲೆ ಎನ್ನುವುದು ಕಲ್ಪನೆಯ ಅಸ್ಪಷ್ಟತೆ, ವಿರೂಪಗೊಳಿಸಿದ, ಅಮುಖ್ಯವಾದ ಆಕಾರಗಳು, ಒಂದು ಸಾರಾಂಶದಲ್ಲಿನ ಒಂದು ಭಾಗವೆಂತಲೂ ಹೇಳುತ್ತಾರೆ. ಅಪ್ರಜ್ಞಾಪೂರ್ವಕವಾಗಿ ಪ್ರಕಟವಾದ ಮನಸ್ಸಿನ ಅಭಿವ್ಯಕ್ತಿ ಅಥವಾ ವರ್ತನೆ ಎಂದು ಹೇಳಲಾಗುತ್ತದೆ. ಮನಸ್ಸಿನ ಭಾವನೆಗಳಲ್ಲಿ ಉತ್ಕಟವಾದ ತೀವ್ರತೆಯುಂಟಾದಾಗ, ಇದ್ದಕ್ಕಿದ್ದ ಹಾಗೆ ಹೊಳೆಯುವ ಅಸ್ಪಷ್ಟ ಕಲ್ಪನೆಗಳು, ಮಿಂಚಿ ಮಾಯವಾಗುವುದರೊಳಗೆ ಸೆರೆಹಿಡಿಯುವ ಅಥವಾ ಚಿತ್ರಿಸುವ ವಿಧಾನವಾಗಿದೆ.

ಇಂದಿನ ಸಮಕಾಲೀನ ಕಲಾವಿದರಲ್ಲಿ ಪಾಟೀಲರು ಒಂದೇ ಶೈಲಿ ಹಾಗೂ ತಂತ್ರಗಾರಿಕೆಗೆ ಬದ್ಧರಾಗಿರದೇ ಕಾಲಕ್ರಮದಲ್ಲಿ ಹಲವಾರು ಬದಲಾವಣೆಗಳನ್ನು ತಮ್ಮ ಕಲಾಕೃತಿಯಲ್ಲಿ ಅಳವಡಿಸಿಕೊಂಡು ಬಂದಿದ್ದಾರೆ. ಹಳ್ಳಿಯಮನೆ ಸರಣಿ ಚಿತ್ರಗಳು ಇವರ ಅಮೂರ್ತ ಚಿತ್ರ ರಚನೆಯ ತಂತ್ರಗಾರಿಕೆಗೆ ಉತ್ತಮ ಉದಾಹರಣೆಗಳಾಗಿವೆ.

**ಕೊಲಾಜ್ ತಂತ್ರಗಾರಿಕೆ :**

'ಕೊಲಾಜ್' ತಂತ್ರವು ಇಪ್ಪತ್ತನೆಯ ಶತಮಾನದ ಪ್ರಾರಂಭದಲ್ಲಿ ಬಳಕೆಗೆ ಬಂದಿತು. ಕೊಲಾಜ್ ಎಂಬುದು ಫ್ರೆಂಚ್‌ಪದ 'ಅಂಟಿಸು' 'ಜೋಡಿಸು' ಎಂಬುದಕ್ಕೆ ಸಮಾನವಾಗಿದೆ. ಕೊಲಾಜ್ ಕಲಾ ಪ್ರಕಾರವು ಪಾಶ್ಚಾತ್ಯರಿಂದ ಬಂದುದೆಂಬ ಕಲ್ಪನೆ ಇರುವುದಾದರೂ ಅದರ ಮೂಲ ಬೇರುಗಳು ನಮ್ಮ ಕೌದಿಕಲೆಯಲ್ಲಿ ಕಂಡು ಬರುತ್ತವೆ ಎಂಬುದು ಗಮನಾರ್ಹ ಸಂಗತಿಯಾಗಿದೆ. ಬಣ್ಣ ಬಣ್ಣದ ಬಟ್ಟೆಯ ತುಂಡುಗಳು, ವೃತ್ತ ಪತ್ರಿಕೆಯ ತುಂಡುಗಳು, ಸಿನಿಮಾ ಟಿಕೇಟುಗಳು, ತಗಡಿನ ತುಂಡುಗಳು, ಮರದ ತೊಗಟೆಗಳು ಮುಂತಾಗಿ ಯಾವುದೇ ವಸ್ತುಗಳನ್ನು ಕಾಗದದ ಮೇಲೆ ಗೋಂದಿನಿಂದ ಅಂಟಿಸಿ ಸ್ವತಂತ್ರವಾದ ಕಲಾಕೃತಿಗಳನ್ನು ರಚಿಸುವ ಜಾಣ್ಮೆಯೇ ಕೊಲಾಜ್ ಎಂದು ಗುರುತಿಸಲ್ಪಟ್ಟಿದೆ. ಮಾನೆ, ಸಿಝಾನೆ,

ಮಾತಿಸ್ಸೆ ಮುಂತಾದ ಕಲಾವಿದರು ಇಂತಹ ಅನೇಕ ಕಲಾಕೃತಿಗಳನ್ನು ರಚಿಸಿದ್ದು ಅವಶ್ಯವಿದ್ದಲ್ಲಿ ಬಣ್ಣವನ್ನು ರೇಖೆಗಳನ್ನು ಬಳಸಿರುವದು ಕಂಡುಬರುತ್ತದೆ. ಎಂ. ಬಿ. ಪಾಟೀಲರು ಹಲವಾರು ಕೋಲಾಜ್ ಕಲಾಕೃತಿಗಳನ್ನು ಇದೇ ತಂತ್ರಗಾರಿಕೆಯಲ್ಲಿ ಮಾಡಿರುವುದು ಕಂಡು ಬರುತ್ತದೆ.

**ಭಾವಚಿತ್ರ ತಂತ್ರಗಾರಿಕೆ :**

ಎಂ. ಬಿ. ಪಾಟೀಲರು ನಿಸರ್ಗ ಮತ್ತು ಸಂಯೋಜನಾ ಚಿತ್ರಗಳಂತೆ ಭಾವಚಿತ್ರ ರಚಿಸುವಲ್ಲಿಯೂ ಸಿದ್ಧಹಸ್ತರು. ಅಕಾಡೆಮಿಕ್ ಶೈಲಿಯ ಭಾವಚಿತ್ರ ರಚನೆ ಕ್ರಮೇಣವಾಗಿ ಕಲಾಕ್ಷೇತ್ರದಿಂದ ಕಣ್ಮರೆಯಾಗುತ್ತಿರುವಾಗ, ಅದನ್ನು ಜೀವಂತವಾಗಿಟ್ಟು ಅದರಲ್ಲಿ ಪ್ರಯೋಗಗಳನ್ನು ಮಾಡಿದ್ದಾರೆ. ಭಾವಚಿತ್ರ ರಚನೆಯಲ್ಲಿ ಹಲವು ವರ್ಷಗಳ ಸಾಧನೆಯಿಂದ ಜಲವರ್ಣ, ತೈಲವರ್ಣ ಮಿಶ್ರ ಮಾಧ್ಯಮಗಳಲ್ಲಿ ಪರಿಣಾಮಕಾರಿಯಾದ ತಂತ್ರಗಾರಿಕೆಯನ್ನು ಕಂಡುಕೊಂಡಿದ್ದಾರೆ.

ಜನಪ್ರಿಯವಾದ ಪೌರಾಣಿಕ ಹಿನ್ನಲೆಯ ವಸ್ತುಗಳುಳ್ಳ ಕಲಾಕೃತಿಗಳಿಂದ ದೂರ ಉಳಿದ ಪಾಟೀಲರು ಸಾಮಾಜಿಕ, ಗ್ರಾಮೀಣ, ಪಾರಂಪರಿಕ, ಸ್ತ್ರೀ ಪರವಾದ, ನೈಸರ್ಗಿಕ ಹಾಗೂ ಇತರ ಕಲಾಕೃತಿಗಳಿಂದ ಅಚ್ಚಳಿಯದ ಪ್ರಭಾವ ಬೀರಿದರು. ಅದರೊಟ್ಟಿಗೆ ಸಾಮಾಜಿಕ ವಸ್ತುಗಳನ್ನು ಆಯ್ದುಕೊಂಡು ತಮ್ಮ ಚಿತ್ರಗಳ ಮೂಲಕ ನಾಡಿನ ಸಾಂಸ್ಕೃತಿಕ ರಾಯಭಾರಿಯಂತೆ ಮೆರೆದ ಎಂ. ಬಿ. ಪಾಟೀಲರು ನಿತ್ಯ ಜೀವನದ ನೈಜದೃಶ್ಯಗಳನ್ನು ವಿಶಿಷ್ಟವಾಗಿ ಚಿತ್ರಿಸಿದ್ದಾರೆ. ವಸ್ತುವಿನ ಅಭಿವ್ಯಕ್ತಿಯಲ್ಲಿ ಯಾವುದಕ್ಕೆ ಆದ್ಯತೆ ಸಲ್ಲಬೇಕು ಎಂಬುದನ್ನು ಪಾಟೀಲರು ನಾಲ್ಕು ದಶಕಗಳ ಕಾಲದ ಚಿತ್ರಕಲಾ ಜೀವನದಲ್ಲಿ ಕಂಡುಕೊಂಡಿದ್ದಾರೆ.

ಸಾಕಷ್ಟು ಹಿರಿಯ ಮತ್ತು ಕಿರಿಯ ಕಲಾವಿದರೊಟ್ಟಿಗೆ ಕೆಲಸ ಮಾಡಿದ್ದಾರೆ. ಅಂತರಾಷ್ಟ್ರೀಯ ಮಟ್ಟದಲ್ಲಿ ಅವರ ಚಿತ್ರಗಳು ಪ್ರದರ್ಶನವಾಗಿವೆ. ಅಂತರಾಷ್ಟ್ರೀಯ ಮಟ್ಟದ ಸಂಗ್ರಹಗಳಲ್ಲಿ ಇವರ ಕಲಾಕೃತಿಗಳಿವೆ. ಸ್ವಂತ ಕಲಾಕೃತಿಗಳ ಪ್ರದರ್ಶನ, ಸಮೂಹ ಪ್ರದರ್ಶನ ಮಾಡಿದ್ದಾರೆ. ಚಿತ್ರಕಲೆ ಬಗ್ಗೆ ಉಪನ್ಯಾಸ ನೀಡುವುದು ಪಾಟೀಲರ ಮೆಚ್ಚಿನ ಹವ್ಯಾಸ. ಕರ್ನಾಟಕದ ಅನೇಕ ಕಲಾಶಾಲೆಗಳಲ್ಲಿ ಯಾವುದೇ ಫಲಾಪೇಕ್ಷೆಯಿಲ್ಲದೆ ಸಾಕಷ್ಟು ಉಪನ್ಯಾಸ ನೀಡಿದ್ದಾರೆ. ಚಿತ್ರಕಲೆ ಬಗ್ಗೆ ಚರ್ಚೆ ಮಾಡಿದ್ದಾರೆ. ಪಾಟೀಲ್ ಅವರು ಉತ್ತಮ ಉದ್ದೇಶಗಳಿಗೆ ಉಚಿತವಾಗಿ ಪೇಟಿಂಗ್ ನೀಡಿದ್ದಾರೆ. ಚಿತ್ರಕಲೆಯ ಮೂಲಕ ಅನೇಕರಿಗೆ ನೆರವಾಗಿದ್ದಾರೆ. ಈಗಲೂ ದೊಡ್ಡ ಪ್ರಮಾಣದ ಕಲಾಕೃತಿಗಳನ್ನು ರಚಿಸಿ ದೇಶಾದ್ಯಂತ ಪ್ರಮುಖ ನಗರಗಳಲ್ಲಿ ಪ್ರದರ್ಶನ ಮಾಡಬೇಕು ಎಂಬುದು ಅವರ ಯೋಜನೆಯಾಗಿದೆ.

ಇಂದಿಗೂ ಪಾಟೀಲರು ಭಾವಚಿತ್ರ ಮತ್ತು ವ್ಯಕ್ತಿಚಿತ್ರಣಗಳಲ್ಲಿ ಜೀವಕಳೆ ತುಂಬಬಲ್ಲವರಾಗಿದ್ದಾರೆ. ಅವುಗಳಲ್ಲಿ ಮುಖದ ಲಕ್ಷಣ ಭಾವದ್ದೇ ಪ್ರಾಧಾನ್ಯ ಭಾವ ಚಿತ್ರಗಳಲ್ಲಿ ವ್ಯಕ್ತಿಗಳ ವರ್ಚಸ್ಸು, ಕಣ್ಣುಗಳ ಕಾಂತಿ, ತುಟಿಗಳ ಸಜೀವತೆ, ಕೆನ್ನೆಗಳಲ್ಲಿನ ಹೊಳಪು ಮುಂತಾದ ವೈಶಿಷ್ಟ್ಯಗಳನ್ನು ಗಮನಿಸಬಹುದು. ಇವರು ರಚಿಸಿರುವ ಪ್ರತಿಯೊಂದು ವ್ಯಕ್ತಿ ಚಿತ್ರವೂ ಲಾಲಿತ್ಯ ಸೌಂದರ್ಯಗಳಿಂದ ಕೂಡಿರುತ್ತದೆ. ಇಲ್ಲಿಯ ರೂಪರೇಖೆ, ವಿನ್ಯಾಸ, ಬಣ್ಣ, ನಿಲುವು, ಒಲವುಗಳು ಯಾರ ಹೃದಯವನ್ನಾದರೂ ಸೆರೆಹಿಡಿಯುತ್ತವೆ. ಈ ಭಾವಚಿತ್ರಗಳಲ್ಲಿ ಪಾಟೀಲರು ಬಳಸಿರುವ ವರ್ಣಗಳ ಸಾಮ್ಯತೆ, ಸಾಮರಸ್ಯವನ್ನು ನೋಡಿದರೆ ಅವರ ಕೌಶಲತೆ ಎದ್ದು ತೋರುವುದು.

ಕರ್ನಾಟಕದ ಕಲಾವಿದರಲ್ಲಿ ಚಿಂತನಶೀಲ ಕಲಾವಿದರಲ್ಲಿ ಒಬ್ಬರಾಗಿರುವ ಪಾಟೀಲರ ಕೆಲವು ಕಲಾಕೃತಿಗಳಲ್ಲಿ ಸಾಮಾಜಿಕ ವಸ್ತುಗಳ ಸ್ಪಂದನದ ನಿದರ್ಶನಗಳನ್ನು ಕಾಣಬಹುದು, ತಮ್ಮ ಕಲಾಕೃತಿಗಳಲ್ಲಿ ಸಾಮಾಜಿಕ ನೋವು, ಹಸಿವು, ಕ್ರೌರ್ಯ, ಬಡತನ ಇವುಗಳಿಗೆ ಆಕಾರವನ್ನು ಕೊಡುವ ಪ್ರಯತ್ನ ಪಾಟೀಲರ ಕಲಾಕೃತಿಗಳಲ್ಲಿ ಕಂಡು ಬರುತ್ತದೆ. ಬದುಕಿನ ಸಮಗ್ರತೆಯನ್ನು ಕುರಿತ ಅವರ ಕಲ್ಪನೆ ಅವರು ಆರಿಸಿಕೊಂಡಿರುವ ವಸ್ತುವಿನ ಹಿನ್ನೆಲೆಯಿಂದ ಕಂಡು ಬರುತ್ತದೆ.

ಪಾಟೀಲರ ವರ್ಣಗಳ ಬಳಕೆ ಮತ್ತು ರೇಖೆಗಳಲ್ಲಿ ಅದ್ಭುತ ಚೈತನ್ಯವಿದೆ. ಅಮೂರ್ತ ಮತ್ತು ಮೂರ್ತ ರೂಪದ ಕಲಾ ರಚನೆಯಲ್ಲಿ ತಮ್ಮ ಸ್ವಂತಿಕೆಯ ಛಾಪು ಮೂಡಿಸಿದ್ದಾರೆ. ಹಾಗೆಯೇ ಭಾವಚಿತ್ರದಲ್ಲಿಯೂ ಇವರ ಸ್ವಂತಿಕೆ ಇದೆ. ಅವರ ಬಣ್ಣಗಳಲ್ಲಿ ಮೋಹಕ ಶಕ್ತಿಯಿದ್ದರೆ, ರೇಖೆಗಳಲ್ಲಿ ಬಳುಕಿದೆ. ಇವೆರಡರ ಮಿಶ್ರಣದಿಂದ ಕಲಾಕೃತಿಗೆ ಮೌಲ್ಯ ಉಂಟಾಗಿದೆ. ಪಾಟೀಲರ ಪ್ರಾತ್ಯಕ್ಷಿಕೆ ನೋಡಿದವರಿಗೆ ಅವರ ರೇಖೆ ಮತ್ತು ಬಣ್ಣಗಳ ಮೇಲಿನ ಹಿಡಿತದ ಕಲ್ಪನೆ ಉಂಟಾಗುತ್ತದೆ.

ಅವರು ಕೃತಿಯನ್ನು ರಚಿಸುವ ವೇಳೆಯಲ್ಲಿ ವರ್ಣದಲ್ಲಿ ಮೈವಳಿಕೆ ಉಂಟು ಮಾಡುವಾಗ ವಿಶಿಷ್ಟ ತಂತ್ರಗಾರಿಕೆ ಅಳವಡಿಸುತ್ತಾರೆ. ಗ್ರಾಮೀಣ ಪ್ರದೇಶದ ಬದುಕು ಪಾಟೀಲರ ಮೇಲೆ ಸಾಕಷ್ಟು ಪ್ರಭಾವ ಬೀರಿದ ಕಾರಣದಿಂದಾಗಿ ತಾವು ಬಾಲ್ಯದಿಂದಲೂ ಕಂಡು, ನೋಡಿದ ವಸ್ತುಗಳ ವಿನ್ಯಾಸಗಳನ್ನು ತಮ್ಮ ಕಲಾಕೃತಿಯಲ್ಲಿ ಬಳಸಿದ್ದಾರೆ. ಪಾಟೀಲರು ರಚಿಸಿದ ಭಿತ್ತಿ ಚಿತ್ರ ಸಂಯೋಜನೆಯಲ್ಲಿ ಕಥಾ ನಿರೂಪಣೆಯ ಉದ್ದೇಶ ಕಂಡು ಬರುತ್ತದೆ. ಪಾಟೀಲರು ಕೆಲವು ಸಂದರ್ಭದಲ್ಲಿ ಕ್ಯೂಬಿಸಂ, ಎಕ್ಸಪ್ರೆಷನಿಸಂ, ಸರ್ರಿಯಲಿಸಂಗೆ ಹತ್ತಿರವೆನ್ನಬಹುದಾದ ಆಧುನಿಕ ಕಲಾ ಸೃಷ್ಟಿಗಳಲ್ಲಿ ತಮ್ಮ ಬದುಕಿನ ಅನುಭವಗಳು ಮತ್ತು ಚಿಂತನೆಗಳನ್ನು ಪ್ರಕಟಿಸಿದ್ದಾರೆ.

ಜನರನ್ನು ಮುಟ್ಟುವುದೇ ತಮ್ಮ ಕಲಾಕೃತಿಯ ಉದ್ದೇಶವೆಂದು ಹೇಳುವ ಪಾಟೀಲರು ಅತ್ಯಂತ ಜನಪರವಾಗಿ ಶ್ರೀ ಸಾಮಾನ್ಯನಿಗೂ ಸೌಂದರ್ಯಾನುಭವ ನೀಡಬಲ್ಲ ಕಲಾಕೃತಿಗಳನ್ನು ಹೆಚ್ಚಾಗಿ ರಚಿಸಿದ್ದಾರೆ. ಬಣ್ಣದ ಕಾಗದದ ಚಿಂದಿ ತುಂಡುಗಳು, ಕ್ಯಾಲೆಂಡರಿನ ಬಣ್ಣದ ತುಂಡುಗಳು, ರದ್ದಿ ಕಾಗದ, ವರ್ತಮಾನ ಪತ್ರಗಳ ತುಂಡುಗಳು, ಹೀಗೆ ನಿರುಪಯುಕ್ತ ವಸ್ತುಗಳನ್ನು ಒಟ್ಟುಗೂಡಿಸಿ ಸಾದಾ ದಪ್ಪ ರಟ್ಟಿನ ಮೇಲೆ ಕತ್ತರಿಸಿದ ವಿವಿಧ ತುಂಡುಗಳನ್ನು ಅಂಟಿಸುವ ಕೋಲಾಜ್ ತಂತ್ರದಲ್ಲಿ ಪಾಟೀಲರು ಕೌಶಲ ಹೊಂದಿದವರಾಗಿದ್ದಾರೆ.

ಹೆಣ್ಣು ಇವರ ಕೃತಿಗಳ ಮುಖ್ಯವಸ್ತು ಖಚಿತತೆ, ಬಣ್ಣಗಳ ತೂಕ ಸಮರ್ಪಕವಾದ ನಿರೂಪಣೆಯ ಪ್ರಾವೀಣ್ಯತೆಯೊಂದಿಗೆ ಕಲಾಕೃತಿ ರಚಿಸುವುದರಲ್ಲಿ ಸಿದ್ಧಹಸ್ತರೆನಿಸಿದ ಪಾಟೀಲರು ಮಾಧ್ಯಮಗಳನ್ನು ಸಮರ್ಥವಾಗಿ ದುಡಿಸಿಕೊಳ್ಳುತ್ತಾರೆ. ಯಾವುದೇ ಗೊಂದಲವಿಲ್ಲದೇ ಅನೇಕ ಇಜಂಗಳ ತಾಕಲಾಟಗಳಿಲ್ಲದೆ ನೋಡುಗನಿಗೆ ನೇರವಾಗಿ ಕಲಾವಿದನ ಆಶಯವನ್ನು ಮುಟ್ಟವಂತೆ ಮಾಡುವುದು. ಇವರ ಚಿತ್ರ ರಚನೆಯ ಕ್ರಮವಾಗಿದೆ. ಚಿತ್ರಗಳನ್ನು ನೋಡಿ ಜನರು ಅವುಗಳ ಬಗ್ಗೆ ಚಿಂತಿಸಬೇಕು ಎಂಬುದು ಇವರ ಅಭಿಪ್ರಾಯವಾಗಿದೆ.

ವಸ್ತುವಿನ ಆಯ್ಕೆಯಲ್ಲಿ ಬಹಳಷ್ಟು ಸ್ವತಂತ್ರ್ಯವಹಿಸಿ ಚಿತ್ರ ಬಿಡಿಸುವ ಪಾಟೀಲರು ತಮ್ಮ ಆಳವಾದ ಜೀವನಾನುಭವದಿಂದಾಗಿ ಕೃತಿ ರಚನೆಯಲ್ಲಿ ಭಾವನಾತ್ಮಕ ಚಲನ ಶೀಲತೆಯನ್ನು ತರುತ್ತಾರೆ. ಮಾನವ ಸಂಬಂಧದ ಸಂಕೀರ್ಣತೆ, ನಿಗೂಢತೆಗಳು ಪಾಟೀಲರಿಗೆ ಕುತೂಹಲ ಹುಟ್ಟಿಸುವ ವಿಷಯಗಳು. ಅವುಗಳ ಕುರಿತೇ ಪಾಟೀಲರು ಹಲವಾರು ಚಿತ್ರ ರಚಿಸಿದ್ದಾರೆ. ಸರಕಾರಿ ಉದ್ಯೋಗಿಯಾಗಿದ್ದುಕೊಂಡು ಸೃಜನಶೀಲತೆಯನ್ನು ಜೀವಂತ ವಾಗಿಟ್ಟುಕೊಂಡು ಕಲಾಪ್ರತಿಭೆಯನ್ನು ಅವಶ್ಯಕತೆಗಳಿಗೆ ಅನುಗುಣವಾಗಿ, ಬಳಸಿಕೊಳ್ಳುತ್ತ ಬಂದಿದ್ದಾರೆ.

ಹಳ್ಳಿಯ ಪರಿಸರದಲ್ಲಿ ಕಷ್ಟ-ಕಾರ್ಪಣ್ಯಗಳ ಮಧ್ಯೆ ಬೆಳೆದ ಅವರು, ತಮ್ಮ ಕಲಾಕೃತಿಗಳಲ್ಲಿ ರೂಪಿಸಿದ ಮಹಿಳೆಯರ ಮುಖದಲ್ಲಿ ವಿಷಾದ ಛಾಯೆಯ ಜತೆಯಲ್ಲಿ ಬದುಕುವ ಛಲ ಅಡೆತಡೆಗಳನ್ನು ಮೆಟ್ಟಿನಿಲ್ಲುವ ದಿಟ್ಟನಿಲುವನ್ನು ಕಾಣಬಹುದು. ವರ್ಣಛಾಯಾಚಿತ್ರಗಳ ಭರಾಟೆಯಲ್ಲಿ, ಭಾವಚಿತ್ರ ರಚನೆ ಹಿಮ್ಮೆಟ್ಟಿ ನಿಂತು, ಅಮೂರ್ತ ಕಲಾಕೃತಿಗಳ ಕಡೆಗೆ ಹೆಚ್ಚಿನ ಜನರು ಗಮನಹರಿಸುತ್ತಿರುವ ಸಂದರ್ಭದಲ್ಲಿ ಭಾವಚಿತ್ರಗಳನ್ನು ಭಾವಪೂರ್ಣವಾಗಿ ರಚಿಸುವ ಕೆಲವೇ ಕೆಲವು ಕಲಾವಿದರಲ್ಲಿ ಪಾಟೀಲರು ಒಬ್ಬರಾಗಿದ್ದಾರೆ. ಛಾಯಾಚಿತ್ರದ ನೈಜತೆಯಷ್ಟೆ ಸರಳವಾಗಿ ಕುಂಚಗಳ ಕೆಲವೇ ಕೆಲವು ರಭಸದ ಪ್ರಯೋಗದಿಂದ ರೂಪದರ್ಶಿಯನ್ನು ಫಲಕದ ಮೇಲೆ ಸಾಕರಗೊಳಿಸುವ ಪಾಟೀಲರ ಕಲಾವೈಖರಿ ಅನನ್ಯವಾಗಿದೆ. ಪಾಟೀಲರ ಕ್ರಿಯಾಶೀಲತೆಯ

ಮತ್ತೊಂದು ಮಗ್ಗುಲನ್ನು ಗಮನಿಸಿದರೆ, ಇವರು ರಂಗಸಜ್ಜಿಕೆಯ ಶೃಂಗಾರಕರಾಗಿಯೂ ಕಂಡು ಬರುತ್ತಾರೆ. 'ತಬರನ ಕಥೆ', 'ರಥಮೂಸಲ', ಚನ್ನಕೇಶವಮೂರ್ತಿ ಅವರ 'ದೊಡ್ಡಮ್ಮ' ಮುಂತಾದ ನಾಟಕಗಳಲ್ಲಿ ತಮ್ಮ ವಿಶಿಷ್ಟ ರಂಗ ಪರಿಕರಗಳ ಮೂಲಕ ಗಮನ ಸೆಳೆದಿದ್ದಾರೆ.

ತಮ್ಮ ಸುದೀರ್ಘ ಕಲಾ ಜೀವನದಲ್ಲಿ ಬಗೆಬಗೆಯ ಕಲಾಕೃತಿಗಳನ್ನು ರಚಿಸಿರುವ ಪಾಟೀಲರು ಅಮೂರ್ತ ಕಲ್ಪನೆಗೆ ಜೀವ ತುಂಬುವ ಯತ್ನಮಾಡಿದ್ದಾರೆ. ಪಾಟೀಲರ ಜಲವರ್ಣ ಚಿತ್ರಗಳ ರಚನೆಯಲ್ಲಿಯೂ ಹಳ್ಳಿಗಾಡಿನ ದರ್ಶನ ಮಾಡಿಸುವ ಪ್ರಯತ್ನವಿದೆ. ಇವರ ಕಲಾಕೃತಿಗಳಲ್ಲಿ ಹೆಚ್ಚಾಗಿ ಹಳ್ಳಿಯ ಸಾಮಾನ್ಯ ವಿಷಯ, ಜೀವನದ ನೋವು ನಲಿವು ಅಲ್ಲಿನ ಪರಿಸರ, ಅದರಲ್ಲಿನ ಗ್ರಾಮ್ಯಸೊಗಡು ಮುಂತಾದವುಗಳು ಕಂಡುಬರುತ್ತವೆ.

ಎಂ. ಬಿ. ಪಾಟೀಲರ ಚಿತ್ರಶೈಲಿ, ಪ್ರಭಾವ, ಪ್ರೇರಣೆ ಮತ್ತು ತಂತ್ರಗಾರಿಕೆಗಳನ್ನು ಗಮನಿಸಿದಾಗ ಅನೇಕ ಮಹತ್ವದ ಅಂಶಗಳು ಕಂಡು ಬರುತ್ತವೆ. ಅವುಗಳನ್ನು ಕೆಳಗಿನಂತೆ ಸಮೀಕ್ಷಿಸಬಹುದು. ಪಾಟೀಲರ ಚಿತ್ರಕಲಾ ಶೈಲಿಯಲ್ಲಿ ಹೆಬ್ಬಾರರ ರೇಖಾ ವಿನ್ಯಾಸದ ಜೀವಂತಿಕೆ, ಚೈತನ್ಯಗಳಿದ್ದರೆ, ಎಂ.ಎಫ್. ಹುಸೇನರ ಆಕಾರಗಳ ಹೋಲಿಕೆ ಇದೆ ಪಾಟೀಲರು ರಚಿಸುವ ಸಂಯೋಜನಾ ಚಿತ್ರಗಳಲ್ಲಿ ಈ ರೀತಿ ಇಬ್ಬರು ಪ್ರಸಿದ್ಧ ಕಲಾವಿದರ ಪ್ರಭಾವಗಳಿದ್ದರೆ, ಅವರು ಭಾವಚಿತ್ರ ಮತ್ತು ವ್ಯಕ್ತಿ ಚಿತ್ರಗಳ ರಚನೆಯಲ್ಲಿ ನೈಜಶೈಲಿಯನ್ನು ಹೆಚ್ಚಾಗಿ ಅನುಸರಿಸುತ್ತಾರೆ ಇಲ್ಲಿಯೂ ಪಾಟೀಲರು ತಮ್ಮ ವಿಶಿಷ್ಟ ಶೈಲಿಯನ್ನು ಅಳವಡಿಸಿಕೊಂಡಿರುವುದು ಕಂಡು ಬರುತ್ತದೆ. ಬಣ್ಣಗಳನ್ನು ಪದರ ಮೇಲೆ ಪದರಗಳಂತೆ ದಪ್ಪನಾಗಿ ಹಚ್ಚುವ ಮೂಲಕ ಅದಕ್ಕೊಂದು ವಿಶಿಷ್ಟ ಮೈವಳಿಕೆ ನೀಡುತ್ತಾರೆ. ಇಂದಿಗೂ ಪಾಟೀಲರು ರಾಜ್ಯದಲ್ಲಿ ಒಬ್ಬ ಭಾವಚಿತ್ರ ಕಲಾವಿದರಾಗಿಯೇ ಗುರುತಿಸಲ್ಪಡುತ್ತಿದ್ದಾರೆ.

ಪಾಟೀಲರು ಹಳೆಯ ಮತ್ತು ಹಿಂದಿನ ಪರಂಪರೆಯ ವಿಷಯಗಳನ್ನೆ ಇಂದಿನ ಸಂದರ್ಭಕ್ಕೆ ತಕ್ಕಂತೆ ಅನಾವರಣಗೊಳಿಸುತ್ತಾರೆ. ಪ್ರಾಚೀನತೆ ಮತ್ತು ಪರಂಪರೆಗಳನ್ನು ಬಿಂಬಿಸುವ ವಿಷಯಗಳನ್ನು ಆಯ್ದುಕೊಂಡರೂ ರಚನಾ ಶೈಲಿ ಇಂದಿನ ಸಮಕಾಲೀನ ಕಲಾಕ್ಷೇತ್ರಕ್ಕೆ ಸ್ಪಂದಿಸುವಂತಿರುವುದು ಕಂಡು ಬರುತ್ತದೆ. ವರ್ಣಲೇಪನ ವಿಧಾನ, ಮೈವಳಿಕೆಯ ಸೃಷ್ಟಿಗಳಲ್ಲಿಯೂ ಪಾಟೀಲರ ಕೃತಿಗಳಲ್ಲಿ ನವ್ಯತೆಯ ಸೆಳಕುಗಳು ಗೋಚರಿಸುತ್ತವೆ. ಪಾಟೀಲರು ಪ್ರಾತ್ಯಕ್ಷಿಕೆಗಳನ್ನು ನೀಡುವಾಗ ಅತ್ಯಂತ ಪರಿಣಾಮಕಾರಿಯಾಗಿ ಕೊಡುತ್ತಾರೆ. ಹಂತ ಹಂತವಾಗಿ ಚಿತ್ರ ರಚನೆ ಸಾಗಿದಂತೆ ಪ್ರತಿ ಘಟ್ಟದಲ್ಲಿಯೂ ಸ್ವಲ್ಪ ಹೊತ್ತು ತಾವು ಅದುವರೆಗೆ ಅನುಸರಿಸಿದ ರಚನಾಕ್ರಮವನ್ನು ಕುರಿತು ತಿಳಿಸಿ ಹೇಳುತ್ತಾರೆ. ಆಕಾರ, ಬಣ್ಣ, ಮೈವಳಿಕೆ, ಸಂಯೋಜನೆ, ಸ್ಥಳಾವಕಾಶ

ಇವೆಲ್ಲವುಗಳನ್ನು ಹೇಗೆ ಮತ್ತು ಯಾಕೆ ಮಾಡಿಕೊಂಡೆ ಎಂಬುದನ್ನು ವಿಷಯಕ್ಕೆ ತಕ್ಕಂತೆ ತಿಳಿಸಿ ಹೇಳುತ್ತಾರೆ. ವಿದ್ಯಾರ್ಥಿಗಳು ಪಾಟೀಲರ ಕಲಾಪ್ರಾತ್ಯಕ್ಷಿಕೆಯಿಂದ ಹೆಚ್ಚಿನ ವಿಷಯ ತಿಳಿದುಕೊಳ್ಳುತ್ತಾರೆ. ನಿಸರ್ಗ ಚಿತ್ರಣದಲ್ಲಿ ವಿಶೇಷವಾದ ಆಸಕ್ತಿಯನ್ನು ಪಾಟೀಲರು ಹೊಂದಿದ್ದಾರೆ. ಸುಂದರವಾದ ಪ್ರಕೃತಿಯನ್ನು ಕಂಡಾಗ ಅದನ್ನು ಚಿತ್ರದಲ್ಲಿ ಸೆರೆ ಹಿಡಿಯಲು ಅವರ ಮನಸ್ಸು ಹಾತೊರೆಯುತ್ತದೆ. ನಂತರದ ದಿನಗಳಲ್ಲಿ ಪಾಟೀಲರು ಭಾವಚಿತ್ರ ಮತ್ತು ವ್ಯಕ್ತಿಚಿತ್ರರಚನೆಯಲ್ಲಿ ನೈಜಶೈಲಿಯಿಂದ ಸ್ವಲ್ಪ ಭಿನ್ನವಾದ ಸೃಜನಶೀಲತೆಯನ್ನು ಅಳವಡಿಸಿಕೊಂಡಿರುವುದು ಮಹತ್ವದ್ದಾಗಿದೆ.

ಸೃಜನಶೀಲತೆಯ ಅಂಶಗಳಿದ್ದರೂ ವ್ಯಕ್ತಿಗಳ ಬಾಹ್ಯ ಚಹರೆ ಹಾಗೂ ಭಾವನಾತ್ಮಕತೆಯಲ್ಲಿ ಕೊರತೆ ಇರುವುದಿಲ್ಲ ಚಪ್ಪಟೆಯಾದ ಮತ್ತು ಪದರವಾಗಿರುವ ವರ್ಣಲೇಪನದಲ್ಲಿ ಭಾವನಾತ್ಮಕ ಪರಿಣಾಮಗಳನ್ನು ಪಾಟೀಲರು ಉಂಟು ಮಾಡುತ್ತಾರೆ. ನೈಜ ಆಕೃತಿ, ಶೈಲಿಕೃತ ಆಕೃತಿ, ಆಕೃತಿಸಹಿತ ಮತ್ತು ಆಕೃತಿರಹಿತ ಸಂಯೋಜನಾ ಕಲಾಕೃತಿಗಳನ್ನು ಮಾಡುವುದು ಪಾಟೀಲರ ವಿಶೇಷತೆಯಾಗಿದೆ. ಅಲ್ಲದೆ ಸಂಯೋಜನಾ ಚಿತ್ರವಾಗಲಿ, ಭಾವಚಿತ್ರ, ವ್ಯಕ್ತಿಚಿತ್ರ, ಅಮೂರ್ತಚಿತ್ರ, ನಿಸರ್ಗಚಿತ್ರ, ಸ್ಥಿರಚಿತ್ರ ಹೀಗೆ ಯಾವುದೇ ಬಗೆಯ ಕಲಾಕೃತಿಯಾದರೂ ಅಲ್ಲಿ ಪರಿಣಾಮಕಾರಿಯಾದ ಸಂಯೋಜನಾ ರೀತಿ ಇರುತ್ತದೆ. ಸಂಯೋಜನೆಯ ವಿನ್ಯಾಸದಿಂದಲೆ ಪಾಟೀಲರ ಕಲಾಕೃತಿಗಳ ಶೈಲಿಯನ್ನು ಗುರುತಿಸಬಹುದು.

ಪಾಟೀಲರ ಕಲಾಕೃತಿಯಲ್ಲಿನ ಬಣ್ಣಗಳ ಸಮತೋಲನ, ಚಿತ್ರ ಸಂಯೋಜನೆಯ ಅಂಶಗಳು ಎಂತವರನ್ನು ಬೆರಗುಗೊಳಿಸುತ್ತವೆ. ಇತ್ತೀಚಿನ ದಿನಗಳಲ್ಲಿ ನೈಜಶೈಲಿಯ ಚಿತ್ರಣ ಅಪರೂಪವಾಗಿರುವ ಸಂದರ್ಭದಲ್ಲಿ ಪಾಟೀಲರು ಕಲಾಕ್ಷೇತ್ರಕ್ಕೆ ಹೆಚ್ಚು ಪ್ರಸ್ತುತರಾಗುತ್ತಾರೆ. ಕಲೆಯನ್ನು ವಾಣಿಜ್ಯಕ್ಕಾಗಿ ಬಳಸಿಕೊಂಡಾಗ ಅದರ ಮಹೋನ್ನತ ಉದ್ದೇಶ ಕ್ಷೀಣಿಸುತ್ತದೆ. ಆ ಹಿನ್ನೆಲೆಯಲ್ಲಿ ಪಾಟೀಲರು ಸಾಗಲಿಲ್ಲ ಎಂಬುದು ಸಮಾಧಾನದ ಅಂಶ. ಸಂಯೋಜನಾ ಚಿತ್ರಗಳನ್ನು ಬೇರೆ ಬೇರೆ ಶೈಲಿ ಹಾಗೂ ವಿಧಾನಗಳಲ್ಲಿ ಹಲವಾರು ಜನರು ಮಾಡಬಲ್ಲರು. ಅದರಲ್ಲಿ ಹೆಸರು ಮಾಡಬಹುದು. ಆದರೆ ಭಾವಚಿತ್ರ ರಚನೆಯಲ್ಲಿ ಪ್ರಬುದ್ಧತೆ, ಪರಿಣಿತಿಗಳನ್ನು ತಂದುಕೊಳ್ಳುವುದು ತೀರಾ ವಿರಳವಾಗಿದೆ. ಇಂದಿಗೂ ಕರ್ನಾಟಕದಲ್ಲಿ ಬೆರಳೆಣಿಕೆಯ ಕಲಾವಿದರು ಭಾವಚಿತ್ರ ರಚನೆಯಲ್ಲಿ ಖ್ಯಾತರಾಗಿದ್ದಾರೆ. ಪಾಟೀಲರು ಅಂತಹ ಭಾವಚಿತ್ರ ರಚನೆಯ ಕಲಾವಿದರಲ್ಲಿ ಕರ್ನಾಟಕದಲ್ಲಿ ತಮ್ಮದೇ ಆದ ಸ್ಥಾನಗಳಿಸಿ ಕೊಂಡಿದ್ದಾರೆ. ಭಾವಚಿತ್ರ ರಚನೆಯಲ್ಲಿ ಯಥಾವತ್ತಾಗಿ ರಚಿಸುವುದಕ್ಕಿಂತ ಅದರಲ್ಲಿ ಸೃಜನಶೀಲತೆಯನ್ನು ಅಳವಡಿಸುವುದು ಪ್ರಮುಖ ಅಂಶ. ಇದು

ಪಾಟೀಲರಿಗೆ ಸಿದ್ಧಿಸಿದೆ. ಕಲಾವಿದರಲ್ಲಿ ವಾಣಿಜ್ಯಕ ಮತ್ತು ಆನಂದಾನುಭೂತಿ ಎರಡೂ ಅಂಶಗಳಿಗೆ ಸ್ಪಂದಿಸುವ ಗುಣಗಳಿರಬೇಕು. ಅವು ಪಾಟೀಲರಲ್ಲಿವೆ. ಒಬ್ಬಕಲಾವಿದನ ಕೃತಿಗಳು ಕಾಲಮಾನಕ್ಕೆ ಅನುಸಾರವಾಗಿ ಬದಲಾಗುತ್ತ ಹೋಗಬೇಕು ಹಾಗೆ ಪಾಟೀಲರ ಕಲಾಕೃತಿಗಳು ಸಹಿತ ಪ್ರತಿ ದಶಕಕ್ಕೆ ಭಿನ್ನವಾಗುತ್ತ ಬಂದಿವೆ. ವಿಷಯಗಳು ಮರುಕಳಿಸಿದರೂ ರಚನಾಶೈಲಿ ಅಭಿವ್ಯಕ್ತಿಪಡಿಸುವ ರೀತಿಗಳಲ್ಲಿ ವೈವಿಧ್ಯತೆಗಳಿವೆ.

ಕಲಾವಿದನೊಬ್ಬ ಎಷ್ಟೇ ಆಧುನಿಕತೆಗೆ ತನ್ನನ್ನು ಒಡ್ಡಿಕೊಂಡರೂ ಕಲೆಯ ಮೂಲ ಬೇರುಗಳಾದ ನೈಜತೆಯ ಚಿತ್ರಣದಲ್ಲಿ ಪ್ರಬುದ್ಧತೆಯನ್ನು ಪಡೆದುಕೊಂಡಿರಬೇಕು ಪಾಟೀಲರು ಅಂತಹ ಸಾಮರ್ಥ್ಯ ಹೊಂದಿದ್ದಾರೆ. ಹಾಗಾಗಿ ಅವರು ಆಧುನಿಕ ಚಿತ್ರಗಳನ್ನು ರಚಿಸುವಷ್ಟೇ ಪರಿಣಾಮಕಾರಿಯಾಗಿ ನೈಜಶೈಲಿಯ ಚಿತ್ರಗಳನ್ನು ರಚಿಸುತ್ತಾರೆ. ಅವರಲ್ಲಿ ವಿಶಿಷ್ಟವಾದ ಪ್ರತಿಭಾಶಕ್ತಿ ಇದೆ.

ಪಾಟೀಲರು ರೇಖಾಚಿತ್ರ, ಭಾವಚಿತ್ರ, ವ್ಯಕ್ತಿಚಿತ್ರ, ನಿಸರ್ಗಚಿತ್ರ, ಸಂಯೋಜನಾ ಚಿತ್ರ, ಅಮೂರ್ತಚಿತ್ರ, ಸ್ಥಿರಚಿತ್ರ, ಭಿತ್ತಿಚಿತ್ರ, ಕೋಲಾಜ್ ಹೀಗೆ ಎಲ್ಲ ಬಗೆಯ ಕಲಾಪ್ರಕಾರಗಳ ರಚನೆಯಲ್ಲಿಯೂ ತಮ್ಮ ತನವನ್ನು ತೋರಿಸಿಕೊಂಡಿದ್ದಾರೆ. ನೈಜಶೈಲಿಯ ಭಾವಚಿತ್ರ ಮತ್ತು ವ್ಯಕ್ತಿಚಿತ್ರ ರಚಿಸುವಲ್ಲಿ ಅತ್ಯಂತ ಖ್ಯಾತರಾಗಿದ್ದ ಎಸ್. ಎಂ. ಪಂಡಿತ ಅವರು ರವಿವರ್ಮನನ್ನು ಕೆಲವು ಸಲ ಹಿಂದಿಕ್ಕಿದ್ದುಂಟು ನಿರಂತರವಾಗಿ ಕಲಾಕೃತಿ ರಚಿಸುವ ಪಂಡಿತರ ನಂತರ ಕರ್ನಾಟಕದಲ್ಲಿ ವಿಶೇಷವಾಗಿ ಭಾವಚಿತ್ರ ಮತ್ತು ವ್ಯಕ್ತಿ ಚಿತ್ರ ರಚನೆಯಲ್ಲಿ ತಮ್ಮನ್ನು ತೊಡಗಿಸಿಕೊಂಡವರೆಂದರೆ ಎಂ. ಬಿ. ಪಾಟೀಲರಾಗಿದ್ದಾರೆ. ಭಾವಚಿತ್ರ ಹಾಗೂ ವ್ಯಕ್ತಿಚಿತ್ರ ರಚನೆಯಲ್ಲಿ ತ್ರಿ ಆಯಾಮದ ಕಲ್ಪನೆ ಕೊಡುವಲ್ಲಿ ನೆರಳು ಬೆಳಕಿನ ಪರಿಣಾಮ ತೋರಿಸುವಲ್ಲಿ, ಸಂಯೋಜನೆಯಲ್ಲಿ, ಸ್ಥಳಾವಕಾಶದ ವಿಂಗಡಣೆಯಲ್ಲಿ ತಮ್ಮದೆ ಆದ ಶೈಲಿಯನ್ನು ಪಾಟೀಲರು ರೂಢಿಸಿಕೊಂಡಿದ್ದಾರೆ.

ವಾರ್ತಾ ಇಲಾಖೆಯಲ್ಲಿ ಪಾಟೀಲರು ಇಲಾಖೆಗಾಗಿ ಚಿತ್ರಗಳನ್ನು ರಚಿಸುತ್ತಿದ್ದರು. ಈ ಚಿತ್ರಗಳು ಹೆಚ್ಚಾಗಿ ಅನಕ್ಷರಸ್ತರು ಮತ್ತು ಗ್ರಾಮೀಣ ಜನರನ್ನು ಮುಖ್ಯವಾಗಿಟ್ಟುಕೊಂಡು ರಚಿಸಿದವುಗಳಾಗಿರುತ್ತಿದ್ದವು. ಯಾವುದನ್ನು ಮಾತಿನಿಂದ ಪರಿಣಾಮಕಾರಿಯಾಗಿ ಹೇಳಲು ಸಾಧ್ಯವಿಲ್ಲವೋ ಮತ್ತು ಓದು ಬರಹ ಕಲಿಯದ ಜನರಿಗೆ ಮನಮುಟ್ಟುವಂತೆ ಸರಳವಾಗಿ ಸಂದಿಗ್ಧತೆ ಇಲ್ಲದಂತೆ ಮನವರಿಕೆ ಮಾಡಿಕೊಡುವಂತಹ ಸಂಗತಿಗಳನ್ನು ಚಿತ್ರವಾಗಿ ರೂಪಿಸಲಾಗುತ್ತಿತ್ತು. ಶುದ್ಧ ಕುಡಿಯುವ ನಿರಿನ ಮಹತ್ವ, ಶೌಚಾಲಯಗಳ ಉಪಯೋಗ, ಸಾಕ್ಷರದೀಪ, ಕುಡಿತದ ಕೆಡಕುಗಳು, ದೇವದಾಸಿ ಪದ್ಧತಿ, ಸತಿ ಸಹಗಮನ, ವರದಕ್ಷಿಣೆ

ಪಿಡುಗು, ಉಳಿತಾಯ ಯೋಜನೆ, ಜಲನೈರ್ಮಲ್ಯ, ಪರಿಸರ ಕಾಳಜಿ, ಕಾಡನ್ನು ಉಳಿಸಿ, ಕುಟುಂಬ ಯೋಜನೆ, ಆರೋಗ್ಯ ಹೀಗೆ ಹತ್ತು ಹಲವು ರೀತಿಯ ವಸ್ತುಗಳ ಮೇಲೆ ಪಾಟೀಲರು ಚಿತ್ರಿಸುತ್ತಿದ್ದರು. ಅಂತಹ ಚಿತ್ರಗಳು ಜನರಿಗೆ ತಿಳುವಳಿಕೆಯನ್ನು ನೀಡುವ ವ್ಯಂಗ್ಯ ಶೈಲಿಯಲ್ಲಿದ್ದರೂ ಅದರಲ್ಲಿ ಕಲಾತ್ಮಕತೆಯ ಅಂಶಗಳು ಸಹಿತ ಕಂಡು ಬರುತ್ತವೆ. ಸಾವಿರಾರು ಚಿತ್ರಗಳನ್ನು ಪಾಟೀಲರು ಈ ಹಿನ್ನೆಲೆಯಲ್ಲಿ ರಚನೆ ಮಾಡಿದ್ದಾರೆ. ಆದರೆ ಅವುಗಳನ್ನು ಕಾಯ್ದಿಡುವ ಕ್ರಮವನ್ನು ವಾರ್ತಾ ಇಲಾಖೆ ನಿರ್ವಹಿಸದೆ ಇರುವುದು ದೊಡ್ಡ ದುರಂತ. ಅಂತಹ ಚಿತ್ರಗಳದ್ದೆ ಒಂದು ಪ್ರತ್ಯೇಕವಾದ ಅಧ್ಯಯನವನ್ನು ಕೈಗೊಳ್ಳಬಹುದಾದ ಹರವು ಇದೆ. ಆದರೆ ಅವುಗಳು ಸಿಗದೇ ಇರುವುದು ಕಲಾಕ್ಷೇತ್ರದ ದುರಂತವೆನ್ನಬಹುದು. ಇಂತಹ ಕೃತಿಗಳನ್ನು ನೋಡಿದೊಡನೆ ಅವು ಸುಲಭವಾದ ರಚನೆಗಳಂತೆ ಕಂಡು ಬಂದರೂ ಕಲಾವಿದನ ಜಾಣ್ಮೆ, ನೈಪುಣ್ಯತೆ, ವಿಷಯ ಸಂಯೋಜಿಸುವ ರೀತಿ, ಸಂಕೇತಗಳನ್ನು ಬಳಸಿಕೊಳ್ಳುವ ಸಾಮರ್ಥ್ಯ, ರೇಖಾಲಾಲಿತ್ಯ, ವರ್ಣಲೇಪನ ಮುಂತಾದ ಅಂಶಗಳನ್ನು ಆಧರಿಸಿರುತ್ತದೆ.

ಪ್ರಚಾರ ಹಿನ್ನೆಲೆಯ ಇಂತಹ ಚಿತ್ರಗಳನ್ನು ಇಲಾಖೆಗೆ ರಚಿಸಿಕೊಡಲು ಪಾಟೀಲರು ಒಂದು ವಿಶಿಷ್ಟವಾದ ವಿಧಾನವನ್ನು ಅನುಸರಿಸುತ್ತಿದ್ದರು. ಮೊದಲಿಗೆ ಪೆನ್ಸಿಲ್ ಇಲ್ಲವೆ ಇಂಡಿಯನ್ ಇಂಕ್‌ನಿಂದ ಚಿತ್ರದ ಹೊರ ರೇಖೆಯನ್ನು ಹಾಕಿಕೊಳ್ಳುತ್ತಿದ್ದರು. ನಂತರ ಬಣ್ಣಗಳನ್ನು ಲೇಪನಮಾಡಿ ಅವಶ್ಯವಿದ್ದಲ್ಲಿ ನೆರಳು ಬೆಳಕು ನಿರ್ಮಿಸುವುದು. ಚಪ್ಪಟೆಯಾಗಿ ಲೇಪಿಸುವುದು. ಕುಂಚದ ಎಳೆತಗಳಿಂದ ಬಣ್ಣದಲ್ಲಿ ಚಲನೆ ಉಂಟುಮಾಡುವುದು ನಂತರ ಅವಶ್ಯವಿದ್ದಲ್ಲಿ ಮತ್ತೊಮ್ಮೆ ಇಂಡಿಯನ್ ಇಂಕ್‌ದಿಂದ ಚಿತ್ರದ ಹೊರರೇಖೆಗಳನ್ನು ಎಳೆದು ಚಿತ್ರ ಪೂರ್ಣಗೊಳಿಸುತ್ತಿದ್ದರು

ಪಾಟೀಲರು ಅಮೂರ್ತ ಕಲಾಕೃತಿಗಳನ್ನು ಮಾಡುತ್ತಲಿದ್ದರೂ ಅವರು ನೈಜಶೈಲಿಯ ಒಬ್ಬ ಪ್ರತಿಭಾನ್ವಿತ ಕಲಾವಿದ ಇವರ ಅಮೂರ್ತ ಕೃತಿಗಳಲ್ಲಿ ಅರ್ಧ ನೈಜಶೈಲಿ, ಇನ್ನರ್ಧ ಅಮೂರ್ತ ಶೈಲಿಗಳ ಮಿಶ್ರಣ ಇರುತ್ತದೆ. ಆದರೆ ಹಾಗೆ ಎರಡೂ ಶೈಲಿಗಳನ್ನು ಬಳಸಿಕೊಂಡು ತಮ್ಮದೇ ಹೊಸಶೈಲಿಯನ್ನು ಅವಿಸ್ಕಾರಗೊಳಿಸಿರುವುದು ಪಾಟೀಲರ ಹಿರಿಮೆ. ಅಲ್ಲದೆ ಪಾಟೀಲರು ನೈಜ ಶೈಲಿಯ ಚಿತ್ರ ರಚನೆಗಿಂತ ಅಕಾಡಮಿಕ್ ಚಿತ್ರಶೈಲಿಯಲ್ಲಿ ಹೆಚ್ಚು ಪ್ರಬುದ್ಧತೆಯನ್ನು ಹೊಂದಿದವರು ಎಂಬುದು ಸಹಿತ ಗಮನಿಸುವ ಅಂಶವಾಗಿದೆ.

ಪಾಟೀಲರು ಕೇವಲ ಹಳ್ಳಿಪರಿಸರ, ಗ್ರಾಮೀಣ ಜನಜೀವನ, ಮಹಿಳೆಯ ಬದುಕು ಹೀಗೆ ಕೆಲವೇ ವಸ್ತುವಿಷಯಗಳ ಸುತ್ತ ಮಾತ್ರ ಹೆಚ್ಚಿನ ಚಿತ್ರಗಳನ್ನು ರಚಿಸುತ್ತಾರೆ ಎಂಬುದಕ್ಕೆ ಕಾರಣಗಳನ್ನು ಕೊಡಬಹುದು. ವ್ಯಕ್ತಿಗಳ ಆಂತರ್ಯದಲ್ಲಿ ಕೆಲವೇ ಸಂಗತಿಗಳು ನಿರಂತರವಾಗಿ

ಅವರ ಬದುಕಿನ ಕಾಲಘಟ್ಟದುದ್ದಕ್ಕೂ ಸ್ಪಂದಿಸುತ್ತಿರುತ್ತವೆ. ಅಂತಹ ವ್ಯಕ್ತಿಗಳು ಆ ಸಂಗತಿಗಳನ್ನು ನಿರಂತರವಾಗಿ ಇನ್ನೊಬ್ಬರಿಗೆ ಹೇಳುತ್ತಿರುತ್ತಾರೆ. ಹಾಗೆ ಕಲಾವಿದರು ತಮ್ಮ ಕೃತಿಗಳ ಮೂಲಕ ಅಭಿವ್ಯಕ್ತಿಸುತ್ತಲಿರುತ್ತಾರೆ. ಹುಸೇನ ಅವರು ಬೇರೆ ಬೇರೆ ವಸ್ತುಗಳ ಕುರಿತು ಚಿತ್ರಿಸುತ್ತಿದ್ದರೂ ಕುದುರೆ ಹಾಗೂ ಮಹಿಳೆ ಬಗ್ಗೆ ಹೆಚ್ಚಿನ ಸಂದರ್ಭದಲ್ಲಿ ಚಿತ್ರಿಸುತ್ತಾರೆ. ಪಾಶ್ಚಾತ್ಯ ಕಲಾವಿದ ಪಿಕಾಸೋ ಗೂಳಿಕಾದಾಟ ಚಿತ್ರಗಳನ್ನು ಕೊನೆವರೆಗೂ ಚಿತ್ರಿಸಿದ, ಹಡಪದ ಅವರು ಬಾದಾಮಿಯ ಪರಿಸರದ ಚಿತ್ರಗಳನ್ನು ರಚಿಸುವಲ್ಲಿ ಒಂದು ಬಗೆಯ ಸಂತೊಷವಿದೆ ಎನ್ನುತ್ತಿದ್ದರು. ಹೀಗೆ ಕಲಾವಿದರು ತಮ್ಮ ಮೇಲೆ ಗಾಢ ಪ್ರಭಾವ ಬೀರಿದ ವಸ್ತುಗಳ ಕುರಿತು ಹೆಚ್ಚಾಗಿ ಚಿತ್ರಿಸುವುದು ಸಾಮಾನ್ಯ ಸಂಗತಿ. ಅದರಂತೆ ಎಂ. ಬಿ. ಪಾಟೀಲರು ಸಹಿತ ಗ್ರಾಮೀಣ ಪರಿಸರ, ಅಲ್ಲಿನ ಸಂಸ್ಕೃತಿ, ಮಹಿಳೆ ವಿಷಯಗಳ ಬಗ್ಗೆ ಇಂದಿಗೂ ನಿರಂತರವಾಗಿ ಚಿತ್ರಿಸುತ್ತಿದ್ದಾರೆ. ಆದರೆ ಅವರು ಅದೆ ವಿಷಯಗಳನ್ನು ಆಯ್ದುಕೊಂಡರೂ ಕಾಲಕಾಲಕ್ಕೆ ಅವರ ನಿರೂಪಣಾ ವಿಧಾನ, ರಚನಾ ಶೈಲಿ ಬದಲಾಗುತ್ತ ಬಂದಿರುವುದು ಕಂಡು ಬರುತ್ತದೆ.

ಪಾಟೀಲರು ಇತ್ತೀಚೆಗೆ ಯಾವುದೇ ವಿಷಯವನ್ನು ಕುರಿತು ಚಿತ್ರರಚಿಸಿದರೂ ಹೆಚ್ಚಾಗಿ ಸೃಜನಶೀಲವಾಗಿ ಮತ್ತು ಸಾಂಕೇತಿಕವಾಗಿ ರಚಿಸುತ್ತಾರೆ. ವಿವರವಾಗಿ ಹೇಳುವುದನ್ನು ವಿಶೇಷವಾಗಿ ಹೇಳುವ ಮೂಲಕ ಹೆಚ್ಚು ಪ್ರಭಾವಶಾಲಿಯಾಗಿ ಚಿತ್ರಿಸುತ್ತಾರೆ. ಪಾಟೀಲರು ಕಂಡುಕೊಂಡಿರುವ ವಿವಿಧ ಮೈವಳಿಕೆಯ ತಂತ್ರಗಳು ಇಂದಿಗೂ ಯುವಕಲಾವಿದರಿಗೆ ಮಾರ್ಗದರ್ಶಿಯಾಗಿವೆ. ಪಾಟೀಲರ ಕಲಾಕೃತಿಗಳನ್ನು ದಶಕಗಳಂತೆ ವಿಂಗಡಿಸಿದಾಗ ಖಂಡಿತವಾಗಿಯೂ ಕಾಲಕಾಲಕ್ಕೆ ಬದಲಾವಣೆಗಳು ಗೋಚರಿಸುತ್ತವೆ.

ಕಡಿಮೆ ಸಮಯದಲ್ಲಿ ಕೆಲವೇ ರೇಖೆ ಮತ್ತು ಬಣ್ಣಗಳಿಂದ ಕಲಾಕೃತಿಗಳನ್ನು ಪೂರ್ತಿಗೊಳಿಸುವುದು ಪಾಟೀಲರ ಕೃತಿರಚನೆಯ ವಿಶೇಷಶೈಲಿಯಾಗಿದೆ. ವಿವರವಾಗಿ ನಿರೂಪಿಸದೆ ಸಂಕ್ಷಿಪ್ತವಾಗಿ ಅನಾವರಣಗೊಳಿಸಿ ಅದರಲ್ಲಿ ಅರ್ಥವಂತಿಕೆ ಮತ್ತು ಭಾವನೆಗಳನ್ನು ಉಂಟು ಮಾಡುವುದು ಇವರ ಹೆಚ್ಚುಗಾರಿಕೆ ಪಾಟೀಲರು ಹೆಚ್ಚಾಗಿ ಕೋಳಿಯನ್ನು ವಸ್ತುವಾಗಿಟ್ಟು ಚಿತ್ರರಚಿಸುವುದು ಕಂಡು ಬರುತ್ತದೆ. ವರ್ಣವಿನ್ಯಾಸದಲ್ಲಿ ಗ್ರಾಮೀಣ ಸೊಗಡಿದೆ. ಪಾಟೀಲರು ಬೇರೆ ಬೇರೆ ಕಡೆಗಳಲ್ಲಿ ಪ್ರಾತ್ಯಕ್ಷಿಕೆ ನೀಡುವಾಗ ಹೆಚ್ಚಾಗಿ ಭಾವಚಿತ್ರ ಹಾಗೂ ಇತರ ವಿಷಯಗಳ ಮೇಲೆ ಸಂಯೋಜನಾ ಚಿತ್ರಗಳನ್ನು ರಚಿಸಿರಬಹುದು. ಮತ್ತು ಅಮೂರ್ತ ಕೃತಿ ಅಥವಾ ನಿಸರ್ಗ ಚಿತ್ರ ರಚಿಸಿರಬಹುದು. ಆದರೆ ಅವರು ರಚಿಸುವ ಮಹಿಳೆ ಮತ್ತು ಕೋಳಿ ವಿಷಯದ ಚಿತ್ರಗಳು ಹೆಚ್ಚು ಖುಷಿ ಕೊಡುತ್ತವೆ.

ಪಾಟೀಲರ ಚಿತ್ರಗಳನ್ನು ನೋಡಿದಾಗ ಅವರು ತಮ್ಮ ನೋವುಗಳನ್ನು ಕೃತಿಗಳ ಮೂಲಕ ಹಂಚಿಕೊಂಡಿದ್ದಾರೆ. ಅನುಭವಗಮ್ಯವಾದ ಅವರ ಚಿತ್ರಗಳಲ್ಲಿ ಅವರ ಬದುಕೇ ಮುಪ್ಪರಿಗೊಂಡಿದೆ. ಬಣ್ಣಗಳು, ರೇಖೆಗಳು, ಆಕಾರಗಳು, ಸಂಯೋಜನೆಗಳು, ಅವರ ಭಾವನೆಗಳ ಸಾಂಕೇತಿಕ ರೂಪಗಳಾಗಿ ಕಂಡು ಬರುತ್ತವೆ. ಭಾವನಾತ್ಮಕ ಚಿತ್ರಗಳು, ಭಾವನೆರಹಿತ ಚಿತ್ರಗಳೆಂದು ವಿಂಗಡಿಸಿದಾಗ ಭಾವನಾತ್ಮಕ ಚಿತ್ರಗಳ ಪ್ರಬುದ್ಧತೆಯನ್ನು ಪಾಟೀಲರ ಕಲಾಕೃತಿಗಳು ತೋರ್ಪಡಿಸುತ್ತವೆ ಕಲಾವಿದನೊಬ್ಬ ತನ್ನ ಮನಸ್ಸಿನಲ್ಲಿರುವ ವಿವಿಧ ರೀತಿಯ ಭಾವನೆಗಳನ್ನು ಯಾವುದಾರೂ ಮಾಧ್ಯಮದ ಮೂಲಕ ಹೊರಹಾಕುತ್ತಾನೆ. ತನ್ನಲ್ಲಿರುವ ಸಂಕುಚಿತ ಭಾವನೆ, ವಿಶಾಲ ಮನೋಭಾವ, ನೋವು, ನಲಿವು, ಸುಖ, ದುಖಃ, ಪ್ರೀತಿ, ಪ್ರೇಮ, ವಾತ್ಸಲ್ಯ, ಮಮತೆ ಇಂತಹ ಯಾವುದೇ ಭಾವನೆಗಳಿರಬಹುದು ಅವುಗಳನ್ನು ಹೊರಹಾಕಿದಾಗಲೇ ಆತನ ಸುಪ್ತಮನಸ್ಸು ನಿರಾಳವಾಗುತ್ತದೆ. ಹಾಗೆ ಪಾಟೀಲರ ಕೃತಿಗಳನ್ನು ಸಮಗ್ರವಾಗಿ ವಿಶ್ಲೇಷಿಸಿದಾಗ ಅವರಿಗೆ ಎಂತಹ ಸಂದರ್ಭದಲ್ಲಿ ಯಾವ ಬಗೆಯ ಭಾವನೆಗಳು ಕಾಡಿವೆ ಎಂಬುದು ತಿಳಿದುಬರುತ್ತದೆ. ಪಾಟೀಲರು ಕೆಲವು ಸಂದರ್ಭದಲ್ಲಿ ಭಾವಚಿತ್ರಗಳನ್ನು ನೈಜ ಶೈಲಿಯಲ್ಲಿ ರಚಿಸುವ ಮೂಲಕ ಮನೆಮಾತಾಗಿದ್ದರು. ಆದರೆ ಇಂದು ಭಾವಚಿತ್ರದಲ್ಲಿಯೂ ಅವರು ಸೃಜನಶೀಲತೆಯನ್ನು ಮೈಗೂಡಿಸಿಕೊಳ್ಳುವ ಮೂಲಕ ತಮ್ಮ ಆಗಾಧ ಸಾಮರ್ಥ್ಯ ಪ್ರದರ್ಶಿಸುತ್ತಿದ್ದಾರೆ.

ಸಂಯೋಜನೆಯಲ್ಲಿ ಪಾಟೀಲರು ವಿಷಯಗಳನ್ನು ಪುನರಾವರ್ತಿಸುವುದಿಲ್ಲ. ಅದರ ಬದಲಾಗಿ ಸಂಕೇತಗಳನ್ನು ಪುನರಾವರ್ತಿಸುತ್ತಾರೆ. ಮಹಿಳೆ ಮತ್ತು ಪಕ್ಷಿಗಳನ್ನು ಅವರು ವಿಷಯವಾಗಿ ಬಳಸಿಕೊಂಡಿರದೇ ಸಂಕೇತವಾಗಿ ಬಳಸಿಕೊಂಡಿದ್ದಾರೆ. ಖಂಡೇರಾವ್, ಶೆಣೈ, ಪುಂಚಿತ್ತಾಯ್, ಪೀಟರ್ ಲೂಯಿಸ್, ಇಂತಹ ಅನೇಕ ಜನರು ಒಂದೇ ಬಗೆಯಲ್ಲಿ ಚಿತ್ರರಚಿಸುತ್ತಿರುವಂತೆ ನಮಗೆ ಕಂಡು ಬರುತ್ತದೆ. ಆದರೆ ಪ್ರತಿ ಕಲಾಕೃತಿಗಳಲ್ಲಿ ಆಯ್ದುಕೊಂಡ ವಿಷಯಗಳು ಬೇರೆಯೇ ಆಗಿದ್ದು ಸಂಕೇತಗಳು ಮಾತ್ರ ಒಂದೇ ತೆರನಾಗಿರುತ್ತವೆ. ಇಂತಹ ಅಂಶಗಳು ಕಲಾಕೃತಿಗಳನ್ನು ಸರಿಯಾಗಿ ಅವಲೋಕಿಸಿದಾಗ ತಿಳಿದುಬರುತ್ತವೆ.

ಪಾಟೀಲರ ರೇಖಾ ಚಿತ್ರಗಳು ವಿಶಿಷ್ಟವಾಗಿವೆ. ನಿರಂತರವಾಗಿ ಇಂದಿಗೂ ರೇಖಾ ಚಿತ್ರಗಳನ್ನು ರಚಿಸುತ್ತಲೆ ಪಾಟೀಲರು ಅದರಲ್ಲಿ ಮತ್ತಷ್ಟು ಪಕ್ವತೆಯನ್ನು ಪಡೆದುಕೊಳ್ಳುತ್ತಿದ್ದಾರೆ. ದಿನಪತ್ರಿಕೆಗಳು, ನಿರುಪಯೋಗಿ ಕಾಗದ, ಬಸ್ ಟಿಕೆಟ್‌ಗಳ ಮೇಲೆ ಸಹಿತ ಇವರು ಸ್ಕೆಚ್ ಮಾಡುತ್ತಾರೆ. ಎಂ. ಬಿ. ಪಾಟೀಲರ ಯಾವುದೇ ಬಗೆಯ ಕಲಾಕೃತಿಯನ್ನು ಎತ್ತಿಕೊಂಡರೂ ಅದರಲ್ಲಿ ಅವರದೆ ಆಗಿರುವ ವಿಶಿಷ್ಟ ಛಾಪು ಇರುತ್ತದೆ. ಭಾವನೆಗಳನ್ನು ಸಹಜವಾಗಿ

ಅಭಿವ್ಯಕ್ತಿಸುವುದು ಒಂದು ಬಗೆಯಾದರೆ, ಭಾವನೆಗಳ ಜೊತೆಗೆ ಸಂಸ್ಕೃತಿಯ ಸಂಬಂಧಗಳನ್ನು ಪೋಣಿಸಿ ಹೆಣೆಯುವುದು ಎರಡನೆಯ ಬಗೆಯಾಗಿದೆ. ಪಾಟೀಲರು ಎರಡನೆಯ ಗುಂಪಿಗೆ ಸೇರಿದವರಾಗಿದ್ದಾರೆ. ಅವರ ಆಧುನಿಕ ಹಿನ್ನೆಲೆಯ ಚಿತ್ರಗಳಲ್ಲಿಯೂ ವಿಶಿಷ್ಟ ಪರಿಣಾಮಗಳಿವೆ. ಯಾವುದೋ ಬಣ್ಣವನ್ನು ಮನಬಂದಂತೆ ಹರಡಿ ಅದಕ್ಕೊಂದು ಹೆಸರು ಕೊಡುವ ಅನೇಕ ಕಲಾವಿದರಿದ್ದಾರೆ. ಆದರೆ ಬಣ್ಣಗಳನ್ನು ಕೈಗೆತ್ತಿಕೊಳ್ಳುವಾಗಲೆ ಅದಕ್ಕೊಂದು ಕಾಲ್ಪನಿಕ ರೂಪ, ಆಕಾರ, ಅರ್ಥವಂತಿಕೆಯನ್ನು ಕಟ್ಟಿಕೊಂಡು ನಂತರ ಅಮೂರ್ತ ಚಿತ್ರರಚಿಸುವುದು ಪಾಟೀಲರ ವಿಶೇಷತೆಯಾಗಿದೆ.

ವ್ಯಕ್ತಿಯೊಬ್ಬ ರೂಪುಗೊಳ್ಳಲು ಅಥವಾ ಅವನ ವ್ಯಕ್ತಿತ್ವ ನಿರ್ಮಾಣಗೊಳ್ಳುವಲ್ಲಿ ಆಯಾ ಪ್ರದೇಶದ ಪ್ರಾದೇಶಿಕ ಲಕ್ಷಣಗಳು ಅಲ್ಲಿನ ಸಂಸ್ಕೃತಿ, ಜೀವನ ವಿಧಾನಗಳು ಪ್ರಭಾವ ಬೀರಿರುತ್ತವೆ. ಅಂತೆಯೇ ವಿಜಾಪೂರದ ಈ ಪ್ರದೇಶಕ್ಕೆ ಅಂತಹ ಶ್ರೇಷ್ಠ ವ್ಯಕ್ತಿಗಳನ್ನು ರೂಪಿಸುವ ಶಕ್ತಿ ಇದ್ದು ಅದರ ಪ್ರತಿಫಲವೇ ಎಂ. ಬಿ. ಪಾಟೀಲರಾಗಿದ್ದಾರೆ. ಇಲ್ಲಿನ ಕರಿಮಣ್ಣಿನ ಸೊಗಡು, ಪ್ರಾಕೃತಿಕ ಹಣ್ಣುಗಳು, ವಿಭಿನ್ನ ಸಂಸ್ಕೃತಿ ಹೊಂದಿದ ಜೀವನ ಪದ್ಧತಿ ಇವೆಲ್ಲವುಗಳು ಅವರ ಕಲೆಯಲ್ಲಿ ಸಾಂಕೇತಿಕವಾಗಿ ಗೋಚರವಾಗುತ್ತವೆ.

ಪಾಟೀಲರು ಸಂಯೋಜನಾ ಚಿತ್ರಗಳಲ್ಲಿ ಅಕಾಡೆಮಿಕ್ ಶೈಲಿ, ಸಾಂಪ್ರದಾಯಿಕ ಶೈಲಿ, ಆಧುನಿಕ ಶೈಲಿಗಳನ್ನು ಸಮ್ಮಿಶ್ರಗೊಳಿಸಿ ಹೊಸದೊಂದು ವೈಯಕ್ತಿಕ ಚಿತ್ರಶೈಲಿಯನ್ನು ಹುಟ್ಟಿಹಾಕಿದ್ದಾರೆ. ಅದು ನೋಡುಗರಲ್ಲಿ ತುಂಬಾ ಪರಿಣಾಮ ಉಂಟು ಮಾಡುತ್ತದೆ. ಪಾಟೀಲರ ಅನೇಕ ಕೃತಿಗಳಲ್ಲಿ ಕೋಳಿ, ಪಾರಿವಾಳ, ಗಿಳಿ, ಗುಬ್ಬಿ, ಗೊರವಂಕ, ಕಾಗೆಯಂತಹ ಪಕ್ಷಿಗಳು ಹೆಚ್ಚಾಗಿವೆ. ಕಲಾಕೃತಿಯೊಂದು ಕಲಾವಿದನ ಮನೋಭಾವವನ್ನು ಸೂಚಿಸುತ್ತದೆ ಎಂದು ಹೇಳಲಾಗುತ್ತದೆ. ಈ ಹಿನ್ನೆಲೆಯಲ್ಲಿ ಪಾಟೀಲರ ಕಲಾಕೃತಿಗಳಲ್ಲಿ ಕಂಡು ಬರುವ ಆಕಾರಗಳು, ರೇಖೆಗಳು, ಬಣ್ಣಗಳು, ಸಂಯೋಜನಾ ವಿಧಾನ ಮುಂತಾದವುಗಳು ಅವರ ವ್ಯಕ್ತಿತ್ವವನ್ನು ಬಿಂಬಿಸುತ್ತವೆ. ತೆಳುವಾಗಿರುವ ಅಕಾರಗಳು ಅವರ ದೇಹವಿನ್ಯಾಸದ ಪ್ರತೀಕಗಳಾದರೆ, ಚಲನಾತ್ಮಕ ಬೀಸು ರೇಖೆಗಳು ಅವರಲ್ಲಿನ ಚುರುಕುತನ, ಬಣ್ಣಗಳು ಅವರ ಭಾವನೆಗಳನ್ನು ಹಾಗೂ ಸಂಯೋಜನಾ ವಿಧಾನ ಅವರು ಸಂಸ್ಕೃತಿಯನ್ನು ಅನುಭವಿಸಿದ ಪ್ರತೀಕಗಳಾಗಿ ಕಂಡು ಬರುತ್ತವೆ. ಪಾಟೀಲರ ಕೃತಿಗಳಲ್ಲಿ ದೇಶಿಯತೆಯ ಸೊಗಡು, ಅದರಲ್ಲಿ ವಿಶೇಷವಾಗಿ ಜನಪದ ಆಚರಣೆ, ನಂಬಿಕೆಗಳು ಹೆಚ್ಚಿನ ಪ್ರಮಾಣಗಳಲ್ಲಿ ಅನಾವರಣಗೊಂಡಿವೆ. ನಂತರ ಹಳ್ಳಿಯ ಬದುಕು ಬವಣೆಗಳನ್ನು ಇವರು ಪರಿಣಾಮಕಾರಿಯಾಗಿ ಚಿತ್ರಿಸಿದ್ದಾರೆ. ಕೋಳಿ ಸಾಕಾಣಿಕೆ,

ಒಕ್ಕಲುತನ, ದನಗಾಹಿಗಳು, ಕೂಲಿಕೆಲಸ ಇವೆಲ್ಲವನ್ನು ಕೃತಿಗಳಲ್ಲಿ ಕಟ್ಟಿಕೊಟ್ಟಿದ್ದಾರೆ. ಪಾಟೀಲರ ಕಲಾಕೃತಿಗಳನ್ನು ವೈಯುಕ್ತಿಕ ನೆಲೆಯಲ್ಲಿ ವೀಕ್ಷಿಸಿದಾಗ ವಿಷಯಗಳ ಆಯ್ಕೆಯಲ್ಲಿ ಪುನರಾವರ್ತನೆಗಳಿದ್ದರೂ ಅವು ಕಾಲದಿಂದ ಕಾಲಕ್ಕೆ ಬದಲಾಗುತ್ತ ಬಂದಿವೆ. ರೇಖೆ, ಆಕಾರ, ವರ್ಣ, ಸಂಯೋಜನೆ, ಪ್ರಸ್ತುತ ಪಡಿಸುವ ರೀತಿ, ಮೈವಳಿಕೆ ಮುಂತಾದ ಕಲಾ ತಾಂತ್ರಿಕ ಅಂಶಗಳು ಬರುಬರುತ್ತ ಪಕ್ವತೆ ಮತ್ತು ಪ್ರಬುದ್ಧತೆಯನ್ನು ಪಡೆದುಕೊಳ್ಳುತ್ತಿವೆ. ಅವರ ಗ್ರಾಮ್ಯ ಬದುಕಿನ ಒಳನೋಟಗಳು, ಅಲ್ಲಿನ ಸಂಸ್ಕೃತಿಯನ್ನು ಪರಿಭಾವಿಸುವ ರೀತಿ, ಹಿಂದಿನ ಹಳ್ಳಿ ಜೀವನ ಮತ್ತು ಇಂದಿನ ಹಳ್ಳಿ ಜೀವನಕ್ಕೂ ಇರುವ ವ್ಯತ್ಯಾಸಗಳು, ಜನರ ನಂಬಿಕೆ, ಆಚಾರ ವಿಚಾರಗಳಲ್ಲಿ ಆಗಿರುವ ಬದಲಾವಣೆಗಳು, ಪ್ರಕೃತಿಯ ಸ್ಥಿತ್ಯಂತರಗಳು ಎಲ್ಲವನ್ನೂ ಪಾಟೀಲರು ತಮ್ಮ ಕಲಾಕೃತಿಯಲ್ಲಿ ಕಾಲಕಾಲಕ್ಕೆ ಒಡಮೂಡಿಸುತ್ತ ಬಂದಿದ್ದಾರೆ.

ಪಾಟೀಲರ ಅಮೂರ್ತ ಕಲಾಕೃತಿಗಳು ಹೆಚ್ಚು ಮೌಲ್ಯಯುತವಾಗಿರುತ್ತವೆ. ಅಲ್ಲಿ ರೂಪಿಸುವ ಆಕಾರಗಳು, ಬಣ್ಣಗಳ ಲೇಪನ, ಮಿಶ್ರಣ ವಿಧಾನ, ನೆರಳು ಬೆಳಕಿನ ವಿನ್ಯಾಸ, ಸಾಂಕೇತಿಕ ಸಂಗತಿಗಳು ಪ್ರಬುದ್ಧವಾಗಿರುತ್ತವೆ. ಅವಶ್ಯಕತೆಗಿಂತ ಹೆಚ್ಚಿನ ವರ್ಣಲೇಪನವನ್ನು ಅವರು ಕೃತಿರಚನೆಯಲ್ಲಿ ಬಳಸುವುದಿಲ್ಲ. ಇಂದಿನ ಕೆಲವು ಯುವಕಲಾವಿದರು ನೇರವಾಗಿ ಬಣ್ಣದ ಟ್ಯೂಬುಗಳನ್ನೆ ಕ್ಯಾನವಾಸ್ ಮೇಲೆ ಹಿಚುಕಿ ಬಣ್ಣಲೇಪಿಸುವುದನ್ನು ಇವರು ಕೆಲವು ಸಂದರ್ಭದಲ್ಲಿ ಆಕ್ಷೇಪಿಸುತ್ತಾರೆ.

ಪಾಟೀಲರು ಯಾವುದೇ ಕಲಾಕೃತಿಯನ್ನು ರಚಿಸಿದರೂ ಅದರಲ್ಲಿ ಒಂದು ಬಗೆಯ ಗುರುತಿಸುವಿಕೆಯ ಲಕ್ಷಣಗಳಿವೆ. ಕ್ಯಾನವಾಸ್ ಅಥವಾ ಪೇಪರ ಮೇಲೆ ಕೃತಿಗಳನ್ನು ರಚಿಸುವಾಗ ಪಾಟೀಲರು ಅದೊಂದು ವಿಶಿಷ್ಟ ಶೈಲಿಯಿಂದಾಗಿ ಗುರುತಿಸಲ್ಪಡಬೇಕು ಎಂಬ ಪೂರ್ವ ಧೋರಣೆಗಳನ್ನು ಹೊಂದಿರದೇ ಇದ್ದರು ಸಹಿತ ರಚನೆಯ ನಂತರ ಅವರ ವ್ಯಕ್ತಿತ್ವ, ಶೈಲಿ, ಧೋರಣೆಗಳು, ಮನಸ್ಸಿನ ಆಗು ಹೋಗುಗಳು, ಅನುಭವಗಳು ಕಲಾಕೃತಿಯಲ್ಲಿ ಅನಾವರಣ ಗೊಂಡಿರುತ್ತವೆ. ಬಣ್ಣಗಳ ಬಳಕೆಯ ವಿಧಾನವು ವಿಶಿಷ್ಟವಾಗಿರುವುದಲ್ಲದೆ ಆಕಾರಗಳನ್ನು ಶೈಲೀಕೃತಗೊಳಿಸಿ ರಚಿಸುವಲ್ಲಿ ಮತ್ತು ಸಂಯೋಜನಾ ಪದ್ಧತಿಗಳಲ್ಲಿ ಪಾಟೀಲರು ಕರ್ನಾಟಕದ ಇತರೆಲ್ಲ ಹಿರಿಯ ಕಲಾವಿದರಿಗಿಂತ ಭಿನ್ನವಾಗಿ ನಿಲ್ಲುತ್ತಾರೆ.

ಪಾಟೀಲರು ಸಾಮಾಜಿಕ ಮತ್ತು ಕೌಟುಂಬಿಕ ಸಮಸ್ಯೆಗಳ ಬಗ್ಗೆ ಹೆಚ್ಚಾಗಿ ಚಿತ್ರಿಸುತ್ತಾರೆ. ಇದಕ್ಕೆ ಸಮಾಜ ಮತ್ತು ಕುಟುಂಬದಲ್ಲಿ ಅವರು ಎದುರಿಸಿದ ತೊಂದರೆಗಳು, ಕಷ್ಟಗಳು ಕಾರಣವಾಗಿರಬಹುದು. ಅವರು ವಿದ್ಯಾರ್ಥಿದೆಸೆಯಲ್ಲಿ ಪ್ರತಿದಿನ ನಿಯಮಿತವಾಗಿ

ರೇಖಾಚಿತ್ರ (ಸ್ಕೆಚ್) ಮಾಡುತ್ತಿದ್ದರು. ರೇಖಾ ಚಿತ್ರಕಲೆಯು ಜೀವಾಳವಾಗಿದ್ದು, ಪ್ರಬುದ್ಧ ರೇಖಾ ಚಿತ್ರ ರಚಿಸುವವರು ಚಿತ್ರಕಲೆಯಲ್ಲಿ ಏನುಬೇಕಾದರೂ ಸಾಧಿಸಬಹುದು. ರೇಖಾ ಚಿತ್ರ ರಚನೆಯ ಸಿದ್ಧಿಯಿಂದ ಯಥಾದರ್ಶನ, ಸಂಯೋಜನೆ, ಆಯಾಮಗಳು, ಆಕಾರಗಳು, ಸ್ಮರಣಶಕ್ತಿ, ಸೃಜನಶೀಲತೆ, ಪ್ರಮಾಣಬದ್ಧತೆ ಇಂತಹ ವಿವಿಧ ಅಂಶಗಳು ಸುಧಾರಣೆಯಾಗುತ್ತವೆ.

ಸ್ಕೆಚ್ ಮಾಡುವಲ್ಲಿ ಅವರಿಗಿರುವ ಶ್ರದ್ಧೆ, ನಿರಂತರತೆ, ಪ್ರಾಮಾಣಿಕ ಪ್ರಯತ್ನಗಳು ಎಂತವರಿಗೂ ಆಶ್ಚರ್ಯ ಉಂಟು ಮಾಡುತ್ತವೆ. ಹಿಂದಿನ ಅವರ ರೇಖಾ ಚಿತ್ರಕ್ಕೂ ಇಂದಿನ ರೇಖಾ ಚಿತ್ರಕ್ಕೂ ಹೋಲಿಸಿದಾಗ ಸಾಕಷ್ಟು ಬದಲಾವಣೆಗಳು ಉಂಟಾಗಿವೆ. ಪ್ರತಿಯೊಂದನ್ನು ವಿವರವಾಗಿ ರಚಿಸುವ ಪರಿಪಾಠ ಮೊದಲಿಗೆ ಕಂಡು ಬಂದರೆ, ನಂತರದ ದಿನಗಳಲ್ಲಿ ಸರಳತೆ ಮತ್ತು ಸಾಂಕೇತಿಕತೆಗಳು ಮೈಗೂಡಿವೆ. ಯಾವುದೇ ಕಲಾವಿದ ಇನ್ನಾವುದೋ ಕಲಾವಿದರಿಂದ ಪ್ರಭಾವಿತಗೊಳ್ಳುವುದು ಸಾಮಾನ್ಯ ಸಂಗತಿ, ಹೀಗೆ ಪಾಟೀಲರು ಬಹುಶ ಪ್ರಭಾವಿತಗೊಂಡರೂ ಅದರಲ್ಲಿ ತನ್ನತನವನ್ನು ಕಾಯ್ದುಕೊಂಡಿರುವುದು ಮಹತ್ವದ್ದಾಗಿದೆ. ಇಂದು ಕರ್ನಾಟಕದಲ್ಲಿ ಪಾಟೀಲರದೇ ಆದ ಒಂದು ವಿಶಿಷ್ಟ ಚಿತ್ರಕಲಾ ಶೈಲಿಯಿಂದ ಅವರು ಗುರುತಿಸಲ್ಪಡುತ್ತಿದ್ದಾರೆ.

ಪಾಟೀಲರು ಪ್ರಾರಂಭಿಕ ಹಂತದಲ್ಲಿ ತಮ್ಮದೆ ಚಿತ್ರಶೈಲಿಯನ್ನು ರೂಢಿಸಿಕೊಳ್ಳುವಲ್ಲಿ ಹಳ್ಳಿ ಬದುಕಿನ ಸರಳವಾಗಿರುವ ವಿಷಯಗಳನ್ನು ಆಯ್ದುಕೊಂಡು ಚಿತ್ರಿಸತೊಡಗಿದರು. ನಂತರ ಅಂತಹ ವಿಷಯಗಳಲ್ಲೇ ಗಹನವಾದ ವಿಚಾರಗಳನ್ನು ತುಂಬತೊಡಗಿದರು. ಪಾಟೀಲರು ಸ್ತ್ರೀ ಬದುಕಿನ ಆಗುಹೋಗುಗಳಿಗೆ ಹೆಚ್ಚು ಸ್ಪಂಧಿಸಿ ಚಿತ್ರಿಸುತ್ತಾರೆ. ಪ್ರಾರಂಭಿಕ ಸಂಯೋಜನಾ ಚಿತ್ರಗಳಲ್ಲಿ ಹೆಚ್ಚಿನ ಆಕಾರಗಳಿದ್ದರೆ, ನಂತರದಲ್ಲಿ ಕಡಿಮೆ ಆಕೃತಿಗಳನ್ನು ಬಳಸಿಕೊಂಡು ಸಂಯೋಜಿಸಿರುವುದು ಕಂಡು ಬರುತ್ತದೆ. ಇತ್ತೀಚೆಗಂತೂ ಒಂದು ಅಥವಾ ಎರಡು ಆಕಾರಗಳನ್ನು ಸಂಯೋಜಿಸಿರುವುದು ಕುತೂಹಲ ಹುಟ್ಟಿಸುತ್ತದೆ. ಆಕೃತಿಗಳಿಗೆ ಹೊಂದಿಕೆಯಾಗುವಂತೆ ಇನ್ನಿತರ ವಸ್ತುಗಳು, ಹಿನ್ನೆಲೆ ಮುನ್ನೆಲೆಗಳು, ಮೈವಳಿಕೆಗಳನ್ನು ರೂಪಿಸುವಲ್ಲಿ ಇತರರಿಗಿಂತ ಭಿನ್ನವಾಗಿ ನಿಲ್ಲುತ್ತಾರೆ. ಮೊದಲಿಗೆ ಮುಂಬೈನಲ್ಲಿ ಪ್ರಚಲಿತದಲ್ಲಿದ್ದ ಆಕಾಡಮಿಕ್ ಶೈಲಿಯಲ್ಲಿ ಚಿತ್ರಿಸುತ್ತಿದ್ದರು. ಇದರಲ್ಲಿ ಹೆಚ್ಚಿನ ಅಲಂಕಾರ, ಆಡಂಬರತೆಗಳು ಕಂಡು ಬರುತ್ತವೆ. ಆದರೆ ಇತ್ತೀಚಿನ ಕೃತಿಗಳಲ್ಲಿ ಸರಳತೆ ಇದೆ. ಚಪ್ಪಟೆಯಾದ ವರ್ಣಲೇಪನ, ಅವಶ್ಯವಿದ್ದಲ್ಲಿ ಗಡುಸಾದ ಹೊರರೇಖೆಗಳು, ಅವರ ಕೃತಿಗಳಲ್ಲಿ ಪ್ರಮುಖವಾಗಿವೆ. ಹಿಂದೆ ಸಂಯೋಜನೆಯ ತತ್ವಗಳಿಗೆ ಬದ್ಧವಾದ ಕೃತಿಗಳನ್ನು ರಚಿಸುತ್ತಿದ್ದಾರೆ. ಇಂದು ಅವರೆ ಸಂಯೋಜನಾ ತತ್ವಗಳನ್ನು ಅಭಿವೃದ್ಧಿ ಪಡಿಸುವ ಹಂತದಲ್ಲಿ ಸೃಜನಶೀಲತೆಯಿಂದ ಚಿತ್ರಿಸುತ್ತಾರೆ.

ಮುಂಬೈನಲ್ಲಿ ಕಲಿತವರು. ಅಲ್ಲಿಯ ಅಕಾಡಮಿಕ್ ಚಿತ್ರರಚನಾ ವಿಧಾನದ ಒಂದು ಶಿಸ್ತಿಗೆ ಒಳಪಟ್ಟಿದ್ದರು. ಮೊದಲಿಗೆ ರೇಖೆಗಳನ್ನು ಪೆನ್ಸಿಲ್ ಅಥವಾ ಚಾರ್ಕೋಲ್‌ದಿಂದ ಹಾಕಿಕೊಳ್ಳುತ್ತಿದ್ದರು. ನಂತರ ಎರಡನೆಯ ಹಂತದಲ್ಲಿ ಅದೇ ರೇಕೆಯ ಮೇಲೆ ಕೆಂಪು ಇಲ್ಲವೆ ಹಳದಿ ವರ್ಣದಿಂದ ರೇಖಾಚಿತ್ರ ರಚಿಸಲಾಗುತ್ತಿತ್ತು. ಮೂರನೆಯ ಹಂತದಲ್ಲಿ ನೆರಳಿನ ಭಾಗವನ್ನು ಅದೇ ವರ್ಣದಿಂದ ತುಂಬಿಕೊಂಡರೆ, ನಾಲ್ಕನೆಯ ಹಂತದಲ್ಲಿ ವರ್ಣವೈವಿಧ್ಯತೆಯನ್ನು ರೂಪಿಸಲಾಗುವುದು.ಐದನೆಯ ಹಂತದಲ್ಲಿ ನೆರಳು ಬೆಳಕಿನ ವಿನ್ಯಾಸವನ್ನು ಪರಿಣಾಮಕಾರಿಯಾಗಿ ರೂಪಿಸಿಕೊಳ್ಳುವುದು ಮತ್ತು ವರ್ಣಛಾಯೆಗಳಲ್ಲಿ ವೈವಿಧ್ಯತೆಗಳನ್ನು ಉಂಟು ಮಾಡುವದಾಗಿತ್ತು. ಆರನೆಯ ಹಂತದಲ್ಲಿ ಮತ್ತೆ ಅವಶ್ಯವಿದ್ದಲ್ಲಿ ಚಿತ್ರಕ್ಕೆ ಕಪ್ಪು ವರ್ಣದಿಂದ ಹೊರರೇಖೆ ಎಳೆಯುವುದು. ಅತಿಬೆಳಕಿನ ಭಾಗವನ್ನು ಗುರುತಿಸುವ ಮೂಲಕ ಚಿತ್ರವನ್ನು ಮುಕ್ತಾಯ ಮಾಡಲಾಗುತ್ತಿತ್ತು. ಇದೇ ಪದ್ಧತಿಯನ್ನು ಪಾಟೀಲರು ಪ್ರಾರಂಭಿಕ ಹಂತದಲ್ಲಿ ಅನುಸರಿಸುತ್ತಿದ್ದರು. ಆದರೆ ಪ್ರಬುದ್ಧತೆ ಮತ್ತು ಸ್ವಂತ ಶೈಲಿಯನ್ನು ಕಂಡುಕೊಂಡ ಮೇಲೆ ಇದರಿಂದ ಹೊರತಾದ ಚಿತ್ರರಚನಾ ವಿಧಾನಗಳನ್ನು ಅನುಸರಿಸುತ್ತಿದ್ದಾರೆ ಎಂದು ಹೇಳಬಹುದು.

ಪಾಟೀಲರ ಅಮೂರ್ತ ಕೃತಿಗಳಲ್ಲಿ ಹಲವಾರು ಮೌಲಿಕ ವಿಚಾರಗಳಿವೆ. ಹೆಚ್ಚಿನ ಜನರು ಅಮೂರ್ತ ಕೃತಿಗಳನ್ನು ರಚಿಸುವುವಾಗ ಯಾವುದೇ ರೀತಿಯ ಪರಿಣಾಮಕಾರಿಯಾದ ರಚನಾತತ್ವಗಳನ್ನು ಅಳವಡಿಸಿಕೊಳ್ಳುವುದು ಕಡಿಮೆ ಆದರೆ ಪಾಟೀಲರು ತಮ್ಮ ಅಮೂರ್ತ ಕೃತಿಗಳಲ್ಲಿ ಆಯಾಮುಗಳ ಕಲ್ಪನೆಯನ್ನು ಕೊಡುತ್ತಾರೆ. ಅಲ್ಲದೆ ಸಮತ್ವ, ಬಣ್ಣಗಳ ಬಳಕೆಯಲ್ಲಿ ತಂಪುಗುಣಧರ್ಮ, ಸರಳತೆ, ಚಲನಾತ್ಮಕ ರೇಖಾ ವಿನ್ಯಾಸ ಇಂತಹ ಪ್ರಮುಖ ಲಕ್ಷಣಗಳು ಇವರ ಅಮೂರ್ತ ಕೃತಿಗಳಲ್ಲಿ ಕಂಡು ಬರುತ್ತವೆ.

ರೇಖಾಚಿತ್ರರಚನೆಯಲ್ಲಿ ತುಂಬಾ ಪರಿಶ್ರಮ, ಸೃಜನಶೀಲತೆ, ಜೀವಂತಿಕೆಯನ್ನು ಅಳವಡಿಸಿಕೊಂಡಿರುವ ಇವರು ಕರ್ನಾಟಕದ ಪ್ರಮುಖ ರೇಖಾಚಿತ್ರಕಲಾವಿದರಲ್ಲಿ ಒಬ್ಬರಾಗಿದ್ದಾರೆ. ಕಲೆಯ ಬಗ್ಗೆ ಬೇಸಿಕ್ ನಾಲೇಜ್ (ತಳಹದಿ ಜ್ಞಾನ) ತುಂಬಾ ಚನ್ನಾಗಿದ್ದು, ಎಲ್ಲ ಬಗೆಯ ಕಲಾಕೃತಿಗಳನ್ನು ಸರಾಗವಾಗಿ ರಚಿಸುತ್ತಾರೆ. ರೇಖಾಚಿತ್ರರಚನೆಯಲ್ಲಿ ಸಹಿತ ಒಂದು ನಿರ್ಧಿಷ್ಟ ಶೈಲಿಯನ್ನು ಕೆಲವು ಕಲಾವಿದರು ಅಳವಡಿಸಿಕೊಂಡಿರುತ್ತಾರೆ. ಕರ್ನಾಟಕದಲ್ಲಿ ಹೆಬ್ಬಾರರು ಈ ಶೈಲಿಯನ್ನು ನಿಟ್ಟಿನಲ್ಲಿ ಪ್ರಮುಖರಾಗಿದ್ದಾರೆ. ಅವರಂತೆ ಪಾಟೀಲರು ಕೂಡಾ ವಿಶಿಷ್ಟ ರೇಖಾಚಿತ್ರ ಶೈಲಿಯನ್ನು ಕಂಡುಕೊಂಡಿರುವುದು ಮಹತ್ವದ್ದಾಗಿದೆ.

* * * * *

**ಕ**ಲೆ ಮನುಷ್ಯನ ಆಂತರಿಕ ಭಾವನೆಗಳನ್ನು ಹೊರಹಾಕುವ ಪ್ರಬಲ ಮಾಧ್ಯಮ ಮಾತ್ರವಲ್ಲದೆ, ಆತನ ಮನಸ್ಸನ್ನು ಮುದಗೊಳಿಸುವ ಸಾಧನವೂ ಆಗಿದೆ. ಸಮಾಜವನ್ನು ರೂಪಿಸುವಲ್ಲಿ ಹಾಗೂ ಸಾಂಸ್ಕೃತಿಕ ಬದುಕನ್ನು ಶ್ರೀಮಂತಗೊಳಿಸುವಲ್ಲಿ ಸಹಿತ ಕಲೆಯ ಪಾತ್ರ ಮಹತ್ವದ್ದಾಗಿದೆ. ಹಾಗಾಗಿ ಕಲೆ ಮತ್ತು ಸಂಸ್ಕೃತಿಗಳು ನಾಡಿನ ಹಿರಿಮೆಯನ್ನು ನಿರ್ಧರಿಸುವಲ್ಲಿ ಪ್ರಮುಖ ಪಾತ್ರವಹಿಸುತ್ತವೆ. ಹಾಗೆಯೆ ಯಾವುದೇ ಕಲಾಪ್ರಕಾರದ ರಚನಾ ಕ್ರಮದ ಹಿನ್ನೆಲೆಯಲ್ಲಿ ಅದನ್ನು ಅಭಿವ್ಯಕ್ತಿಗೊಳಿಸುವ ಕಲಾವಿದನ ಭಾವನಾತ್ಮಕ ನಿಲುವುಗಳು, ಜೀವನ ಪದ್ಧತಿ, ಕೌಶಲ್ಯ, ಪ್ರತಿಭೆ, ಸೃಜನಶೀಲತೆಗಳು ಆ ಕಲಾಕೃತಿಯ ಮೌಲಿಕತೆಯನ್ನು ನಿರ್ಧರಿಸುತ್ತವೆ.

ಕಲಾವಿದ ತಾನು ರಚಿಸುವ ಕಲಾಕೃತಿಯ ಮೂಲಕ ಅಂದಿನ ಕಾಲಮಾನದ ಆಗು ಹೋಗುಗಳು, ಜೀವನ ವಿಧಾನ ಸಾಮಾಜಿಕ ವ್ಯವಸ್ಥೆ, ಧಾರ್ಮಿಕ, ಲೌಕಿಕ ವಿಚಾರಗಳು, ನಂಬಿಕೆ ಆಚರಣೆಗಳು, ವಿಧಿಕ್ರಿಯೆಗಳು, ಸುತ್ತಲಿನ ಪರಿಸರ ಹೀಗೆ ಪ್ರತಿಯೊಂದು ಸಂಗತಿಯನ್ನು ಸಾಂಕೇತಿಕವಾಗಿ ಅಭಿವ್ಯಕ್ತಪಡಿಸುತ್ತಲೇ ಬಂದಿದ್ದಾನೆ. ಹಾಗಾಗಿ ಕಲಾವಿದರ ಬಗೆಗಿನ ಅಧ್ಯಯನ ವೆಂದರೆ ಅಲ್ಲಿ ಕೇವಲ ಆತ ರಚಿಸಿದ ಕಲಾಕೃತಿಯ ಸೌಂದರ್ಯ, ರಚನಾ ವಿಧಾನ, ಪರಿಕರಗಳು, ಕೃತಿಯ ವಸ್ತುವಿಷಯ, ಮಾಧ್ಯಮ ಹಾಗೂ ತಾಂತ್ರಿಕತೆಯಂತಹ ಸಂಗತಿಗಳ ಜೊತೆಗೆ ಮೇಲಿನ ಎಲ್ಲ ಅಂಶಗಳ ಬಗ್ಗೆ ವಿಶ್ಲೇಷಣೆ ಮಾಡುವುದು ಪ್ರಮುಖವಾಗುತ್ತದೆ.

ಎಂ. ಬಿ. ಪಾಟೀಲರ ಕುರಿತಾಗಿರುವ ಪ್ರಸ್ತುತ ಅಧ್ಯಯನದಲ್ಲಿ ಮೇಲೆ ಹೇಳಲಾದ ವೈವಿಧ್ಯ ದೃಷ್ಟಿ ಕೋನಗಳಿಂದಲೇ ವಿಷಯಗಳನ್ನು ಚರ್ಚೆಗೊಳಪಡಿಸಲಾಗಿದೆ. ಪಾಟೀಲರು ತಮ್ಮ ಕಲಾಬದುಕಿನುದ್ದಕ್ಕೂ ವಿವಿಧ ರೀತಿಯ ಕಲಾಕೃತಿಗಳನ್ನು ರಚಿಸುತ್ತ ಬಂದಿದ್ದಾರೆ. ರಚನಾ ವಿಧಾನ, ಚಿತ್ರಶೈಲಿ, ಮಾಧ್ಯಮ ಹಾಗೂ ಪರಿಕರಗಳ ಬಳಕೆ, ವಿಷಯದ ಆಯ್ಕೆ, ಸಂಯೋಜನೆ, ನಿರೂಪಣಾ ಶೈಲಿ ಹೀಗೆ ಎಲ್ಲ ವಿಭಾಗಗಳಲ್ಲಿ ಕಾಲದಿಂದ ಕಾಲಕ್ಕೆ ಬದಲಾವಣೆಗಳು ಕಂಡು ಬರುತ್ತವೆ. ಬಾಲ್ಯದ ಅನುಭವಗಳು, ಪ್ರೌಢಾವಸ್ಥೆಯ ನಿರ್ಧಾರಗಳು, ಇಳಿವಯಸ್ಸಿನ ಪಕ್ವತೆಗಳು ಅವರ ಕೃತಿಗಳಲ್ಲಿ ಒಡಮೂಡಿವೆ. ಅಂದಿನ ಜೀವನ ಪದ್ಧತಿ, ಇಂದಿನ ಜೀವನ ಪದ್ಧತಿ, ಸಾಮಾಜಿಕ ವ್ಯವಸ್ಥೆಯಲ್ಲಿ ಉಂಟಾದ ಪರಿಣಾಮಗಳು, ಪರಿಸರದಲ್ಲಿನ ಏರಿಳಿತಗಳೆಲ್ಲವನ್ನು ಅವರ ಕಲಾಕೃತಿಗಳು ಪ್ರತಿನಿಧಿಸುತ್ತವೆ. ಮಾನವ ಸಂಬಂಧಗಳು, ಗ್ರಾಮೀಣ ಸಂಸ್ಕೃತಿ, ಪರಿಸರ ಕಾಳಜಿ, ಸಾಮಾಜಿಕ ಮೌಲ್ಯಗಳನ್ನು ತಮ್ಮ ಕೃತಿಗಳಲ್ಲಿ ಹೆಚ್ಚಾಗಿ ಬಿಂಬಿಸುವ ಪಾಟೀಲರು ಇನ್ನುಳಿದ ಸಂಗತಿಗಳಿಗೂ ಪ್ರಾಸಂಗಿಕವಾಗಿ ಆಧ್ಯತೆ ನೀಡಿದ್ದಾರೆ. ಎಂ. ಬಿ. ಪಾಟೀಲರ ಕಲಾ ಬದುಕನ್ನು ಅವಲೋಕಿಸಿದಾಗ ಕುತೂಹಲಕರವಾದ ಹಲವಾರು ಸಂಗತಿಗಳು ಗಮನಕ್ಕೆ ಬರುತ್ತವೆ. ಅವರು ಕೇವಲ ಒಬ್ಬ ಕಲಾವಿದರಾಗಿ ಮಾತ್ರವಲ್ಲದೆ, ಸಾಮಾಜಿಕ ಜವಾಬ್ದಾರಿ ಹೊಂದಿದ ಆದರ್ಶ ವ್ಯಕ್ತಿಯಾಗಿಯೂ ಪ್ರಸ್ತುತರಾಗುತ್ತಾರೆ. ಇಂತಹ ಎಲ್ಲ ಸಂಗತಿಗಳನ್ನು ತಿಳಿದುಕೊಳ್ಳುವ ಉದ್ದೇಶ ಹೊಂದಿರುವ ಈ ಅಧ್ಯಯನದಲ್ಲಿ ಒಟ್ಟು ಐದು ಅಧ್ಯಾಯಗಳಲ್ಲಿ ವಿಷಯ ನಿರೂಪಣೆಗೊಂಡಿದೆ. ಪ್ರತಿಯೊಂದು ಅಧ್ಯಾಯದಲ್ಲಿ ಚರ್ಚಿಸಲ್ಪಟ್ಟ ಸಂಗತಿಗಳ ಸಂಕ್ಷಿಪ್ತ ನೋಟ ಕೆಳಗಿನಂತಿದೆ.

ಮೊದಲನೆ ಅಧ್ಯಾಯದಲ್ಲಿ ಅಧ್ಯಯನದ ಉದ್ದೇಶ, ಸ್ವರೂಪ, ವ್ಯಾಪ್ತಿ ಹಾಗೂ ವೈಧಾನಿಕತೆಗಳ ಕುರಿತು ಹೇಳಲಾಗಿದೆ. ಪ್ರಾರಂಭದಲ್ಲಿ ಕಲೆ, ಚಿತ್ರಕಲೆ, ಇವುಗಳ ಬಗ್ಗೆ ಪೀಠಿಕೆಯನ್ನು ನೀಡಿ ಚಿತ್ರಕಲಾವಿದರ ಕುರಿತು ಹೇಳಲಾಗಿದೆ. ಕಲೆ, ಕಲಾವಿದ, ಕಲಾಕೃತಿ ಸಹೃದಯ ಇವುಗಳ ಸಹ ಸಂಬಂಧಗಳ ವಿಶ್ಲೇಷಣೆ ಮಾಡುತ್ತ ಕಲಾವಿದನ ಗಮನಾರ್ಹ ಪಾತ್ರದ ಬಗ್ಗೆ ತಿಳಿಸಲಾಗಿದೆ. ಜೊತೆಗೆ ಕಲಾವಿದನ ಸಾಮಾಜಿಕ ಜವಾಬ್ದಾರಿ, ಅಭಿವ್ಯಕ್ತಿ ಸ್ವಾತಂತ್ರ್ಯ ಇವುಗಳೆಲ್ಲವನ್ನು ಸ್ಥೂಲವಾಗಿ ಬಿಂಬಿಸುತ್ತ, ಈ ಹಿನ್ನೆಲೆಯಲ್ಲಿ ಎಂ. ಬಿ. ಪಾಟೀಲರ ಕಲಾಬದುಕನ್ನು ಕುರಿತು ಪ್ರಸ್ತುತ ಅಧ್ಯಯನವನ್ನು ಏಕೆ ಕೈಗೆತ್ತಿಕೊಳ್ಳಲಾಗಿದೆ ಎಂಬುದನ್ನು ವಿವರಿಸಿದೆ. ಕಲೆ, ಕಲಾಪ್ರಕಾರಗಳು ಮತ್ತು ಕಲಾವಿದರ ಕುರಿತಾಗಿರುವ ಅಧ್ಯಯನಗಳಿಗೆ ಇರುವ ಮಹತ್ವ, ಇಂತಹ ಅಧ್ಯಯನಗಳನ್ನು ಯಾವ ಕಾರಣಗಳಿಗಾಗಿ ತುರ್ತಾಗಿ ಕೈಗೊಳ್ಳಬೇಕಿದೆ ಎಂಬುದನ್ನು ವಿವೇಚಿಸಲಾಗಿದೆ. ಇದಲ್ಲದೆ ಪಾಟೀಲರು ಕಲಾಕ್ಷೇತ್ರಕ್ಕೆ ನಾಡಿನ ಸಂಸ್ಕೃತಿಗೆ ನೀಡಿದ ಕೊಡುಗೆಗಳನ್ನು ಬಿಂಬಿಸುತ್ತ ಅವುಗಳ

ಬಗ್ಗೆ ಅಧ್ಯಯನ ಮಾಡಬೇಕಾಗಿರುವ ಮಹತ್ವವನ್ನು ಹೇಳಲಾಗಿದೆ.ಅಂದರೆ ಎಂ. ಬಿ. ಪಾಟೀಲರ ಕುರಿತಾಗಿರುವ ಈ ಅಧ್ಯಯನವು ಕರ್ನಾಟಕದ ಕಲಾಕ್ಷೇತ್ರಕ್ಕೆ, ಸಾಂಸ್ಕೃತಿಕ ಲೋಕಕ್ಕೆ, ಸಮಾಜಕ್ಕೆ ಯಾವ ರೀತಿಯಲ್ಲಿ ಪ್ರಯೋಜನಕಾರಿಯಾಗಿದೆ ಎಂಬುದನ್ನು ಹೇಳುತ್ತ ಪ್ರಸ್ತುತ ಅಧ್ಯಯನದ ಪ್ರಮುಖ ಉದ್ದೇಶಗಳನ್ನು ಹೇಳಲಾಗಿದೆ. ಇದಲ್ಲದೆ ಈ ಅಧ್ಯಯನದ ಸ್ವರೂಪ, ಅದರ ವ್ಯಾಪ್ತಿ ಕುರಿತು ಸಂಕ್ಷಿಪ್ತವಾಗಿ ತಿಳಿಸಲಾಗಿದೆ. ಕೊನೆಗೆ ಪ್ರಸ್ತುತ ಅಧ್ಯಯನದಲ್ಲಿ ಅನುಸರಿಸಲಾದ ವೈಧಾನಿಕತೆ, ಕ್ಷೇತ್ರಕಾರ್ಯ, ಆಕರ ಸಾಮಗ್ರಿಗಳ ಬಗ್ಗೆ ವಿವರಿಸಲಾಗಿದೆ.

ಎರಡನೆಯ ಅಧ್ಯಾಯದಲ್ಲಿ ಎಂ. ಬಿ. ಪಾಟೀಲರ ಬಾಲ್ಯಜೀವನ, ಸಾಮಾನ್ಯ ಶಿಕ್ಷಣ, ಕಲಾಶಿಕ್ಷಣ ಮತ್ತು ವೃತ್ತಿ ಬದುಕುಗಳ ಬಗ್ಗೆ ವಿವೇಚಿಸಲಾಗಿದೆ. ಇವರು ವಿಜಾಪೂರ ಜಿಲ್ಲೆಯ ತಿಕೋಟಾ ಎಂಬ ಗ್ರಾಮದಲ್ಲಿ ೧೯೩೯ ರಲ್ಲಿ ಜನಿಸಿದಾಗ ಬ್ರಿಟೀಷರ ಆಳ್ವಿಕೆ ಇತ್ತು. ಬಾಲ್ಯದಲ್ಲಿಯೇ ಸ್ವಾತಂತ್ರ್ಯ ಸಂಗ್ರಾಮದ ಕೆಚ್ಚು, ದೇಶಭಕ್ತಿ, ಸ್ವಾಭಿಮಾನಗಳನ್ನು ಅಳವಡಿಸಿಕೊಳ್ಳುವಂತಹ ಸಂದರ್ಭ ಇವರದಾಗಿತ್ತು. ಒಂದು ಕಡೆಗೆ ಬ್ರಿಟೀಷರ ವಿರುದ್ಧದ ಆಂದೋಲನಗಳ ಕಾವು ಏರುತ್ತಿದ್ದರೆ, ಇನ್ನೊಂದು ಕಡೆಗೆ ಬಿಜಾಪುರವನ್ನಾಳಿದ ಮುಸ್ಲಿಂ ದೊರೆಗಳ ಇಸ್ಲಾಂ ಸಂಸ್ಕೃತಿಯ ಪಡಿನೆರಳು ಇವರ ಬಾಲ್ಯದ ಬದುಕನ್ನು ರೂಪಿಸುವಲ್ಲಿ ಪ್ರಮುಖ ಪಾತ್ರವಹಿಸಿದವು. ಇಂತಹ ಅನೇಕ ಸಂಗತಿಗಳನ್ನು ಈ ಅಧ್ಯಾಯದಲ್ಲಿ ಚರ್ಚಿಸಲಾಗಿದೆ.

ಎಂ. ಬಿ. ಪಾಟೀಲರದು ಬಡಕುಟುಂಬವಾಗಿತ್ತು. ಇವರ ತಂದೆಗೆ ಒಂದು ಅಂಗಡಿಯಲ್ಲಿ ಲೆಕ್ಕ ಬರೆಯುವ ಗುಮಾಸ್ತನ ಕೆಲಸವಿತ್ತು. ಅದರಿಂದಲೇ ಜೀವನ ನಿರ್ವಹಣೆಯಾಗಬೇಕಿತ್ತು. ಬಾಲಕ ಮಲ್ಲಿಕಾರ್ಜುನನಿಗೆ ಶಾಲೆಯಲ್ಲಿ ಅಕ್ಷರ ಅಭ್ಯಾಸ ಮಾಡುವಲ್ಲಿ ಆಸಕ್ತಿ ಇಲ್ಲದ್ದಕ್ಕಾಗಿ ಈತನನ್ನು ಅಜ್ಜಿಯ ಊರಿಗೆ ದನಕಾಯಲು ತಂದೆ ಕಳಿಸಿದರು. ಆದರೆ ಕಲೆಯ ಬಗ್ಗೆ ಆಸಕ್ತಿ ಇದ್ದ ಮಲ್ಲಿಕಾರ್ಜುನನು ಕಾಡಿನಲ್ಲಿ ಮಣ್ಣು, ಸಗಣಿಯಿಂದ ಗೊಂಬೆ ಮಾಡುವುದು, ಕಟ್ಟಿಗೆಯ ಮೂರ್ತಿ ಕೆತ್ತುವುದು, ಚಿತ್ರ ಬರೆಯುವುದು ಮಾಡುತ್ತಿದ್ದನು. ಇದನ್ನು ಗಮನಿಸಿದ ಹಳ್ಳಿಯ ಹಿರಿಯರು ಕಲಾವಿದ್ಯಾಭ್ಯಾಸಕೊಡಿಸಲು ಮಲ್ಲಿಕಾರ್ಜುನನ ತಂದೆಗೆ ಸಲಹೆ ಮಾಡಿದರು. ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ ಮುಗಿಸಿದ ಎಂ.ಬಿ.ಪಾಟೀಲರು ಕಲಾ ಶಿಕ್ಷಣಕ್ಕಾಗಿ ಮುಂಬೈಗೆ ಹೊರಟು ನಿಂತರು. ಈ ಸಂದರ್ಭದಲ್ಲಿ ನಡೆದ ಹಲವಾರು ಕುತೂಹಲಕರವಾದ ಹಾಗೂ ಕರುಣಾಜನಕವಾದ ಘಟನಾವಳಿಗಳನ್ನು ಇಲ್ಲಿ ವಿವರಿಸಲಾಗಿದೆ. ಈ ಅಧ್ಯಾಯದಲ್ಲಿ ಎಂ. ಬಿ. ಪಾಟೀಲರ ಕಲಾಶಿಕ್ಷಣ, ವೃತ್ತಿಬದುಕು ಹಾಗೂ ಕಲಾಚಟುವಟಿಕೆಗಳ ಬಗ್ಗೆಯೂ ವಿವೇಚಿಸಲಾಗಿದೆ.

ಎಂ. ಬಿ. ಪಾಟೀಲರಿಗೆ ಅವರ ತಂದೆ ಪ್ರೋತ್ಸಾಹಿಸದೇ ಇದ್ದಾಗ ಅವರ ಹಿರಿಯಣ್ಣ ಬೆನ್ನೆಲುಬಾಗಿ ನಿಂತು ಇವರ ಕಲಾಶಿಕ್ಷಣ ಪೂರೈಸಲು ನೆರವಾಗಿದ್ದಾರೆ. ಮುಂಬೈವರೆಗೆ ಕಳಿಸಲು ಬಂದುದು ಮಾತ್ರವಲ್ಲದೆ ಜೆ. ಜೆ. ಕಲಾಶಾಲೆಯಲ್ಲಿ ಪ್ರವೇಶ ಸಿಗದಿದ್ದಾಗ ದಂಡಾವತಿಮಠರವರು ಮುಖ್ಯಸ್ಥರಾಗಿದ್ದ ನೂತನ ಕಲಾಶಾಲೆ ಮುಂಬೈನಲ್ಲಿ ಇವರಿಗೆ ಪ್ರವೇಶ ದೊರಕಿಸಿ ಕೊಟ್ಟು ಬಂದಿದ್ದರು. ಅಲ್ಲದೆ ತಮಗೆ ಹಣಕಾಸಿನ ಕೊರತೆ ಉಂಟಾದಾಗ ತಮ್ಮ ಪ್ರೀತಿಯ ಅಣ್ಣನನ್ನೇ ಇವರು ಕೇಳುವುದು ಮತ್ತು ಪತ್ರ ಬರೆಯವುದು ಮಾಡುತ್ತಿದ್ದರು. ಇಂತಹ ಹತ್ತು ಹಲವು ಸಂಗತಿಗಳನ್ನು ಸಹಿತ ಇಲ್ಲಿ ಹೇಳಲಾಗಿದೆ.

ಮುಂಬೈನಲ್ಲಿ ಚಿತ್ರಕಲಾ ಶಿಕ್ಷಣವನ್ನು ಪಡೆದ ಇವರ ಕಾಲಾವಧಿಯು ಒಂದು ರೀತಿಯ ಅಗ್ನಿಪರೀಕ್ಷೆ ಎಂದೇ ಹೇಳಬಹುದು. ಊಟ ತಿಂಡಿಗೆ ನಿರಂತರವಾಗಿ ಕೊರತೆ ಇರುತ್ತಿತ್ತಲ್ಲದೆ ಕಾಗದ, ಪೆನ್ಸಿಲ್ ಬಣ್ಣಗಳಂತಹ ಕಲಾ ಪರಿಕರಗಳನ್ನು ಕೊಳ್ಳಲೂ ಇವರಲ್ಲಿ ಹಣವಿರುತ್ತಿರಲಿಲ್ಲ ಪರೀಕ್ಷಾ ಕೊಠಡಿಗೆ ಟ್ಯಾಕ್ಸಿಯಲ್ಲಿ ಹೋಗ ಬೇಕಾದಾಗ ಅಳುತ್ತಾನಿಂತ ಇವರನ್ನು ಸಹಪಾಠಿ ಸ್ನೇಹಿತೆ ಕಾರಿನಲ್ಲಿ ಕರೆದುಕೊಂಡು ಹೋಗಿದ್ದನ್ನು ಇಂದಿಗೂ ನೆನಪಿಸಿಕೊಳ್ಳುತ್ತಾರೆ. ಇಂತಹ ಎಲ್ಲ ತೊಂದರೆಗಳ ಮಧ್ಯದಲ್ಲಿ ಸಹಿತ ಅವರು ಏಕಾಗ್ರಚಿತ್ತದಿಂದ ಅಧ್ಯಯನದಲ್ಲಿ ತೊಡಗುತ್ತಿದ್ದರು. ಈ ಬಗೆಯ ಸಂಗತಿಗಳ ಬಗ್ಗೆ ಪ್ರಸ್ತುತ ಅಧ್ಯಾಯದಲ್ಲಿ ಹೇಳಲಾಗಿದೆ.

ಮುಂಬೈನ ಕಲಾಶಾಲೆಯಲ್ಲಿ ಎಂ. ಬಿ. ಪಾಟೀಲರ ಬಗ್ಗೆ ಕಲಾಗುರು ದಂಡಾವತಿಮಠ ಅವರು ಹೊಂದಿದ ಶಿಷ್ಯವಾತ್ಸಲ್ಯ, ಅವರು ಹಾಗೂ ಇತರ ಕಲಾಶಿಕ್ಷಕರು ಪಾಟೀಲರ ಮೇಲೆ ಬೀರಿದ ಪ್ರಭಾವ, ಅಕಾಡಮಿಕ್ ಶೈಲಿಯ ಅನುಕರಣೆ, ವ್ಯಕ್ತಿಚಿತ್ರ ರಚನೆಯಲ್ಲಿ ಪಡೆದುಕೊಂಡ ಪ್ರಬುದ್ಧತೆ, ಕಲಾಕೃತಿ ರಚನಾ ವಿಧಾನಗಳಲ್ಲಿ ಕಂಡುಕೊಂಡ ಬದಲಾವಣೆಗಳು, ಬೇರೆ ಬೇರೆ ಮಾಧ್ಯಮಗಳು, ಮುಂತಾದ ಸಂಗತಿಗಳನ್ನು ಹೇಳಲಾಗಿದೆ. ಜೊತೆಗೆ ಮುಂಬೈನಲ್ಲಿ ಜೆ. ಜೆ. ಕಲಾಶಾಲೆಗೆ ಇವರು ನಿಯಮಿತವಾಗಿ ನೀಡುತ್ತಿದ್ದ ಭೇಟಿ, ಅಲ್ಲಿನ ಹಾಗೂ ಇತರ ಪ್ರದೇಶಗಳಲ್ಲಿ ನಡೆಯುತ್ತಿದ್ದ ಕಲಾಪ್ರದರ್ಶನ, ಕಲಾಶಿಬಿರ ಹಾಗೂ ಸಾಂಸ್ಕೃತಿಕ ಕಾರ್ಯಕ್ರಮಗಳನ್ನು ವೀಕ್ಷಿಸುತ್ತಿದ್ದ ರೀತಿ, ಮಿತ್ರರೊಂದಿಗೆ ಹಾಗೂ ಇತರ ವಿದ್ವಾಂಸರೊಂದಿಗೆ ಇವರು ಕಲೆಯ ಕುರಿತಾಗಿ ಚರ್ಚಿಸುತ್ತಿದ್ದ ಸಂಗತಿಗಳನ್ನು ಸಹಿತ ಈ ಅಧ್ಯಾಯದಲ್ಲಿ ವಿಶ್ಲೇಷಣೆಗೆ ಒಳಪಡಿಸಿರುವುದು ಗಮನಾರ್ಹವಾಗಿದೆ. ಎಂ. ಬಿ. ಪಾಟೀಲರು ಮುಂಬೈನಿಂದ ಕಲಾಶಿಕ್ಷಣ ಪಡೆದುಕೊಂಡು ಬಂದು ಹಳ್ಳಿಯಲ್ಲಿ ಕೆಲದಿನಗಳನ್ನು ಕಳೆದರು. ಅಷ್ಟರಲ್ಲಿಯೇ ಇವರ ತಂದೆ

ಕೆಲಸಕ್ಕೆ ಬಾರದ ಶಿಕ್ಷಣವನ್ನು ಪಡೆದುಕೊಂಡು ಹೀಗೆ ಸುಮ್ಮನೆ ತಿರುಗುತ್ತಿರುವೆಯಲ್ಲ ಎಂಬ ತೆಗಳಿಕೆಯ ಮಾತುಗಳನ್ನು ಪದೆ ಪದೆ ಆಡತೊಡಗಿದರು. ಸಾಹಿತ್ಯ, ಸಂಗೀತ, ಚಿತ್ರಕಲೆಗಳಂತಹ ವಿಷಯಗಳ ಬಗ್ಗೆ ತುಂಬಾ ಅಸಮಾಧಾನವಿದ್ದ ಇವರ ತಂದೆಯವರು ಊಟಕ್ಕೆ ಕುಳಿತಾಗಲೂ ನಿಂದಿಸುತ್ತಿದ್ದರು. ಇಂತಹ ಸಮಯದಲ್ಲಿ ಧಾರವಾಡದ ಶಾಲೆಯಲ್ಲಿ ಉದ್ಯೋಗಕ್ಕಾಗಿ ಇವರಿಗೆ ಕರೆಬಂದಿತು. ಆದರೆ ಅನಿವಾರ್ಯ ಕಾರಣಗಳಿಂದ ಇವರಿಗೆ ಆ ಕೆಲಸ ದೊರಕದೇ ಹೋದರೂ ತಿರುಗಿ ತಮ್ಮ ಹಳ್ಳಿಗೆ ಇವರು ಬರಲಿಲ್ಲ. ಹುಬ್ಬಳ್ಳಿಯಲ್ಲಿದ್ದುಕೊಂಡು ಕೆಲಸಕ್ಕೆ ಪ್ರಯತ್ನಿಸತೊಡಗಿದರು. ಕೇಲವೇ ದಿನಗಳಲ್ಲಿ ಹುಬ್ಬಳ್ಳಿಯಲ್ಲಿಯೇ ವಾರ್ತಾ ಮತ್ತು ಪ್ರಚಾರ ಇಲಾಖೆಯಲ್ಲಿ ಇವರಿಗೆ ಕೆಲಸ ದೊರಕಿತು. ಕೆಲಸ ದೊರಕುವುದಕ್ಕಿಂತ ಮೊದಲಿನ ದಿನಗಳಲ್ಲಿ ಇವರು ಅನುಭವಿಸಿದ ನೋವು, ಸಂಕಟ, ಅವಮಾನಗಳಂತಹ ಸಂಗತಿಗಳನ್ನು ಇಲ್ಲಿ ತಿಳಿಸಲಾಗಿದೆ.

ಇಂತಹ ಸಂಗತಿಗಳನ್ನು ವಿವರಿಸುವ ಮೂಲಕ ಯುವ ಪೀಳಿಗೆಯ ಕಲಾವಿದರ ಬದುಕಿನಲ್ಲಿ ನೈತಿಕ ಸ್ಥೈರ್ಯವನ್ನು ತುಂಬುವ ಪ್ರಯತ್ನ ಮಾಡಲಾಗಿದೆ. ಹುಬ್ಬಳ್ಳಿಯ ವಾರ್ತಾ ಮತ್ತು ಪ್ರಚಾರ ಇಲಾಖೆಯಲ್ಲಿನ ಇವರ ಕೆಲಸವು ಕಲಾ ಹಿನ್ನೆಲೆಯಿಂದ ಕೂಡಿದ್ದರೂ ಅಲ್ಲಿ ಕಲಾವಿದನ ಅಭಿವ್ಯಕ್ತಿ ಸ್ವಾತಂತ್ರ್ಯಕ್ಕೆ ಮಹತ್ವ ಇರಲಿಲ್ಲ. ಅಲ್ಲದೆ ಆನಂದಾನುಭೂತಿ ಉಂಟು ಮಾಡುವ ಶುದ್ಧಕಲೆಯ ಅಂಶಗಳನ್ನೊಳಗೊಂಡ ಕಲಾಕೃತಿಗಳನ್ನು ರಚಿಸುವ ಉದ್ಯೋಗ ಇವರದಾಗಿರಲಿಲ್ಲ. ಅದಕ್ಕೆ ಬದಲಾಗಿ ಸರಕಾರದ ಸುದ್ದಿ ಮೂಲಗಳು, ಬೇರೆ ಬೇರೆ ಸಂದೇಶಗಳು, ಸರಕಾರದ ಸಾಧನೆಗಳು, ಜನಜಾಗೃತಿ ಉಂಟು ಮಾಡುವ ಸಂಗತಿಗಳನ್ನು ಚಿತ್ರಗಳ ಮೂಲಕ ಜನರಿಗೆ ತಿಳಿಸುವ ಕೆಲಸ ಇವರದಾಗಿತ್ತು. ಇದಕ್ಕಾಗಿ ವ್ಯಂಗ್ಯ ಚಿತ್ರ ರಚನೆಯ ಪರಿಣಾಮಕಾರಿ ವಿಧಾನವನ್ನು ಇವರು ಅನುಸರಿಸತೊಡಗಿದರು.

ಇಲಾಖೆಯು ಹೇಳಿದ ವಿಷಯ ಮತ್ತು ಮಾಧ್ಯಮದ ಮೇಲೆ ಇವರು ಚಿತ್ರ ರಚಿಸಬೇಕಿತ್ತು. ಆದರೆ ಇದರಿಂದ ಅವರೊಳಗಿನ ಕಲಾಮನಸ್ಸು ತೃಪ್ತಿಹೊಂದುತ್ತಿರಲಿಲ್ಲ. ತಮ್ಮೊಳಗೆ ತುಡಿಯುತ್ತಿದ್ದ ಚಿಂತನೆಗಳು, ಭಾವನಾತ್ಮಕ ಅಭಿವ್ಯಕ್ತಿಗಳನ್ನು ಹೊರಹಾಕಲು ಹಾತೊರೆಯುತ್ತಿದ್ದರು. ಹಾಗಾಗಿ ಇವರು ವೃತ್ತಿಯಲ್ಲಿ ವ್ಯಂಗ್ಯ ಚಿತ್ರ ಮತ್ತು ಸಾಂಕೇತಿಕ ಚಿತ್ರಗಳನ್ನು ರಚಿಸಿದರೆ, ಪ್ರವೃತ್ತಿಯಲ್ಲಿ ಶುದ್ಧಕಲೆಯ ಅಂಶಗಳನ್ನೊಳಗೊಂಡ ಆನಂದಾನುಭೂತಿ ಉಂಟುಮಾಡುವ ಕಲಾಕೃತಿಗಳನ್ನು ರಚಿಸತೊಡಗಿದರು. ಇಂತಹ ಕುತೂಹಲಕರ ಸಂಗತಿಗಳ ಬಗ್ಗೆ ಈ ಅಧ್ಯಾಯದಲ್ಲಿ ವಿಶ್ಲೇಷಿಸಲಾಗಿದೆ. ತಮ್ಮ ಕಲಾ ಪ್ರವೃತ್ತಿಯನ್ನು ಹುಬ್ಬಳ್ಳಿಯಲ್ಲಿದ್ದುಕೊಂಡೆ ರೂಪಿಸಿಕೊಳ್ಳ ತೊಡಗಿದರು. ಎಂ. ಬಿ. ಪಾಟೀಲರು ಸುಭಾಷ ಕ್ಷತ್ರಿ, ಕೆ.ಆರ್.ಸುಬ್ಬಣ್ಣ ಇವರ ಜೊತೆಗೂಡಿ "ತ್ರಿವಳಿ" ಎಂಬ ಕಲಾಗುಂಪನ್ನು ಸ್ಥಾಪಿಸಿಕೊಂಡರು. ಈ ಮೂವರು ಸ್ಥಳೀಯವಾಗಿ ಮಾತ್ರವಲ್ಲದೆ

ರಾಜ್ಯದ ಬೇರೆ ಬೇರೆ ಭಾಗಗಳಲ್ಲಿ ಕಲಾಪ್ರದರ್ಶನಗಳನ್ನು ಹಮ್ಮಿಕೊಳ್ಳತೊಡಗಿದರು. ಕಲಾಕೃತಿ ಮಾರಾಟಕ್ಕಿಂತ ಕಲೆಯನ್ನು ಜನರಿಗೆ ಪರಿಚಯಿಸಬೇಕೆಂಬುದೇ ಇವರ ಮುಖ್ಯ ಆಶಯವಾಗಿತ್ತು. ಇಂತಹ ಹತ್ತು ಹಲವು ಮಹತ್ವದ ಸಂಗತಿಗಳನ್ನು ಈ ಅಧ್ಯಾಯದಲ್ಲಿ ವಿಶ್ಲೇಷಣೆ ಮಾಡಲಾಗಿದೆ. ಎಂ. ಬಿ. ಪಾಟೀಲರು ತಮ್ಮ ವೃತ್ತಿ ಬದುಕಿನಲ್ಲಿ ವಿವಿಧ ಬಗೆಯ ಕಲೆ ಹಾಗೂ ಸಾಂಸ್ಕೃತಿಕ ಚಟುವಟಿಕೆಗಳನ್ನು ಹಮ್ಮಿಕೊಳ್ಳುವುದು, ಮತ್ತು ಅಂತಹ ಕಾರ್ಯಕ್ರಮಗಳಲ್ಲಿ ಭಾಗವಹಿಸುವ ಮೂಲಕ ತಮ್ಮ ಜ್ಞಾನದಿಗಂತವನ್ನು ಹೆಚ್ಚಿಸಿಕೊಳ್ಳುತ್ತ ಬಂದಿದ್ದಾರೆ. ಸಾಹಿತ್ಯ, ಸಂಗೀತದಲ್ಲಿ ಆಸಕ್ತಿ ಇರುವಂತೆ ನಾಟಕದ ಬಗ್ಗೆ ತುಂಬಾ ಒಲವು ಹೊಂದಿದ ಪಾಟೀಲರು ಅನೇಕ ನಾಟಕಗಳಲ್ಲಿ ಪಾತ್ರಮಾಡಿದ್ದಾರೆ. ಕಂದಗಲ್ ಹನುಮಂತರಾಯರ ನಾಟಕಗಳ ಉದ್ದುದ್ದವಾದ ಕಠಿಣ ಸಭಾಷಣೆಗಳನ್ನು ಇವರು ಸುಲಲಿತವಾಗಿ ನುಡಿಸುತ್ತಿದ್ದರು. ಇಂತಹ ಪೂರಕ ಚಟುವಟಿಕೆಗಳ ಬಗ್ಗೆಯೂ ಈ ಅಧ್ಯಾಯದಲ್ಲಿ ವಿಶ್ಲೇಷಣೆ ಮಾಡಲಾಗಿದೆ.

ಪಾಟೀಲರು ತಮ್ಮ ವೃತ್ತಿ ಬದುಕಿನ ಪ್ರಾರಂಭಿಕ ದಿನಗಳಲ್ಲಿ ಮೂರುಜನ ಕಲಾವಿದರ ಗುಂಪನ್ನು ರಚಿಸಿಕೊಂಡು ಕಲಾ ಚಟುವಟಿಕೆಗಳನ್ನು ನಡೆಸುತ್ತಿದ್ದರೆ, ಆ ಮೇಲಿನ ದಿನಗಳಲ್ಲಿ ಏಳುಜನ ಕೂಡಿಕೊಂಡು ಸಪ್ತರಂಗ ಎಂಬ ಕಲಾಗುಂಪಿನ ಅಡಿಯಲ್ಲಿ ಕಲಾ ಚಟುವಟಿಕೆಗಳನ್ನು ನಡೆಸಿದ್ದಾರೆ. ಇದಲ್ಲದೆ ತಮ್ಮ ವೃತ್ತಿ ಬದುಕಿನಲ್ಲಿ ಅನೇಕ ರೀತಿಯ ಪ್ರಚಾರಕ್ಕಾಗಿ ಟ್ಯಾಬ್ಲೋ ವಿನ್ಯಾಸಗಳನ್ನು, ಭಿತ್ತಿ ಶಿಲ್ಪಗಳನ್ನು ರಚಿಸಿರುವುದು ಇವರ ಕಲಾಚಟುವಟಿಕೆಗಳ ಪ್ರಮುಖ ಸಂಗತಿ ಎನ್ನಬಹುದು. ಹೀಗೆ ಅವರ ಕಲಾ ಬದುಕಿನಲ್ಲಿ ಕಂಡು ಬರುವ ಪ್ರಮುಖ ಚಟುವಟಿಕೆಗಳ ಬಗ್ಗೆ ಎರಡನೆಯ ಅಧ್ಯಾಯದಲ್ಲಿ ಚರ್ಚಿಸಲಾಗಿದೆ.

ಮೂರನೆಯ ಅಧ್ಯಾಯದಲ್ಲಿ ಎಂ. ಬಿ. ಪಾಟೀಲರ ಕಲಾಕೃತಿಗಳ ವಸ್ತುವಿಷಯಗಳ ಬಗ್ಗೆ ವಿಶ್ಲೇಷಣೆ ಮಾಡಲಾಗಿದೆ. ಪಾಟೀಲರು ರಚಿಸಿದ ಒಟ್ಟು ಕಲಾಕೃತಿಗಳನ್ನು ಕಾಲಘಟ್ಟಕ್ಕೆ ಅನುಸಾರವಾಗಿ ಪ್ರತ್ಯೇಕ ದಶಕಗಳಲ್ಲಿ ವಿಂಗಡಿಸಿಕೊಂಡು ವಿಶ್ಲೇಷಣೆ ಮಾಡಿರುವುದು ಮಹತ್ವದ್ದಾಗಿದೆ. ವ್ಯಕ್ತಿ ಬೆಳವಣಿಗೆ ಹೊಂದಿದಂತೆ ಆತನ ದೈಹಿಕ ಮತ್ತು ಬೌದ್ಧಿಕ ಸಾಮರ್ಥ್ಯಗಳು ಬೆಳೆಯುತ್ತ ಹೋಗುತ್ತವೆ. ಬಾಲ್ಯ, ಪ್ರೌಢ, ಮುಪ್ಪಿನಾವಸ್ಥೆಗಳಲ್ಲಿ ದೈಹಿಕ ಹಾಗೂ ಬೌದ್ಧಿಕ ಸಾಮರ್ಥ್ಯಗಳಿಗೆ ಅನುಸಾರವಾಗಿಯೇ ಮಾನವನ ಕ್ರಿಯಾ ಚಟುವಟಿಕೆಗಳು, ಮಾನಸಿಕ ಚಿಂತನೆಗಳು ರೂಪುಗೊಳ್ಳುತ್ತವೆ. ಹಾಗಾಗಿ ಕಲಾವಿದನೊಬ್ಬನ ಕಲಾಕೃತಿಗಳನ್ನು ಅಧ್ಯಯನ ಮಾಡುವಾಗ ಕಾಲಘಟ್ಟಗಳಲ್ಲಿ ವಿಂಗಡಿಸಿಕೊಂಡು ಅಧ್ಯಯನ ಮಾಡುವುದು ಹೆಚ್ಚು ಸೂಕ್ತವಾಗುತ್ತದೆ. ಇದರಿಂದ ಕಲಾಕೃತಿಯ ಮೂಲಕ ಕಲಾವಿದನ ಮಾನಸಿಕ ಮತ್ತು ಬೌದ್ಧಿಕ ಸ್ಥಿತಿಗತಿಗಳನ್ನು ವಿಶ್ಲೇಷಿಸಬಹುದಾಗಿದೆ. ಕಲಾಕೃತಿಯ ರಚನೆಯ ಸಂದರ್ಭದಲ್ಲಿ ರಚನಾಕಾರನ

ಮನೋಭೂಮಿಕೆಗಳಲ್ಲದೆ ಆ ಕಾಲದ ಸಂಸ್ಕೃತಿ, ಪರಿಸರ, ನಂಬಿಕೆ, ಆಚರಣೆಗಳು, ಪ್ರಭಾವ ಪ್ರೇರಣೆಗಳಂತಹ ಸಂಗತಿಗಳು ಹೇಗಿದ್ದವು ಎಂಬುದನ್ನು ತಿಳಿದುಕೊಳ್ಳಬಹುದಾಗಿದೆ. ಇಂತಹ ಪ್ರಮುಖ ಕಾರಣಗಳಿಂದಾಗಿಯೆ ಇಲ್ಲಿ ಪಾಟೀಲರ ಕಲಾಕೃತಿಗಳನ್ನು ಕಾಲಘಟ್ಟಗಳಲ್ಲಿ ವಿಂಗಡಿಸಿ ಅಧ್ಯಯನಕ್ಕೊಳ ಪಡಿಸಲಾಗಿದೆ. ಕರ್ನಾಟಕದಲ್ಲಿ ಇದುವರೆಗೆ ನಡೆದ ಕಲಾವಿದರ ಕುರಿತಾಗಿರುವ ಅಧ್ಯಯನಗಳಲ್ಲಿ ಕಲಾಕೃತಿಗಳನ್ನು ಮಾಧ್ಯಮ ಇಲ್ಲವೆ ವಿಷಯಕ್ಕನುಸಾರವಾಗಿ ವಿಂಗಡಿಸಿದ್ದರೆ, ಇಲ್ಲಿ ಹೊಸ ಪ್ರಯತ್ನವನ್ನು ಕೈಗೊಳ್ಳಲಾಗಿದೆ.

ಒಟ್ಟು ಅಧ್ಯಯನದ ಪ್ರಮುಖ ಭಾಗವಾಗಿರುವ ಈ ಅಧ್ಯಾಯದಲ್ಲಿ ಎಂ. ಬಿ. ಪಾಟೀಲರು ಕಲಾಶಿಕ್ಷಣ ಪಡೆದುಕೊಳ್ಳುವ ಹಂತದಿಂದ ಆರಂಭಿಸಿ ಅಂದರೆ ಕ್ರಿ.ಶ. ೧೯೬೦ ರಿಂದ ಕ್ರಿ.ಶ ೨೦೦೮ ಇಸ್ವಿವರೆಗೆ ರಚಿಸಿದ ಪ್ರಮುಖ ಕಲಾಕೃತಿಗಳನ್ನು ಅಧ್ಯಯನಕ್ಕೊಳಪಡಿಸಲಾಗಿದೆ. ಕ್ರಿ.ಶ. ೧೯೬೦ ರಿಂದ ೧೯೭೦ ರ ದಶಕ, ೧೯೭೦ ರಿಂದ ೧೯೮೦ ರ ದಶಕ, ೧೯೮೦ ರಿಂದ ೧೯೯೦ ರ ದಶಕ, ೧೯೯೦ ರಿಂದ ೨೦೦೦ ವರೆಗಿನ ದಶಕ, ಹಾಗೂ ೨೦೦೦ ರಿಂದ ೨೦೦೮ ರ ವರೆಗಿನ ಘಟ್ಟ ಎಂಬುದಾಗಿ ವಿಂಗಡಿಸಿಕೊಂಡು ಕಲಾಕೃತಿಗಳನ್ನು ವಿಶ್ಲೇಷಣೆಗೊಳಪಡಿಸಲಾಗಿದೆ.

ಇಲ್ಲಿ ವಿಂಗಡಿಸಿಕೊಂಡಿರುವ ಮೊದಲನೆಯ ದಶಕದಲ್ಲಿ ಅಂದರೆ ೧೯೬೦ ರಿಂದ ೧೯೭೦ ರ ವರೆಗಿನ ಕಾಲಘಟ್ಟದಲ್ಲಿ ಪ್ರಮುಖವಾಗಿ ಎರಡು ರೀತಿಯ ಕಲಾಕೃತಿಗಳು ಕಂಡು ಬರುತ್ತವೆ. ಮೊದಲ ಹಂತದ ಕಲಾಕೃತಿಗಳಲ್ಲಿ ಶಾಲಾ ಶಿಕ್ಷಣದ ಕಲಿಕೆಯ ವಿಧಾನ, ಶಿಕ್ಷಕರಿಂದ ಪ್ರಭಾವಿತ ಗೊಂಡಂತಹ ಅಂಶಗಳ ಕಂಡು ಬರುತ್ತವೆ. ಆ ಮೇಲೆ ೧೯೬೫ ರ ನಂತರದಲ್ಲಿ ಕಲಿಕಾ ಹಂತ ಮುಗಿದ ಮೇಲೆ ಅಂದಿನ ದಿನಗಳಲ್ಲಿ ಮುಂಬೈನಲ್ಲಿ ಪ್ರಚಲಿತದಲ್ಲಿದ್ದ ಅಕಾಡಮಿಕ್ ಶೈಲಿಯ ಪ್ರಭಾವದಿಂದ ಕೂಡಿದ ಕೃತಿಗಳು ಇವರಿಂದ ರಚನೆಯಾಗಿದ್ದನ್ನು ಗಮನಿಸಬಹುದು.

ಇಲ್ಲಿ ವಿಂಗಡಿಸಿಕೊಂಡಿರುವ ಎರಡನೆಯ ದಶಕದ ಕಲಾಕೃತಿಗಳನ್ನು ಗಮನಿಸಿದಾಗ ಈ ದಶಕದ ಆರಂಭದಿಂದಲೆ ಇವರು ಹೊಸತನಕ್ಕಾಗಿ ಮಿಡಿಯುತ್ತಿರುವುದು ಕಂಡು ಬರುತ್ತದೆ. ೧೯೭೦ ರ ಸುಮಾರಿಗೆ ಇವರು ತಮ್ಮ ಹಿಂದಿನ ಅಕಾಡಮಿಕ್ ಕಲಾಶೈಲಿಯನ್ನು ಬಿಟ್ಟು ಗ್ರಾಮೀಣ ಸಂಸ್ಕೃತಿ ಜನಜೀವನ, ಅಲ್ಲಿನ ಜನಪದ ಚಿತ್ರಕಲೆಗಳ ಕಡೆಗೆ ಆಸಕ್ತರಾಗಿರುವುದು ಗೋಚರಿಸುತ್ತದೆ. ಸಾಂಪ್ರದಾಯಿಕ ವೇಷಭೂಷಣಗಳಿಂದ ಅಲಂಕೃತಗೊಂಡ ಹಳ್ಳಿಯ ಸ್ತ್ರೀ ಪುರುಷರು, ಕೆಲಸ ಕಾರ್ಯಗಳಲ್ಲಿ ತೊಡಗಿರುವ ಜನರು, ಚಿತ್ರ ರಚನೆಯಲ್ಲಿ ರೂಢಿಸಿಕೊಂಡ

ಸರಳೀಕರಣಗಳು ಈ ಮಾತಿಗೆ ಪುಷ್ಠಿಯನ್ನೊದಗಿಸುತ್ತವೆ. ಆದರೆ ಕುತೂಹಲದ ಸಂಗತಿ ಎಂದರೆ ದಶಕದ ಆರಂಭದಿಂದ ಸುಮಾರು ನಾಲ್ಕು ವರ್ಷಗಳ ನಂತರ ಪಾಟೀಲರು ಪಾಶ್ಚಾತ್ಯ ನವ್ಯಕಲಾಶೈಲಿಗಳ ಪ್ರಭಾವಕ್ಕೆ ಒಳಗಾದಂತೆ ಕಂಡು ಬರುತ್ತದೆ. ಆ ಹೊತ್ತಿಗಾಗಲೇ ಭಾರತದ ಅನೇಕ ಭಾಗಗಳಲ್ಲಿ ಬೇರೆ ಬೇರೆ ಕಲಾಗುಂಪುಗಳು ಪಾಶ್ಚಾತ್ಯ ನವ್ಯ ಕಲಾ ಶೈಲಿಗಳ ಪ್ರಭಾವಕ್ಕೆ ಒಳಗಾಗಿ ತಮ್ಮತನವನ್ನು ಗುರುಸಿಸಿಕೊಳ್ಳಲು ಪ್ರಯತ್ನಿಸುತ್ತಿದ್ದವು.

ಅಂತಹ ಕಲಾಗುಂಪುಗಳಲ್ಲಿ ಮುಂಬೈನ ಪ್ರೊಗ್ರೆಸಿವ್ ಆರ್ಟ ಗ್ರೂಫ್ ದೆಹಲಿಯ ಶಿಲ್ಪಚಕ್ರ, ಮದ್ರಾಸಿನ ಚೋಳಮಂಡಲ ಪ್ರಮುಖವಾಗಿದ್ದವು. ಇವುಗಳಲ್ಲಿ ಮುಂಬೈನ ಪ್ರೊಗ್ರೇಸಿವ್ ಆರ್ಟ ಗ್ರೂಫ್ ಅತ್ಯಂತ ಪ್ರಭಾವಶಾಲಿಯಾಗಿ ಪಾಶ್ಚಾತ್ಯ ನವ್ಯಕಲಾ ಶೈಲಿಯನ್ನು ಭಾರತದಲ್ಲಿ ಪ್ರಸಾರ ಮಾಡತೊಡಗಿತು. ಎಂ. ಬಿ. ಪಾಟೀಲರು ಮುಂಬೈನಲ್ಲಿಯೇ ಕಲಾ ಶಿಕ್ಷಣವನ್ನು ಪಡದುಕೊಂಡವರಾಗಿದ್ದರಿಂದ ಸಹಜವಾಗಿಯೇ ಇಲ್ಲಿನ ಪ್ರೋಗ್ರೆಸಿವ್ ಆರ್ಟ ಗುಂಪಿನ ನವ್ಯ ಪ್ರಭಾವಕ್ಕೆ ಒಳಗಾಗಿರುವುದು ಕಂಡು ಬರುತ್ತದೆ. ಇಂತಹ ಪ್ರಮುಖ ಸಂಗತಿಗಳನ್ನು ಸಹಿತ ಇಲ್ಲಿ ಚರ್ಚಿಸಲಾಗಿದೆ.

ಪಾಟೀಲರು ಎಪ್ಪತ್ತರ ದಶಕದ ಪೂರ್ವಾರ್ಧದಲ್ಲಿ ಪ್ರಾಯಶಃ ಒಂದು ನಿರ್ಧಿಷ್ಟ ಕಲಾಶೈಲಿಯನ್ನು ರೂಢಿಸಿಕೊಳ್ಳಲು ಪ್ರಯತ್ನಿಸಿ ಅದರಲ್ಲಿ ಯಶಸ್ವಿಯಾಗಿರುವಂತೆ ತೋರುತ್ತದೆ. ಮುಂಬೈ ಪ್ರಾಂತದಲ್ಲಿ ಪ್ರಚಲಿತದ್ದಲ್ಲಿದ್ದ ಅಕಾಡಮಿಕ್ ಶೈಲಿ, ಗ್ರಾಮೀಣ ಜನಪದ ಶೈಲಿ, ಹಾಗು ಪಾಶ್ಚಾತ್ಯ ನವ್ಯಕಲಾ ಶೈಲಿಗಳ ಮಧ್ಯದಲ್ಲಿ ತಮ್ಮದೇ ವಿಶಿಷ್ಠ ಚಿತ್ರಶೈಲಿಯ ಹುಟುಕಾಟಕ್ಕಾಗಿ ಹಾತೊರೆದ ಇವರ ಪ್ರತಿಭಾಶಕ್ತಿ ಕೊನೆಗೆ ಈ ಮೂರು ಶೈಲಿಗಳ ಒಳ್ಳೆಯ ಅಂಶಗಳನ್ನು ಆಯ್ಕೆ ಮಾಡಿಕೊಂಡು ಒಂದು ಸಮ್ಮಿಶ್ರವಾದ ಚಿತ್ರಶೈಲಿಯನ್ನು ಅನಾವರಣಗೊಳಿಸಿತು.

ಎಪ್ಪತ್ತರ ದಶಕದ ಉತ್ತರಾರ್ಧದ ಆರಂಭದಿಂದಲೇ ಪಾಟೀಲರು ಚಿತ್ರ ರಚನೆಯಲ್ಲಿ ತಮ್ಮದೇ ವಿಶಿಷ್ಟ ಶೈಲಿಯನ್ನು ಕಂಡುಕೊಂಡು ಕಲಾಕೃತಿ ರಚಿಸತೊಡಗಿದರು. ಅವರ ಚಿತ್ರಶೈಲಿಯು ಆ ಕಾಲಮಾನದ ಕರ್ನಾಟಕದ ಚಿತ್ರಕಲಾವಿದರಲ್ಲಿಯೆ ವಿಶಿಷ್ಟವಾಗಿತ್ತಲ್ಲದೆ ಇತರೆಲ್ಲ ಕಲಾವಿದರಿಗಿಂತ ಭಿನ್ನವಾಗಿತ್ತು. ಅದು ಇಂದಿಗೂ ಮುಂದುವರೆದುಕೊಂಡು ಬರುತ್ತಲಿದೆ. ಅವರ ಪ್ರತ್ಯೇಕ ಚಿತ್ರಶೈಲಿಯು ಇಂದಿಗೂ ಪಾಟೀಲರ ವೈಯಕ್ತಿಕ ಕಲಾ ಶೈಲಿಯಾಗಿ ಗುರುತಿಸಲ್ಪಡುತ್ತಿದೆ.

ಪಾಟೀಲರು ಕಂಡುಕೊಂಡ ಪ್ರತ್ಯೇಕ ಕಲಾಶೈಲಿಯು ಬೇರೆ ಕಲಾಶೈಲಿಗಳ ಉತ್ತಮ ಅಂಶಗಳ ರಸಪಾಕದಿಂದ ಮೂಡಿಬಂದ ಸುಂದರ ಗಟ್ಟಿಯಾಗಿದೆ. ಇವರ ಕಲಾಶೈಲಿಯಲ್ಲಿ ಗ್ರಾಮೀಣ ಪರಂಪರೆ, ನಮ್ಮ ಸಂಸ್ಕೃತಿಯನ್ನು ಉಳಿಸಿಕೊಳ್ಳುವ ತಳಮಳ ಇರುವಂತೆಯೆ

ಆಧುನಿಕತೆಗೆ ಹಾತೊರೆಯುವ ಬಯಕೆಗಳಿವೆ. ಇವುಗಳ ಜೊತೆಗೆ ತನ್ನತನವನ್ನು ಕಟ್ಟಿಕೊಡಬೇಕೆಂಬ ತೀವ್ರ ತುಡಿತ ಮಿಡಿತಗಳು ಮೇಳೈಸಿವೆ. ಪಾಟೀಲರು ಯಾವುದೇ ಕಲಾಕೃತಿ ರಚಿಸಲಿ ಅದರಲ್ಲಿ ಈ ಬಗೆಯ ಅಂಶಗಳು ಒಳಗೊಂಡಿರುತ್ತವೆ. ಎಂಭತ್ತರ ದಶಕದ ಆರಂಭದಿಂದ ಪಾಟೀಲರ ಕಲಾ ಜೀವನದಲ್ಲಿ ಪ್ರಬುದ್ಧಕೃತಿಗಳು ಬರತೊಡಗಿದವು. ಸಂಯೋಜನಾಚಿತ್ರ, ನಿಸರ್ಗ ಚಿತ್ರ, ವ್ಯಕ್ತಿಚಿತ್ರ, ಭಾವಚಿತ್ರ, ಹೀಗೆ ಯಾವುದೇ ಕೃತಿ ರಚಿಸಿದರೂ ಅದರಲ್ಲಿ ಸ್ವಂತಿಕೆ, ಸೃಜನಶೀಲತೆಗಳು ಕಂಡು ಬರುತ್ತವೆ. ಹಳ್ಳಿಯ ಹೆಣ್ಣುಗಳ ಮುಗ್ಧಸೌಂರ್ಯದ ಬಗ್ಗೆ ಇವರ ಮನಸ್ಸು ನಿರಂತರವಾಗಿ ಮಿಡಿದಿದೆ. ಎಪ್ಪತ್ತರ ದಶಕದ ಉತ್ತರಾರ್ಧದಿಂದ ಆರಂಭಿಸಿದ ಈ ಸರಣಿ ಚಿತ್ರಗಳು ಇಂದಿನವರೆಗೂ ಮುಂದುವರೆದುಕೊಂಡು ಬಂದಿವೆ.

ಎಂಭತ್ತರ ದಶಕದ ಉತ್ತರಾರ್ಧದಲ್ಲಿ ಅಮೂರ್ತ ಚಿತ್ರಗಳ ಕಡೆಗೆ ಇವರ ಆಸಕ್ತಿ ಹೊರಳಿದೆ. ಈ ಸಂದರ್ಭದಲ್ಲಿ ಅಮೂರ್ತ ಆಕಾರಗಳನ್ನು ವಿವಿಧ ರೀತಿಯಲ್ಲಿ ಸೃಷ್ಟಿಸಿದ್ದಾರೆ. ರೇಖಾ ಪ್ರಧಾನ, ವರ್ಣ ಪ್ರಧಾನ ಹಾಗೂ ವಿನ್ಯಾಸ ಪ್ರಧಾನವಾದ ಅಮೂರ್ತ ಕಲಾಕೃತಿಗಳು ಇವರಿಂದ ರಚನೆಗೊಂಡಿವೆ. ಇಲ್ಲಿ ಪ್ರಖರ ವರ್ಣಗಳು ಪ್ರಧಾನವಾಗಿ ಬಳಸಲ್ಪಟ್ಟಿವೆ. ಕೆಲವು ಕೃತಿಗಳನ್ನು ಕೇವಲ ರೇಖೆಯಲ್ಲಿ ರಚಿಸಿದ್ದರೆ ಮತ್ತೆ ಕೆಲವು ಕೃತಿಗಳಲ್ಲಿ ರೇಖೆಯ ವಿನ್ಯಾಸಗಳಲ್ಲಿ ಬಣ್ಣ ತುಂಬಲಾಗಿದೆ. ಇನ್ನು ಹಲವು ಕೃತಿಗಳಲ್ಲಿ ಕೇವಲ ಬಣ್ಣಗಳ ಚೆಲ್ಲಾಟದಿಂದ ಸಹವಾಗಿ ಅಮೂರ್ತ ಆಕಾರಗಳನ್ನು ಸೃಷ್ಟಿಸಿದ್ದಾರೆ.

ಎಂ. ಬಿ. ಪಾಟೀಲರು ಎಂಭತ್ತರ ದಶಕದ ಕೊನೆಯ ಹೊತ್ತಿಗೆ ಮ್ಯೂರಲ್ ಕಲಾಕೃತಿಗಳನ್ನು ಹಾಗೂ ಪ್ರಚಾರ ಹಿನ್ನೆಲೆಯ ಟ್ಯಾಬ್ಲೊ ಕಲಾಕೃತಿಗಳನ್ನು ವಿಶಿಷ್ಟವಾಗಿ ರಚಿಸತೊಡಗಿರುವುದು ಕಂಡು ಬರುತ್ತದೆ. ಮ್ಯೂರಲ್ ಕಲಾಕೃತಿಗಳಲ್ಲಿ ಇವರು ಬೇರೆ ಬೇರೆ ಮಾಧ್ಯಮಗಳನ್ನು ಪರಿಣಾಮಕಾರಿಯಾಗಿ  ದುಡಿಸಿಕೊಂಡಿದ್ದಾರೆ. ವರ್ಣಗಳಲ್ಲಿ ಪ್ರಾಕೃತಿಕ ಹಾಗೂ ರಾಸಾಯನಿಕ ವರ್ಣಗಳನ್ನು ಬಳಸಿಕೊಂಡಿದಾರೆ. ಜೊತೆಗೆ ಕೆಲವು ಸಂದರ್ಭದಲ್ಲಿ ಸಿಮೆಂಟ, ಪ್ಲಾಸ್ಟರ್, ಲೋಹ, ಮರ, ಮೊಸಾಯಿಕ್ ಶಿಲೆ, ಗಾಜು, ಮುಂತಾದ ಮಿಶ್ರ ಮಾಧ್ಯಮಗಳನ್ನು ಬಳಸಿಕೊಂಡು ಮ್ಯೂರಲ್ ಕಲಾಕೃತಿಗಳನ್ನು ರಚಿಸಿದ್ದಾರೆ. ಪ್ರಾಚೀನ ವಿಧಾನದ ಮ್ಯೂರಲ್ ಚಿತ್ರಕಲೆಗಿಂತ ಈ ವಿಧಾನ ತುಂಬಾ ಭಿನ್ನವಾಗಿದೆ ಈ ಆಧುನಿಕ ಮ್ಯೂರಲ್‌ಗಳ ರಚನಾ ವಿಧಾನ, ಪರಿಕರಗಳ ಸಮರ್ಥ ಬಳಕೆ, ಉದ್ದೇಶಗಳು, ಸಂಯೋಜನಾ ರೀತಿ ಮುಂತಾದ ಅಂಶಗಳ ಜೊತೆಗೆ ಇವೆಲ್ಲವುಗಳ ಹಿನ್ನೆಲೆಯಲ್ಲಿ ಎಂ.ಬಿ.ಪಾಟೀಲರು ರಚಿಸಿದ ಮ್ಯೂರಲ್‌ಗಳ ಕುರಿತು ವಿಶ್ಲೇಷಿಸಲಾಗಿದೆ.

ಇದೇ ಅವಧಿಯಲ್ಲಿ ಪಾಟೀಲರು ಕೋಲಾಜ್ ತಂತ್ರ ವಿಧಾನದಿಂದ ಹಲವಾರು ಕಲಾಕೃತಿಗಳನ್ನು ರಚಿಸತೊಡಗಿರುವುದು ಗಮನಾರ್ಹವಾಗಿದೆ. ಈ ಕೋಲಾಜ್ ವಿಧಾನದಲ್ಲಿ ಬೇರೆ ಬೇರೆ ಪರಿಕರಗಳನ್ನು ಅಂಟಿಸುವ ಮೂಲಕ ಕಲಾಕೃತಿ ರಚಿಸಲಾಗುತ್ತದೆ. ಬಣ್ಣದ ಕಾಗದಗಳು, ಪತ್ರಿಕೆಗಳ ಪುಟಗಳು, ಅರಿವೆ ತುಂಡುಗಳು, ಲೋಹದ ಹಾಳೆ, ಪ್ಲಾಸ್ಟಿಕ್ ಹೀಗೆ ವೈವಿಧ್ಯ ವಸ್ತುಗಳನ್ನು ಇಲ್ಲಿ ಉದ್ದೇಶಕ್ಕೆ ಅನುಸಾರವಾಗಿ ಬಳಸಿಕೊಳ್ಳಲಾಗುತ್ತದೆ. ಇಲ್ಲಿ ಪಾಟೀಲರು ಇಂತಹ ವಿಧಾನದಲ್ಲಿ ರಚನೆ ಮಾಡಿದ ಕೋಲಾಜ್ ಕಲಾಕೃತಿಗಳನ್ನು ವಿಶ್ಲೇಷಣೆ ಮಾಡಲಾಗಿದೆ. ಎಂಭತ್ತರ ದಶಕದಿಂದ ಆರಂಭಗೊಂಡ ಕೋಲಾಜ್ ಕಲಾಕೃತಿಯ ರಚನೆಯನ್ನು ಇಂದಿಗೂ ಮುಂದುವರೆಸಿಕೊಂಡು ಬಂದಿರುವುದನ್ನು ಪರಿಗಣಿಸಲಾಗಿದೆ.

ಈ ಸಂದರ್ಭದಲ್ಲಿ ಅಂದರೆ ವಿಶೇಷವಾಗಿ ಎಂಭತ್ತರ ದಶಕದ ಉತ್ತರಾರ್ಧದಲ್ಲಿ ಪಾಟೀಲರು ಹೆಚ್ಚಿನ ಪ್ರಮಾಣದ ಪ್ರಚಾರ ಚಿತ್ರ, ಭಿತ್ತಿಚಿತ್ರ ಹಾಗೂ ಟ್ಯಾಬ್ಲೋ ಕಲಾಕೃತಿಗಳನ್ನು ರಚಿಸಿದ್ದಾರೆ. ಪ್ರಚಾರ ಚಿತ್ರಗಳು ಹೆಚ್ಚಾಗಿ ವ್ಯಂಗ್ಯ ಚಿತ್ರ ಮಾದರಿಯಲ್ಲಿದ್ದರೂ ಭಾವನಾತ್ಮಕ ನಿಲುವುಗಳಿಗೆ ಅಲ್ಲಿ ಕೊರತೆ ಇಲ್ಲ. ಭಿತ್ತಿ ಪತ್ರಗಳನ್ನು ರಾಜ್ಯದ ಬೇರೆ ಬೇರೆ ಭಾಗಗಳಿಗೆ ರಚಿಸಿಕೊಟ್ಟಿದ್ದಾರೆ. ಅನೇಕ ಟ್ಯಾಬ್ಲೊ ಕೃತಿಗಳು ಇವರ ಕಲಾಸಕ್ತಿಯನ್ನು ಪ್ರತಿಬಿಂಬಿಸುತ್ತವೆ. ಬಸ್ಸುಗಳು, ಗ್ರಾಮೀಣ ಪ್ರದೇಶದ ಚಕ್ಕಡಿಗಳು ಹಾಗೂ ಇತರೆ ವಾಹನಗಳ ಮೇಲೆ ಇವರು ಇಂತಹ ಕೃತಿಗಳನ್ನು ರಚನೆ ಮಾಡಿದ್ದಾರೆ.

ವ್ಯಂಗ್ಯಚಿತ್ರ ರಚನಾ ವಿಧಾನದಲ್ಲಿ ವಿಶಿಷ್ಟವಾಗಿ ತಮ್ಮನ್ನು ಗುರುತಿಸಿಕೊಂಡಿರುವುದು ಸಹಿತ ಇದೇ ಸಂದರ್ಭದಲ್ಲಿ ಎನ್ನಬಹುದು. ಹಾಗಾಗಿ ಎಂಭತ್ತರ ದಶಕದ ಅವಧಿಯು ಇವರ ಕಲಾ ಬದುಕಿನ ಅತ್ಯಂತ ಕ್ರಿಯಾಶೀಲ ಅವಧಿ ಎನ್ನಬಹುದು. ಪಾಟೀಲರು ಮುಂದೆ ತೊಂಭತ್ತರ ದಶಕಕ್ಕೆ ಪ್ರವೇಶಸಿದಾಗ ಅವರ ಕಲಾಕೃತಿಗಳಲ್ಲಿ ಪ್ರೌಢತೆ ಕಂಡು ಬಂದಿರುವುದನ್ನು ಇಲ್ಲಿ ಕಂಡುಕೊಳ್ಳಲಾಗಿದೆ. ಹಿಂದಿನ ದಶಕದಲ್ಲಿ ನಿರಂತರವಾಗಿ ದುಡಿದ ಫಲಿತಗಳು ಈ ದಶಕದಲ್ಲಿ ದೊರಕಿದ್ದು ಕಲಾಕೃತಿಗಳಲ್ಲಿ ಅವುಗಳ ಪರಿಣಾಮ ಗೋಚರಿಸುತ್ತದೆ.

ತೊಂಭತ್ತರ ದಶಕದ ಆರಂಭದ ಹೊತ್ತಿಗೆ ಮತ್ತೆ ಹೆಚ್ಚಿನ ಪ್ರಮಾಣದಲ್ಲಿ ಗ್ರಾಮೀಣ ಮಹಿಳೆಯರ ಕುರಿತಾಗಿ ಕೃತಿಗಳನ್ನು ರಚಿಸಿದಂತೆ ಕಂಡು ಬರುತ್ತದೆ. ಹಿಂದಿನ ದಿನಗಳಲ್ಲಿ ಮಹಿಳೆಯರ ಕುರಿತಾಗಿರುವ ಚಿತ್ರಗಳಲ್ಲಿ ಪ್ರೇಮ, ಕಾಮ, ನಗ್ನತೆ, ಗೆಳೆಯ, ಗೆಳತಿ, ಸಂಭೋಗ ಇಂತಹ ವಿಷಯಗಳು ಕಂಡು ಬಂದರೆ, ಈ ದಶಕದಲ್ಲಿ ರಚಿಸಿದ ಮಹಿಳೆಯರ ಚಿತ್ರಗಳಲ್ಲಿ ದಾಂಪತ್ಯ, ವಿರಹ, ಸ್ತ್ರೀ ಸಂವೇದನೆ, ಏಕಾಂತ, ಮಹಿಳೆಯರ ಗುಂಪು, ಗೆಳತಿಯರು, ಸ್ತ್ರೀ

ಸ್ವಾತಂತ್ರ್ಯ ಎಂಬಂತಹ ವಿಷಯಗಳು ಗೋಚರಿಸುತ್ತವೆ. ಪಾಟೀಲರ ಮನೋಸ್ಥಿತಿ ಹಾಗೂ ಅನುಭವದ ಪ್ರಭಾವಳಿ ಇಲ್ಲಿ ಕೆಲಸ ಮಾಡಿರುವುದು ಕಂಡುಬರುತ್ತದೆ. ಯುವಕರಾಗಿದ್ದಾಗ ಸಹಜವಾಗಿ ಮಹಿಳೆಯರ ಬಗ್ಗೆ ಚಿಂತಿಸುವ ಸಂಗತಿಗಳು ಹಾಗೂ ಪ್ರೌಢ ವಯಸ್ಸಿನಲ್ಲಿ ಮಹಿಳೆಯರ ಬಗ್ಗೆ ಪುರುಷರು ಆಲೋಚಿಸುವ ರೀತಿಗಳಿಗೆ ವ್ಯತ್ಯಾಸವಿದೆ. ಅದು ವಯೋಮಾನದ ಸಹಜಗುಣವಾಗಿದೆ. ಇದು ಅವರ ಕಲಾಕೃತಿ ರಚನೆಯ ಮೇಲೂ ಪ್ರಭಾವ ಬೀರುತ್ತದೆ. ಇಂತಹ ಮೌಲಿಕ  ಅಂಶಗಳನ್ನು ಈ ಅಧ್ಯಾಯದಲ್ಲಿ ಚರ್ಚಿಸಲಾಗಿದೆ.

ತೊಂಭತ್ತರ ದಶಕದ ಉತ್ತರಾರ್ಧದಲ್ಲಿ ಪಾಟೀಲರು ಸೃಜನಾತ್ಮಕ ನವ್ಯಶೈಲಿಯ ಅಮೂರ್ತ ನಿಸರ್ಗ ಚಿತ್ರಗಳನ್ನು ಹೆಚ್ಚಿನ ಪ್ರಮಾಣದಲ್ಲಿ ರಚಿಸಿದ್ದಾರೆ. ಇಲ್ಲಿ ರೇಖಾ ಪ್ರಧಾನ ಚಿತ್ರಗಳಿಗಿಂತ ವರ್ಣಗಳನ್ನು ಸಹಜವಾಗಿ ಹರಿಯಬಿಟ್ಟು ರಚಿಸಿದ ವಿನ್ಯಾಸ ಪ್ರಧಾನ ಅಮೂರ್ತ ಕೃತಿಗಳು ಹೆಚ್ಚಾಗಿ ರಚಿಸಲ್ಪಟ್ಟಿವೆ. ಇವುಗಳ ಕುರಿತಾಗಿಯೂ ಇಲ್ಲಿ ವಿಶ್ಲೇಷಣೆ ಮಾಡಲಾಗಿದೆ. ಇದರ ಜೊತೆಗೆ ನಿರಂತರವಾಗಿ ಎಲ್ಲ ಕಾಲದಲ್ಲಿಯೂ ಅವರು ವ್ಯಕ್ತಿಚಿತ್ರ ಮತ್ತು ಭಾವಚಿತ್ರಗಳನ್ನು ರಚಿಸುತ್ತಲೆ ಬಂದಿದ್ದಾರೆ. ತೊಂಭತ್ತರ ದಶಕದಲ್ಲಿನ ಅವರ ಭಾವಚಿತ್ರಗಳು ಪ್ರೌಢತೆಯಿಂದ ಕೂಡಿವೆ. ವರ್ಣಲೇಪನ, ನೆರಳು ಬೆಳಕಿನ ಪರಿಣಾಮ, ನಿರೂಪಣಾ ಶೈಲಿ, ಸಂಯೋಜನಾ ರೀತಿ, ಹಿನ್ನೆಲೆ, ಸ್ಥಳಾವಕಾಶದ ಕಲ್ಪನೆ ಎಲ್ಲದರಲ್ಲಿ ಪ್ರೌಢಿಮೆ ಕಂಡು ಬರುತ್ತದೆ. ಭಾವಚಿತ್ರ ಮತ್ತು ವ್ಯಕ್ತಿಚಿತ್ರ ರಚನೆಯಲ್ಲಿ ಪ್ರಾರಂಭಿಕ ದಿನಗಳಲ್ಲಿ ಶ್ರೇಷ್ಠಕಲಾವಿದ ಶ್ರೀ ದಂಡಾವತಿಮಠ ಅವರ ಪ್ರಭಾವಕ್ಕೊಳಗಾಗಿದ್ದಂತೆ ಕಂಡು ಬಂದರೂ ಈ ದಶಕದ ಹೊತ್ತಿಗೆ ಅವರ ಪ್ರಭಾವಲಯದಿಂದ ಹೊರಬಂದು ವೈಯಕ್ತಿಕ ಶೈಲಿಯನ್ನು ರೂಪಿಸಿಕೊಂಡಿರುವುದು ಗಮನಾರ್ಹವಾಗಿದೆ. ಇವರ ಭಾವಚಿತ್ರ ರಚನಾ ಶೈಲಿಯಲ್ಲಿ ಪಾರಂಪರಿಕ ರಚನೆಯ ತಳಪಾಯದ ಮೇಲೆ ಆಧುನಿಕ ವಿನ್ಯಾಸದ ಕಟ್ಟಡವನ್ನು ನಿರ್ಮಿಸಿದಂತೆ ಕಂಡು ಬರುತ್ತದೆ. ಇಂತಹ ವಿವಿಧ ಸಂಗತಿಗಳನ್ನು ಇಲ್ಲಿ ಚರ್ಚಿಸಲಾಗಿದೆ.

ಪಾಟೀಲರು ವ್ಯಕ್ತಿಚಿತ್ರ ಮತ್ತು ಭಾವಚಿತ್ರ ರಚನೆಯಲ್ಲಿ ಬೇರೆ ಬೇರೆ ವಿಧಾನ ಅನುಸರಿಸಿದ್ದಾರೆ. ರೂಪದರ್ಶಿಗಳನ್ನು ಎದುರಿಗೆ ಕುಳ್ಳಿರಿಸಿಕೊಂಡು ಚಿತ್ರಿಸುವ ವಿಧಾನ, ವ್ಯಕ್ತಿಗಳ ಛಾಯಾಚಿತ್ರಗಳನ್ನು ಎದುರಿಗಿಟ್ಟುಕೊಂಡು ಚಿತ್ರಿಸುವ ವಿಧಾನ ಹಾಗೂ ಕೆಲವು ಸಲ ಕಾಲ್ಪನಿಕವಾಗಿ ಸಹಿತ ಭಾವಚಿತ್ರ ಮತ್ತು ವ್ಯಕ್ತಿಚಿತ್ರಗಳನ್ನು ರಚಿಸಿದ್ದಾರೆ. ಎಲ್ಲ ಬಗೆಯ ಭಾವಚಿತ್ರ ಮತ್ತು ವ್ಯಕ್ತಿ ಚಿತ್ರಗಳಲ್ಲೂ ತೀವ್ರ ಭಾವನೆಗಳನ್ನು ಉಂಟು ಮಾಡಿರುವುದು ಇವರ ಕಲಾಪ್ರತಿಭೆಯನ್ನು ತೋರಿಸುತ್ತದೆ. ಇಂತಹ ಸಂಗತಿಗಳು ಸಹಿತ ಇಲ್ಲಿ ವಿಶ್ಲೇಷಣೆಗೆ ಒಳಪಟ್ಟಿವೆ.

ಪಾಟೀಲರು ರಚಿಸಿದ ಹಳ್ಳಿ ಹಾಗೂ ನಗರ ದೃಶ್ಯಗಳು ವಿಶೇಷವಾಗಿವೆ. ಅಮೂರ್ತವಾಗಿರುವ ಈ ಕಲಾಕೃತಿಗಳು ಹೆಚ್ಚಾಗಿ ಪಕ್ಷಿನೋಟದ ವಿನ್ಯಾಸದಲ್ಲಿ ರಚಿಸಲ್ಪಟ್ಟಿವೆ. ಮನೆ, ಮಠ, ದೇವಾಲಯ, ಚರ್ಚು, ಮಸೀದಿ, ಗುಡಿಸಲು ಇನ್ನಿತರ ಎಲ್ಲ ಬಗೆಯ ಕಟ್ಟಡಗಳನ್ನು ಇಲ್ಲಿ ಕೇವಲ ಜಾಮಿತಿಕ ವಿನ್ಯಾಸಗಳಿಂದ ಚಿತ್ರಿಸಲಾಗಿದೆ. ಆಯತ, ತ್ರಿಕೋನ, ಚೌಕ, ಸಿಲಿಂಡರ್, ವೃತ್ತಾಕಾರಗಳಂತಹ ವಿನ್ಯಾಸಗಳನ್ನು ಸಂಯೋಜಿಸುವ ಮೂಲಕ ನಗರ ಮತ್ತು ಹಳ್ಳಿಯ ಕಲ್ಪನೆಗಳನ್ನು ಬಿಂಬಿಸಲಾಗಿದೆ. ವರ್ಣಲೇಪನದಲ್ಲಿ ಪ್ರಖರ ವರ್ಣಗಳು ಹೆಚ್ಚಾಗಿ ಬಳಸಲ್ಪಟ್ಟಿವೆ. ಈ ಬಗೆಯ ಅಮೂರ್ತ ಚಿತ್ರಗಳ ಬಗ್ಗೆ ಇಲ್ಲಿ ಚರ್ಚಿಸಲಾಗಿದೆ.

ತೊಂಭತ್ತರ ದಶಕದ ಕೊನೆಯ ವೇಳೆಗೆ ಪಾಟೀಲರ ಕಲಾಕೃತಿಗಳಲ್ಲಿ ಒಂದು ಬಗೆಯ ಪಕ್ವತೆ ಉಂಟಾಗಿರುವುದನ್ನು ಕಂಡುಕೊಳ್ಳಲಾಗಿದೆ. ತೊಂಭತ್ತರಿಂದ ಎರಡು ಸಾವಿರ ಇಸ್ವಿಯವರೆಗಿನ ದಶಕಗಳಲ್ಲಿ ರಚಿಸಲ್ಪಟ್ಟ ಕೃತಿಗಳಲ್ಲಿ ಅಂತಹ ಅಂಶಗಳು ಗೋಚರಿಸುತ್ತವೆ. ಮನುಷ್ಯನ ವಯಸ್ಸು ಮಾಗಿದಂತೆ ಆತನ ಮನಸ್ಸು ಹಾಗೂ ವಿಚಾರಗಳೂ ಮಾಗುತ್ತವೆ. ಅನುಭವದ ಮೂಸೆಯಲ್ಲಿ ಹೊರಬಂದ ಪಕ್ವತೆ ಅಲ್ಲಿ ಕಂಡು ಬರುತ್ತದೆ. ಒಂದು ರೇಖೆ, ಒಂದು ಕುಂಚದ ಎಳೆತ, ಒಂದು ಆಕಾರಗಳಲ್ಲಿ ಅನುಭವದ ಆಳ ಹಾಗೂ ನಿರಂತರ ಅಧ್ಯಯನದ ಪರಿಶ್ರಮಗಳು ಬಿಂಬಿಸಲ್ಪಡುತ್ತವೆ. ಪಾಟೀಲರ ಕೃತಿಗಳಲ್ಲಿರುವ ಈ ಬಗೆಯ ಅಂಶಗಳನ್ನು ಇಲ್ಲಿ ವಿಶ್ಲೇಷಿಸಲಾಗಿದೆ.

ಈ ಸಂದರ್ಭದಲ್ಲಿ ಪಾಟೀಲರು ಗ್ರಾಮೀಣ ಪರಿಸರ ಮತ್ತು ಸಂಸ್ಕೃತಿಯನ್ನು ಬಿಂಬಿಸುವ ಕಲಾಕೃತಿಗಳಿಗೆ ಹೊಸತನದ ರೂಪಕೊಟ್ಟು ರಚಿಸಿದ್ದಾರೆ. ನವ್ಯಶೈಲಿಯ ನಿರೂಪಣೆಯಲ್ಲಿ ಪರಂಪರೆಯನ್ನು ಕಟ್ಟಿಕೊಡುವ ಪ್ರಯತ್ನ ಇಲ್ಲಿದೆ. ಈ ಹಂತದಲ್ಲಿ ಪಾಟೀಲರು ಪುರುಷ ಮತ್ತು ಮಹಿಳೆಯರ ವೈವಿಧ್ಯ ಸಂಬಂಧಗಳನ್ನು ಸಾಂಕೇತಿಕವಾಗಿ ನಿರೂಪಿಸುವ ಪ್ರಯತ್ನ ಮಾಡಿದ್ದಾರೆ. ಗಂಡ ಹೆಂಡತಿ, ತಾಯಿ ಮಗು, ಅಣ್ಣ ತಂಗಿ, ಅಕ್ಕ ತಮ್ಮ, ಗೆಳೆಯ ಗೆಳತಿ, ಪ್ರೇಯಸಿ, ಪ್ರಿಯಕರ, ತಂದೆ ಮಗಳು, ಅಜ್ಜ ಮೊಮ್ಮಗಳು ಹೀಗೆ ವಿವಿಧ ನೆಲೆಯಲ್ಲಿ ಸಮಾಜದಲ್ಲಿ ಹರಡಿಕೊಂಡಿರುವ ಸಂಬಂಧಗಳನ್ನು ಚಿತ್ರದ ಮೂಲಕ ಅನಾವರಣಗೊಳಿಸಿದ್ದಾರೆ.

ಈ ದಶಕದಲ್ಲಿ ವಿಶೇಷವಾಗಿ ಸ್ತ್ರಿ ಸಂವೇದನೆಗಳ ಕುರಿತು ತೀವ್ರವಾಗಿ ಸ್ಪಂದಿಸಿದಂತೆ ಕಂಡು ಬರುತ್ತದೆ. ಪುರುಷ ದಬ್ಬಾಳಿಕೆಯಿಂದ ನಲುಗುತ್ತಿರುವ ಮಹಿಳೆಯ ಬದುಕು, ಸಮಾಜ ಅವಳ ಬಗ್ಗೆ ಹೊಂದಿರುವ ತಾರತಮ್ಯ ಧೋರಣೆಗಳು, ಸಾಂಸಾರಿಕ ಜಂಜಾಟಗಳು ಇವರ ಕಲಾಕೃತಿಯಲ್ಲಿ ಮೈದಾಳಿವೆ. ಇಂತಹ ಮೌಲಿಕ ಅಂಶಗಳ ಬಗ್ಗೆ ಈ ಅಧ್ಯಾಯದಲ್ಲಿ ವಿಶ್ಲೇಷಣೆ ಮಾಡಲಾಗಿದೆ.

ಇತ್ತೀಚಿನ ಅಂದರೆ ಎರಡು ಸಾವಿರದಿಂದ ಎರಡು ಸಾವಿರದ ಹತ್ತರ ದಶಕದಲ್ಲಿ ಪಾಟೀಲರ ಕಲಾಕೃತಿಗಳಲ್ಲಿ ಸಾಂಕೇತಿಕತೆ, ಮತ್ತು ಸರಳತೆಗಳು ಹೆಚ್ಚಿನ ಪ್ರಮಾಣದಲ್ಲಿ ಕಂಡು ಬರುತ್ತವೆ. ವಿಷಯಗಳನ್ನು ವಿವರವಾಗಿ ನಿರೂಪಿಸದೇ ಕೇವಲ ರೇಖೆ, ಆಕಾರ, ಬಣ್ಣಗಳನ್ನು ವಿಶಿಷ್ಟವಾಗಿ ಸಂಯೋಜಿಸುವ ಮೂಲಕ ಚಿತ್ರಿಸಿದ್ದಾರೆ. ಬಳಸುವ ಮಾಧ್ಯಮದಲ್ಲಿಯೂ ಸರಳತೆ ಇದ್ದು ಕೆಲವು ಸಂದರ್ಭದಲ್ಲಿ ದಿನಪತ್ರಿಕೆಗಳನ್ನು ಚಿತ್ರಣಕ್ಕಾಗಿ ಬಳಸಿಕೊಂಡಿದ್ದಾರೆ.

ಎಂ. ಬಿ. ಪಾಟೀಲರ ಕಲಾಕೃತಿಗಳ ವಸ್ತುವಿಷಯಗಳನ್ನು ಅವಲೋಕಿಸಿದಾಗ ಹಲವಾರು ಕುತೂಹಲಕರ ಮತ್ತು ವಿಶಿಷ್ಟ ಸಂಗತಿಗಳು ಕಂಡು ಬರುತ್ತವೆ ಎಂಬುದನ್ನು ಇಲ್ಲಿ ಕಂಡುಕೊಳ್ಳಲಾಗಿದೆ. ಕೆಲವು ವಿಷಯಗಳನ್ನು ನಿರಂತರವಾಗಿ ರಚಿಸುತ್ತ ಬಂದಿದ್ದರೆ ಮತ್ತೆ ಕೆಲವು ವಿಷಯಗಳನ್ನು ನಿರ್ಧಿಷ್ಟ ಸಂದರ್ಭಗಳಲ್ಲಿ ಮಾತ್ರ ರಚನೆ ಮಾಡಿದ್ದಾರೆ ಎಂಬುದನ್ನು ಕಂಡುಕೊಳ್ಳಲಾಗಿದೆ.

ಇವರ ಒಟ್ಟು ಕಲಾಕೃತಿಗಳನ್ನು ವಿಷಯವಾರು ವಿಂಗಡಿಸಿದಾಗ ಸಂಯೋಜನಾ ಚಿತ್ರಗಳು, ವ್ಯಕ್ತಿ ಚಿತ್ರಗಳು, ಭಾವಚಿತ್ರಗಳು, ನಿಸರ್ಗಚಿತ್ರಗಳು, ಅಮೂರ್ತ ಚಿತ್ರಗಳು, ಮಹಿಳೆಯರ ಸರಣಿಚಿತ್ರಗಳು, ಹಳ್ಳಿ ಮತ್ತು ಪಟ್ಟಣದ ಚಿತ್ರಗಳು, ಸ್ಥಿರಚಿತ್ರಗಳು, ವ್ಯಂಗ್ಯಚಿತ್ರಗಳು, ವುಡ್‌ಬರ್ನಿಂಗ್ ಚಿತ್ರಗಳು, ಟ್ಯಾಬ್ಲೋ ಕೃತಿಗಳು, ಕೋಲಾಜ್ ಕೃತಿಗಳು, ಹೀಗೆ ವೈವಿಧ್ಯ ರೀತಿಯಲ್ಲಿ ಕಂಡು ಬರುತ್ತವೆ. ಅದೇ ಪ್ರಕಾರ ಬಳಸಿದ ವರ್ಣ ಮಾಧ್ಯಮದಿಂದ ವಿಂಗಡಿಸಿದರೂ ವೈವಿಧ್ಯತೆ ಇದೆ. ಜಲವರ್ಣ ಚಿತ್ರಗಳು, ತೈಲವರ್ಣಚಿತ್ರಗಳು, ಟೆಂಪರಾ ವರ್ಣದ ಚಿತ್ರಗಳು, ಪೋಷ್ಟರ ವರ್ಣದ ಚಿತ್ರಗಳು, ಅಕ್ರಾಲಿಕ್ ವರ್ಣದಚಿತ್ರಗಳು, ಪೆನ್ಸಿಲ್ ಚಿತ್ರಗಳು, ಪೆನ್ನು ಮತ್ತು ಇಂಕ್ ಚಿತ್ರಗಳು, ಚಾರ್ಕೋಲ್ ಚಿತ್ರಗಳು, ಮೇಣದ ಬಣ್ಣದ ಚಿತ್ರಗಳು, ಪುಡಿವರ್ಣದ ಚಿತ್ರಗಳು, ಮಿಶ್ರವರ್ಣದ ಚಿತ್ರಗಳು, ಹೀಗೆ ಹಲವು ಬಗೆಯ ಮಾಧ್ಯಮಗಳನ್ನು ಇವರು ಬಳಸಿಕೊಂಡಿರುವುದನ್ನು ಇಲ್ಲಿ ವಿಶ್ಲೇಷಿಸಲಾಗಿದೆ. ಪಾಟೀಲರು ಮಾಧ್ಯಮವನ್ನು ಸೂಕ್ತವಾಗಿ ಬಳಸಿದ್ದಾರೆ ಹಾಗೂ ಆಯಾ ಮಾಧ್ಯಮದ ಹಿನ್ನೆಲೆಯಲ್ಲಿ ಪ್ರಭಾವಕಾರಿಯಾದ ಮೈವಳಿಕೆಗಳನ್ನು ಸೃಷ್ಟಿಸಿರುವ ಬಗ್ಗೆಯೂ ಇಲ್ಲಿ ವಿವೇಚಿಸಲಾಗಿದೆ.

ನಾಲ್ಕನೆಯ ಅಧ್ಯಾಯದಲ್ಲಿ ಎಂ. ಬಿ. ಪಾಟೀಲರ ಕಲಾಕೃತಿಯ ಶೈಲಿ, ಪ್ರಭಾವ, ಪ್ರೇರಣೆ ಮತ್ತು ತಾಂತ್ರಿಕತೆಗಳ ಬಗ್ಗೆ ಚರ್ಚಿಸಲಾಗಿದೆ. ಯಾವುದೇ ಕಲಾಕೃತಿ ರಚನೆಗೊಳ್ಳಲು ಅದಕ್ಕೆ ಕಲಾವಿದನ ಆಂತರ್ಯದಲ್ಲಿ ಪ್ರೇರಣೆ ಉಂಟಾಗುತ್ತದೆ. ಈ ಪ್ರೇರಣೆ ಸೃಷ್ಟಿಯಲ್ಲಿನ ಯಾವುದೇ ದೃಶ್ಯಗಳಿಂದ ಪ್ರಾಣಿ, ಪಕ್ಷಿಗಳಿಂದ, ವ್ಯಕ್ತಿಗಳಿಂದ, ಸಾಮಾಜಿಕ ಘಟನಾವಳಿಗಳಿಂದ

ಅಥವಾ ವಸ್ತುಗಳಿಂದ ಮಾತ್ರವಲ್ಲದೆ ಸಾಹಿತ್ಯ, ಸಂಗೀತ, ನಾಟ್ಯಗಳಂತಹ ಕಲಾ ಪ್ರಕಾರಗಳನ್ನು ವೀಕ್ಷಿಸುವುದರಿಂದಲೂ ಪ್ರೇರಣೆ ಉಂಟಾಗಬಹುದು. ಹಾಗಾಗಿ ಕಲಾವಿದನಿಗೆ ಪ್ರೇರಣೆ ಉಂಟಾಗಲು ನಿರ್ಧಿಷ್ಟ ಕಾರಣಗಳೆಂಬುದಿಲ್ಲ. ಅದು ತಕ್ಷಣದ ಕ್ರಿಯೆ ಹಾಗೂ ಪ್ರತಿಕ್ರಿಯೆಗಳನ್ನು ಅವಲಂಬಿಸಿರುತ್ತದೆ. ಪಾಟೀಲರಿಗೆ ಚಿತ್ರ ರಚನೆಗೆ ಹಲವು ಬಗೆಯ ಪ್ರೇರಣೆಗಳು ಉಂಟಾಗಿರುವುದನ್ನು ಸ್ವತಃ ಅವರೇ ತಿಳಿಸುತ್ತಾರೆ. ಬಾಲ್ಯದ ದಿನಗಳು, ಅಲ್ಲಿನ ಆಟ, ಪಾಠಗಳು, ಹಳ್ಳಿಯ ಪರಿಸರ, ಮಾತಾ ಪಿತೃಗಳು, ಹಾಗೂ ಸಹೊದರ ಸಹೋದರಿಯರ ಸಂಬಂಧಗಳು, ಗ್ರಾಮೀಣ ಸಂಸ್ಕೃತಿ, ಅಲ್ಲಿನ ವೇಷಭೂಷಣಗಳು, ಅಲ್ಲಿನ ನಂಬಿಕೆ, ಆಚರಣೆ, ಧಾರ್ಮಿಕತೆ, ಆಚಾರ, ವಿಚಾರ, ಜೀವನ ಪದ್ಧತಿ, ಗ್ರಾಮೀಣ ಕಲಾಪ್ರಕಾರಗಳು ಇವರ ಚಿತ್ರ ರಚನೆಗೆ ಪ್ರೇರಣೆ ಒದಗಿಸಿವೆ ಎಂಬುದನ್ನು ಇಲ್ಲಿ ಕಂಡುಕೊಳ್ಳಲಾಗಿದೆ.

ಇವುಗಳಲ್ಲದೆ ಬಾಲ್ಯದ ದಿನಗಳಲ್ಲಿ ಹಳ್ಳಿಯಲ್ಲಿ ಆಚರಿಸುತ್ತಿದ್ದ ಹಬ್ಬ ಹರಿದಿನಗಳು, ಆ ಸಂದರ್ಭದಲ್ಲಿ ರಚಿಸುವ ಕಲಾಕೃತಿಗಳು ಇವರಿಗೆ ಪ್ರೇರಣೆ ಉಂಟುಮಾಡಿವೆ. ಇದರ ಜೊತೆಗೆ ಪಾಟೀಲರು ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ ಪಡೆಯುವ ಹಂತದಲ್ಲಿ ಚಿತ್ರಕಲೆ ಕಲಿಸುತ್ತಿದ್ದ ಶಿಕ್ಷಕರು, ಹಾಗೂ ಕಲಾಶಿಕ್ಷಣ ಸಂದರ್ಭದಲ್ಲಿ ದಂಡಾವತಿಮಠ ಅವರಲ್ಲದೆ ಇನ್ನಿತರ ಶಿಕ್ಷಕರ ಕೃತಿಗಳಿಂದ ಇವರು ಪ್ರೇರಣೆಗೊಂಡಿರುವುದು ತಿಳಿಯುತ್ತದೆ. ಅದೇ ರೀತಿ ಮುಂಬೈನಂತಹ ನಗರ ಜೀವನದ ವೈಭವ, ಅಲ್ಲಿಯ ಜನರ ವೇಷಭೂಷಣ, ಬದುಕಿನ ರೀತಿ ನೀತಿಗಳು, ಆಧುನಿಕತೆಯ ಹವ್ಯಾಸಗಳು ಸಹಿತ ಇವರ ಕಲಾಕೃತಿಗೆ ಪ್ರೇರಣೆ ಉಂಟುಮಾಡಿವೆ ಎಂದು ಕಂಡುಕೊಳ್ಳಲಾಗಿದೆ.

ನಂತರದ ದಿನಗಳಲ್ಲಿ ಇವರು ಹಲವು ರೀತಿಯ ಕಲಾಕೃತಿಗಳನ್ನು ರಚಿಸಿದ್ದಾರೆ. ಭಿತ್ತಿಚಿತ್ರ, ಕೋಲಾಜ್, ವ್ಯಂಗ್ಯ ಚಿತ್ರ, ಟ್ಯಾಬ್ಲೋ ಕಲಾಕೃತಿಗಳು ಇವರಿಂದ ರಚನೆಗೊಂಡಿವೆ. ಪ್ರಾಚೀನ ಭಿತ್ತಿಚಿತ್ರ ಪರಂಪರೆ, ಕೌದಿಹೊಲಿಯುವ ವಿಧಾನ, ಸಮಾಜದಲ್ಲಿ ನಡೆಯುವ ಭ್ರಷ್ಟಾಚಾರ, ಪ್ರಚಾರದ ವಿಷಯಗಳು ಇವುಗಳಿಗೆಲ್ಲ ಪ್ರೇರಣೆ ಉಂಟು ಮಾಡಿರುವುದನ್ನು ಕೃತಿಯ ಹಿನ್ನೆಲೆಯಲ್ಲಿ ತಿಳಿದುಕೊಳ್ಳಲಾಗಿದೆ. ವೃತ್ತಿ ಬದುಕಿನಲ್ಲಿ ಇವರು ವಾರ್ತಾ ಮತ್ತು ಪ್ರಚಾರ ಇಲಾಖೆಯಲ್ಲಿ ಇದ್ದುದರಿಂದಾಗಿ ನಿರಂತರವಾಗಿ ಸಾಮಾಜಿಕ ಪರಿಸರದೊಂದಿಗೆ ಬೆರೆಯಬೇಕಾದ ಅನಿವಾರ್ಯತೆ ಇವರದಾಗಿತ್ತು. ಹಾಗಾಗಿ ಇವರಿಗೆ ಸಮಾಜದಲ್ಲಿನ ಆಗುಹೋಗುಗಳೇ ನಿರಂತರ ಪ್ರೇರಣೆ ಒದಗಿಸಿವೆ ಎಂದು ಹೇಳಬಹುದು. ಹಾಗಾಗಿ ಇವರ ಬಹುಮಟ್ಟಿನ ಕಲಾಕೃತಿಗಳು ಸಮಾಜಮುಖಿ ನೆಲೆಯಲ್ಲಿ ರಚನೆಗೊಂಡಿರುವುದನ್ನು ಕಂಡುಕೊಳ್ಳಲಾಗಿದೆ.

ಕಲಾವಿದನು ತನ್ನಕೃತಿ ರಚನೆಯಲ್ಲಿ ಸ್ವಂತಿಕೆಯನ್ನು ಕಂಡುಕೊಂಡರೂ ಅದರಲ್ಲಿ ಹಲವು ರೀತಿಯ ಪ್ರಭಾವಗಳಿರುತ್ತವೆ. ಕಲೆಯನ್ನು ಕಲಿಯುವ ಹಂತದಲ್ಲಂತೂ ಶಿಕ್ಷಕರ ದಟ್ಟಪ್ರಭಾವಕ್ಕೆ ಕಲಾವಿದ್ಯಾರ್ಥಿ ಒಳಗಾಗಿರುವುದು ಕಂಡು ಬರುತ್ತದೆ. ಜಾಗತಿಕ ಮಟ್ಟದ ಪ್ರಸಿದ್ಧ ಕಲಾವಿದರು ಸಹಿತ ತಮ್ಮ ಕಲಾಶೈಲಿಯನ್ನು ರೂಪಿಸಿಕೊಳ್ಳಲು ಯಾರು ಮತ್ತು ಯಾವುದು ಪ್ರಭಾವ ಬಿರಿದೆ ಎಂಬುದನ್ನು ಹೇಳಿಕೊಂಡಿದ್ದಾರೆ. ಪ್ಯಾಬ್ಲೋಪಿಕಾಸೊ ತನ್ನ ಕ್ಯೂಬಿಜಂ ಕಲಾಶೈಲಿಗೆ ಆಫ್ರಿಕನ್ ನಿಗ್ರೋ ಜನಪದ ಕಲೆ ಹಾಗೂ ಮಲಗಾಹಳ್ಳಿಯ ಜನಪದ ಚಿತ್ರಕಲೆ ಪ್ರಭಾವ ಬೀರಿದೆ ಎಂದು ಹೇಳುತ್ತಾನೆ. ಹೀಗೆ ಕಲಾವಿದರ ಕೃತಿರಚನೆಯ ಮೇಲೆ ಹತ್ತು ಹಲವು ರೀತಿಯ ಪ್ರಭಾವಗಳು ನಿರಂತರವಾಗಿ ಉಂಟಾಗುತ್ತಲಿರುತ್ತವೆ. ಇಲ್ಲಿ ಎಂ.ಬಿ.ಪಾಟೀಲರ ಕಲೆ ಮತ್ತು ಕಲಾಕೃತಿಗಳ ಮೇಲೆ ಬೀರಿದ ಪ್ರಭಾವಗಳನ್ನು ಕುರಿತು ವಿಶ್ಲೇಷಣೆ ಮಾಡಲಾಗಿದೆ.

ಪಾಟೀಲರು ಹೇಳಿಕೊಳ್ಳುವಂತೆ ಅವರ ಬಾಲ್ಯದ ದಿನಗಳಲ್ಲಿ ತಮ್ಮ ಹಳ್ಳಿಯಲ್ಲಿ ಆಚರಿಸುತ್ತಿದ್ದ ಹಬ್ಬಹರಿದಿನಗಳಲ್ಲಿ ರಚನೆ ಮಾಡುತ್ತಿದ್ದ ಕಲಾಕೃತಿಗಳ ಪ್ರಭಾವ ಉಂಟಾಗಿರುವುದು ಕಂಡು ಬರುತ್ತದೆ. ನಾಗಶಿಲ್ಪ, ಜೋಕುಮಾರ, ಗುಳ್ಳವ್ವ, ಮಣ್ಣೆತ್ತು, ಗಣಪತಿ, ಗುರ್ಜಿ, ಪಾಂಡವರ ಶಿಲ್ಪ, ಶೀಗವ್ವ, ಗೌರವ್ವ, ಶಿಲ್ಪಗಳಲ್ಲದೆ ಬಾಗಿಲು, ಕಿಟಕಿ, ಒಳಗೋಡೆ, ಹೊರಗೋಡೆಗಳಲ್ಲಿ ಚಿತ್ರಿಸುವ ಜನಪದ ಚಿತ್ರಗಳು ಇವರ ಬಾಲ್ಯದ ಚಿತ್ರ ರಚನೆಯ ಮೇಲೆ ಪ್ರಭಾವ ಬೀರಿದ್ದು ಅದರಿಂದ ಇವರ ಬಾಲಪ್ರತಿಭೆ ಬೆಳಗಿರುವುದನ್ನು ಇಲ್ಲಿ ಕಂಡುಕೊಳ್ಳಲಾಗಿದೆ.

ಕಲಾಕೃತಿಯಲ್ಲಿ ಪ್ರೇರಣೆ, ಪ್ರಭಾವಗಳಂತೆ ಅದನ್ನು ರಚಿಸುವಲ್ಲಿ ಅನುಸರಿಸಿರುವ ತಂತ್ರಗಾರಿಕೆಯೂ ಮಹತ್ವದ ಪಾತ್ರವಹಿಸುತ್ತದೆ. ಇಲ್ಲಿ ಎಂ.ಬಿ.ಪಾಟೀಲರು ಕಲಾಕೃತಿಯಲ್ಲಿ ಅನುಸರಿಸಿರುವ ತಂತ್ರಗಾರಿಕೆಯ ಅಂಶಗಳನ್ನು ಪ್ರತ್ಯೇಕವಾಗಿ ವಿಶ್ಲೇಷಣೆಗೆ ಒಳಪಡಿಸಲಾಗಿದೆ. ಕಲಾಕೃತಿಯ ತಾಂತ್ರಿಕತೆಯಲ್ಲಿ ಚಿತ್ರದ ಆಕಾರ, ರೂಪ, ರೇಖೆ, ಬಣ್ಣ, ಮೈವಳಿಕೆ, ಸ್ಥಳಾವಕಾಶ ಸಂಯೋಜನಾ ರೀತಿ, ಹಿನ್ನೆಲೆ ಮುನ್ನೆಲೆ ರಚನಾಶೈಲಿಗಳಂತಹ ಅಂಶಗಳು ಒಳಗೊಳ್ಳುತ್ತವೆ. ಪಾಟೀಲರು ತಮ್ಮ ಕಲಾಬದುಕಿನುದ್ದಕ್ಕೂ ಇಂತಹ ಕಲಾತಾಂತ್ರಿಕ ಅಂಶಗಳನ್ನು ವೈವಿಧ್ಯಮಯವಾಗಿ ಬಳಸಿಕೊಳ್ಳುತ್ತ ಬಂದಿದ್ದಾರೆ.

ಕಲಿಕೆಯ ಹಂತದಲ್ಲಿ ನಿರ್ಧಿಷ್ಟ ಮಾರ್ಗಸೂಚಿಗಳಿಗೆ ಅನುಸಾರವಾಗಿರುವ ತಾಂತ್ರಿಕ ಅಂಶಗಳು ಇವರ ಕಲಾಕೃತಿಯಲ್ಲಿ ಕಂಡು ಬಂದರೆ, ನಂತರದ ದಿನಗಳಲ್ಲಿ ವಿಶಿಷ್ಟ ಬದಲಾವಣೆಗಳಿಗೆ ಒಳಪಟ್ಟಿವೆ. ಅಕಾಡಮಿಕ್ ಶೈಲಿಯಲ್ಲಿ ಇವರು ರಚಿಸಿದ ಚಿತ್ರಗಳಲ್ಲಿ ಬಣ್ಣದ

ಲೇಪನ, ರೇಖಾ ವಿನ್ಯಾಸ, ನೆರಳು ಬೆಳಕಿನ ಪರಿಣಾಮ ಸಂಯೋಜನಾ ರೀತಿಗಳು ಒಂದೇ ಪದ್ಧತಿಯನ್ನು ಅನುಸರಿಸಿದಂತೆ ಏಕತಾನತೆಯಿಂದ ಕೂಡಿವೆ. ಆದರೆ ಎಪ್ಪತ್ತರ ದಶಕದ ಹೊತ್ತಿಗೆ ಇವರು ಆಕಾಡಮಿಕ್ ರಚನಾ ವಿಧಾನದ ತಾಂತ್ರಿಕ ಅಂಶಗಳನ್ನು ಬದಿಗೊತ್ತಿ ಪಾಶ್ಚಾತ್ಯ ನವ್ಯಶೈಲಿಯ ತಾಂತ್ರಿಕತೆಯನ್ನು ಹೆಚ್ಚಾಗಿ ಮೈಗೂಡಿಸಿಕೊಂಡಿರುವುದು ತಿಳಿದು ಬರುತ್ತದೆ. ಪಾಶ್ಚಾತ್ಯ ರಚನಾ ವಿಧಾನದ ತಾಂತ್ರಿಕತೆಯಲ್ಲಿ ಯಾವುದೇ ನಿರ್ಧಿಷ್ಟವಾಗಿರುವ ಮಾರ್ಗಸೂಚಿಗಳಿರದೇ ಕಲಾವಿದನ ಭಾವನಾತ್ಮಕ ನಿಲುವು, ತಕ್ಷಣದ ಪ್ರತಿಕ್ರಿಯೇ ಅಭಿವ್ಯಕ್ತಿ ಸ್ವಾತಂತ್ರ್ಯದ ಹಿನ್ನೆಲೆಯಲ್ಲಿ ಚಿತ್ರ ಕಲಾವಿದನು ತನ್ನ ಕೃತಿಯನ್ನು ರಚಿಸುತ್ತ ಹೋಗುತ್ತಾನೆ. ಇಲ್ಲಿ ಚಿತ್ರದ ಆಕಾರ, ಸಂಯೋಜನೆ, ಬಣ್ಣ, ರೇಖೆ, ಸ್ಥಳ ವಿಂಗಡಣೆಗಳಂತಹ ಅಂಶಗಳು ಹೀಗೆ ಇರಬೇಕೆಂಬ ನಿರ್ಬಂಧಗಳಿಲ್ಲ. ಆದರೆ ಸಮತೋಲನದ ಅಂಶ ಮಾತ್ರ ಇಲ್ಲಿ ಪ್ರಾಮುಖ್ಯತೆ ಪಡೆದುಕೊಳ್ಳುತ್ತದೆ. ಪಾಟೀಲರು ಇಂತಹ ತಾಂತ್ರಿಕ ಅಂಶಗಳನ್ನೊಳಗೊಂಡ ಹಲವಾರು ಕೃತಿಗಳನ್ನು ರಚಿಸಿದ್ದಾರೆ. ಮಹಿಳೆಯರು ಗ್ರಾಮೀಣ ಪರಿಸರ, ಪರಂಪರೆ, ಅಮೂರ್ತ ಚಿತ್ರಗಳು, ವ್ಯಕ್ತಿಚಿತ್ರಗಳು, ಭಾವಚಿತ್ರಗಳು, ದಂಪತಿಯರು, ಪ್ರೇಮಿಗಳು ಹೀಗೆ ಅನೇಕ ವಿಷಯಗಳಿಗೆ ಸಂಬಂಧಿಸಿದ ಕಲಾಕೃತಿಗಳಲ್ಲಿಯೂ ಇವರು ತಮ್ಮದೇ ಆದ ವಿಶಿಷ್ಟ ತಾಂತ್ರಿಕತೆ ಬಳಸಿದ್ದಾರೆ. ಸರಳವಾಗಿರುವ ಮತ್ತು ಸಾಂಕೇತಿಕವಾಗಿರುವ ಆಕಾರಗಳು, ಚಲನಾತ್ಮಕ ರೇಖೆಗಳು, ತಂಪುವರ್ಣಗಳು, ಅಮೂರ್ತ ವಿನ್ಯಾಸಗಳು, ಸಹಜವಾಗಿ ಹರಿಬಿಟ್ಟ ಬಣ್ಣಗಳು, ಜನಪದ ಚಿತ್ರಕಲೆಯ ಸಂಕೇತಗಳು, ಬೇರೆ ಬೇರೆ ರೀತಿಯಲ್ಲಿ ಉಂಟು ಮಾಡಿದ ಮೈವಳಿಕೆಗಳು ಇವರ ಕಲಾ ತಾಂತ್ರಿಕತೆಯ ಪ್ರಮುಖ ಅಂಶಗಳಾಗಿವೆ ಎಂಬುದನ್ನು ಕಂಡುಕೊಳ್ಳಲಾಗಿದೆ.

ಇವರು ತಮ್ಮ ಕಲೆಯ ತಾಂತ್ರಿಕ ಅಂಶಗಳನ್ನು ಕೇವಲ ಒಂದು ಶೈಲಿಯ ಪ್ರಭಾವದಿಂದ ಅಳವಡಿಸಿಕೊಂಡಿರದೇ ಹಲವಾರು ಕಲಾಪ್ರಕಾರಗಳ ಉತ್ತಮಿಕೆಗಳನ್ನು ಸಮ್ಮಿಶ್ರಣ ಮಾಡಿಕೊಂಡಿದ್ದಾರೆ. ಚಿತ್ರ ವಿಷಯಕ್ಕೆ ಪಾರಂಪರಿಕ ಅಂಶ, ಆಕಾರಗಳ ನಿರೂಪಣೆಗೆ ಜನಪದ ಚಿತ್ರಶೈಲಿ, ಸಂಯೋಜನೆಗೆ ಆಧುನಿಕ ಪಾಶ್ಚಾತ್ಯ ಶೈಲಿಗಳು, ಬಣ್ಣಲೇಪನಕ್ಕೆ ಭಾರತೀಯ ಪಾರಂಪರಿಕ ಚಿತ್ರಕಲೆಯ ತಾಂತ್ರಿಕ ಅಂಶಗಳನ್ನು ಬಳಸಿಕೊಂಡು ಪರಿಣಾಮಕಾರಿಯಾದ ಕಲಾಕೃತಿಗಳನ್ನು ಇವರು ಚಿತ್ರಿಸುತ್ತಿದ್ದಾರೆ. ವ್ಯಕ್ತಿ ಚಿತ್ರ ಹಾಗೂ ಭಾವಚಿತ್ರ ರಚನೆಯಲ್ಲಿ ಅಕಾಡಮಿಕ್ ಶೈಲಿಯ ಜೊತೆಗೆ, ಭಾರತೀಯ ಪಾರಂಪರಿಕ ಪದ್ಧತಿ, ಪಾಶ್ಚಾತ್ಯ ಆಧುನಿಕ ಶೈಲಿಗಳ ತಾಂತ್ರಿಕ ಅಂಶಗಳನ್ನು ಬಳಸಿಕೊಂಡಿರುವುದು ಕಂಡು ಬರುತ್ತದೆ. ಹೀಗೆ ಪಾಟೀಲರ ಕಲಾಕೃತಿಯ ತಾಂತ್ರಿಕತೆಯ ಅಂಶಗಳನ್ನು ಕುರಿತು ಈ ಅಧ್ಯಾಯದಲ್ಲಿ ಚರ್ಚಿಸಲಾಗಿದೆ. ಯಾವುದೇ ಕಲಾವಿದನನ್ನು ಗುರುತಿಸುವುದು ಆತನ ಕಲಾಶೈಲಿಯಿಂದ ಹಾಗಾಗಿ ಕಲೆಯಲ್ಲಿ ಶೈಲಿಗೆ

ಬಹುಮುಖ್ಯ ಪಾತ್ರವಿದೆ. ಕಲಾಶೈಲಿಯು ಕಲಾವಿದನ ಅನುಭವ, ಪಕ್ವತೆ, ಪರಿಪೂರ್ಣತೆ, ವಿಶಿಷ್ಟತೆ, ಸೃಜನಶೀಲತೆ, ವ್ಯಕ್ತಿತ್ವ, ಪ್ರಭಾವ, ಪ್ರೇರಣೆ ಮತ್ತು ತಾಂತ್ರಿಕತೆಯಂತಹ ಅಂಶಗಳನ್ನು ತಿಳಿಯಲು ಸಹಕಾರಿಯಾಗಿದೆ. ಎಂ.ಬಿ.ಪಾಟೀಲರು ಕರ್ನಾಟಕದ ಕಲಾಕ್ಷೇತ್ರದಲ್ಲಿ ತಮ್ಮ ವಿಶಿಷ್ಟ ಶೈಲಿಯಿಂದಾಗಿಯೇ ಪ್ರಖ್ಯಾತರಾಗಿದ್ದಾರೆ. ಕಲಾವಿದನು ಕಲಾಶೈಲಿಯೊಂದನ್ನು ರೂಪಿಸಿಕೊಳ್ಳುವಾಗ ವಿವಿಧ ರೀತಿಯ ಪ್ರಭಾವ, ಪ್ರೇರಣೆ, ಅನುಭವ, ಸೃಜನಶೀಲತೆಯಂತಹ ಸಂಗತಿಗಳು ಪರಿಣಾಮಕಾರಿಯಾದ ಪಾತ್ರವಹಿಸುತ್ತವೆ. ಪಾಟೀಲರ ಕಲಾಶೈಲಿಯು ಅಂತಹ ಹಿನ್ನೆಲೆಗಳಿಂದ ರುಪುಗೊಂಡಿರುವುದು ಅವರ ಕೃತಿಗಳಿಂದ ಕಂಡುಬರುತ್ತದೆ.

ಕಲಾಗುರು ದಂಡಾವತಿಮಠ ಅವರ ಪ್ರಭಾವ, ಮುಂಬೈನಲ್ಲಿದ್ದ ಅಕಾಡಮಿಕ ಶೈಲಿಯ ಪ್ರಬಾವ, ಪಾಶ್ಚಾತ್ಯ ನವ್ಯ ಶೈಲಿಗಳ ಪ್ರಭಾವ, ಗ್ರಾಮೀಣ ಜನಪದ ಚಿತ್ರಕಲೆಗಳ ಪ್ರಭಾವ, ಭಾರತೀಯ ಪಾರಂಪರಿಕ ಚಿತ್ರಗಳ ಪ್ರಭಾವ ಮುಂತಾದವುಗಳ ಉತ್ತಮಿಕೆಯ ಅಂಶಗಳಿಂದ ಪಾಟೀಲರ ಕಲಾಶೈಲಿ ರೂಪುಗೊಂಡಿದೆ. ಇಂತಹ ವಿವಿಧ ಶೈಲಿಗಳ ಪ್ರಭಾವಗಳಿದ್ದರೂ ಪಾಟೀಲರ ಕಲಾಶೈಲಿ ಇಂದಿಗೂ ಕರ್ನಾಟಕದಲ್ಲಿ ಪ್ರತ್ಯೇಕವಾಗಿ ವಿಶಿಷ್ಟ ರೀತಿಯಿಂದ ಗುರುತಿಸಲ್ಪಡುತ್ತಿದೆ. ವ್ಯಕ್ತಿಚಿತ್ರ, ಭಾವಚಿತ್ರ, ಸಂಯೋಜನಾ ಚಿತ್ರ, ಅಮೂರ್ತ ಚಿತ್ರ, ನಿಸರ್ಗಚಿತ್ರ, ಸ್ಥಿರಚಿತ್ರ, ಕೋಲಾಜ್, ಟ್ಯಾಬ್ಲೋ, ಭಿತ್ತಿ ಶಿಲ್ಪ ಹೀಗೆ ಯಾವುದೇ ಕಲಾಕೃತಿ ಇರಲಿ ಅಲ್ಲಿ ಪಾಟೀಲರ ವೈಯಕ್ತಿಕ ಶೈಲಿ ಕಂಡು ಬರುತ್ತದೆ. ಇಂತಹ ಅಂಶಗಳನ್ನು ಈ ಅಧ್ಯಾಯದಲ್ಲಿ ಚರ್ಚಿಸಲಾಗಿದೆ. ಹೀಗೆ ಐದು ಅಧ್ಯಾಯಗಳಲ್ಲಿ ವಿಶ್ಲೇಷಿಸಲ್ಪಟ್ಟ ಹಾಗೂ ಒಟ್ಟಾರೆ ಅಧ್ಯಯನದಿಂದ ಕಂಡುಕೊಂಡ ಕೆಲವು ಪ್ರಮುಖ ಫಲಿತಗಳು ಕೆಳಗಿನಂತಿವೆ.

೦೧. ಎಂ. ಬಿ. ಪಾಟೀಲರು ಬಾಲ್ಯದಿಂದಲೇ ಕಲೆಯ ಬಗ್ಗೆ ಆಸಕ್ತಿ ಉಳ್ಳವರಾಗಿದ್ದು ಮನೆಯವರ ವಿರೋಧದ ನಡುವೆಯೂ ಮುಂಬೈನಲ್ಲಿ ಕಲಾಶಿಕ್ಷಣವನ್ನು ಪೂರೈಸಿ ಬಂದಿರುವುದು ಮಹತ್ವದ್ದಾಗಿದೆ.

೦೨. ಎಂ. ಬಿ. ಪಾಟೀಲರು ವಾರ್ತಾ ಮತ್ತು ಪ್ರಚಾರ ಇಲಾಖೆಯಲ್ಲಿದ್ದುಕೊಂಡು ವ್ಯಂಗ್ಯಚಿತ್ರಗಳನ್ನು ರಚಿಸುತ್ತಿದ್ದರೂ. ಶುದ್ಧಕಲೆಯ ಅಂಶಗಳನ್ನೊಳಗೊಂಡ ಕಲಾಕೃತಿಗಳನ್ನು ರಚಿಸುವ ಮೂಲಕ ಕರ್ನಾಟಕದ ಕಲಾಕ್ಷೇತ್ರಕ್ಕೆ ಗಮನಾರ್ಹ ಕೊಡುಗೆ ನೀಡಿದ್ದಾರೆ.

೦೩. ಎಂ. ಬಿ. ಪಾಟೀಲರು ವೃತ್ತಿಯಲ್ಲಿ ಸರಕಾರಿ ನೌಕರರಾಗಿದ್ದರೂ ಪ್ರವೃತ್ತಿಯಲ್ಲಿ ಒಬ್ಬ ಶ್ರೇಷ್ಠ ಕಲಾವಿದನ ಮನೋಧರ್ಮಗಳನ್ನು ಅಳವಡಿಸಿಕೊಂಡವರು. ಹಾಗಾಗಿ ಕಲಾಕ್ಷೇತ್ರದಲ್ಲಿ ತಮ್ಮದೇ ಆದ ವಿಶಿಷ್ಟ ಸಾಧನೆ ಮಾಡಿದ್ದಾರೆ.

೦೪. ಹುಬ್ಬಳ್ಳಿಯಲ್ಲಿ ಎಂ. ಬಿ. ಪಾಟೀಲರು ಸುಭಾಷ ಕ್ಷತ್ರಿ ಮತ್ತು ಕೆ.ಆರ್.ಸುಬ್ಬಣ್ಣ ಇವರ ಜೊತೆಗೂಡಿ ತ್ರಿವಳಿ ಎಂಬ ಕಲಾಗುಂಪು ರಚಿಸಿಕೊಂಡು ರಾಜ್ಯ ಮತ್ತು ಹೊರರಾಜ್ಯಗಳಲ್ಲಿ ಕಲಾ ಚಟುವಟಿಕೆ ಹಮ್ಮಿಕೊಳ್ಳತೊಡಗಿದ್ದು ಇವರ ಕಲಾಬದುಕಿನ ಮುಖ್ಯ ತಿರುವು ಎಂದು ಹೇಳಬಹುದು.

೦೫. ಪಾಟೀಲರು ಕಲಾ ಬದುಕಿನುದ್ದಕ್ಕೂ ಕೆಲವು ಆಸಕ್ತಿದಾಯಕವಾದ ಚಿತ್ರಗಳನ್ನು ಪದೇ ಪದೇ ರಚಿಸುತ್ತ ಬಂದಿದ್ದಾರೆ. ಅವುಗಳಲ್ಲಿ ಪ್ರಸಿದ್ಧ ವ್ಯಕ್ತಿಗಳ ಭಾವಚಿತ್ರ, ಗ್ರಾಮೀಣ ಪರಿಸರ, ಸಂಸ್ಕೃತಿ, ಗಂಡು ಹೆಣ್ಣಿನ ಸಂಬಂಧ, ಮಹಿಳೆಯ ಬದುಕು ಬವಣೆಗಳು, ಸ್ತ್ರೀ ಸ್ವಾತಂತ್ರ್ಯ, ನಿಸರ್ಗ, ನಗ್ನತೆ, ಸಂಭೋಗ, ಚಿಂತನೆ, ಕಾಮ, ಪ್ರೇಮ, ವಿರಹ, ಕನಸು ಮುಂತಾದ ವಿಷಯಗಳು ಇವರ ಮೆಚ್ಚಿನ ವಿಷಯಗಳಾಗಿದ್ದು ಇವುಗಳನ್ನು ನಿರಂತರ ಚಿತ್ರಿಸಿದ್ದಾರೆ.

೦೬. ಪಾಟೀಲರು ಕೇವಲ ಚಿತ್ರಕಲೆ ಮಾತ್ರವಲ್ಲದೆ ಭಿತ್ತಿಚಿತ್ರ, ಭಿತ್ತಶಿಲ್ಪ, ವುಡ್ ಬರ್ನಿಂಗ್, ಕೋಲಾಜ್, ಟ್ಯಾಬ್ಲೋ ಕಲಾಕೃತಿಗಳನ್ನು ರಚಿಸಿದ್ದಾರೆ. ಅಲ್ಲದೆ ಇವರು ತಮ್ಮ ಕಲಾಕೃತಿಗಳನ್ನು ಹಲವಾರು ಪ್ರಮುಖ ಉದ್ದೇಶಗಳ ಹಿನ್ನೆಲೆಯಲ್ಲಿಯೂ ರಚನೆ ಮಾಡಿದ್ದಾರೆ.

೦೭. ಪಾಟೀಲರು ಪ್ರಮುಖ ವ್ಯಕ್ತಿಗಳಿಗೆ, ಅಧಿಕಾರಿಗಳಿಗೆ, ಸಾಮಾನ್ಯರಿಗೆ, ಚಿತ್ರ ರಚನೆ ಮಾಡಿಕೊಟ್ಟಿದ್ದಾರಲ್ಲದೆ ಪತ್ರಿಕೆಗಳಿಗೆ, ಗ್ರಂಥಗಳಿಗೆ, ಮಠಗಳಿಗೆ, ಮಂದಿರಗಳಿಗೆ, ಮಸೀದಿಗಳಿಗೆ, ವಾಣಿಜ್ಯ ಮಳಿಗೆಗಳಿಗೆ, ಮನೆಗಳಿಗೆ, ಚಿತ್ರಮಂದಿರಗಳಿಗೆ, ನಾಟಕ, ಚಲನಚಿತ್ರ, ಧಾರ್ಮಿಕ ಉತ್ಸವ, ಜನಪದ ಆಚರಣೆ. ಜಾಹೀರಾತು ಮುಂತಾದ ಉದ್ದೇಶಗಳಿಗೆ ಚಿತ್ರ ರಚನೆ ಮಾಡಿಕೊಟ್ಟಿದ್ದಾರೆ.

೦೮. ಪಾಟೀಲರು ಕಲಾಕೃತಿ ರಚನೆಯಲ್ಲಿ ಎಂದಿಗೂ ತಮ್ಮತನ, ಪರಂಪರೆ, ಮಣ್ಣಿನ ಸೊಗಡು, ಸಾಮಾಜಿಕತೆ, ದೇಶಿಯತೆಗಳನ್ನು ಬಿಟ್ಟುಕೊಟ್ಟವರಲ್ಲ ಎಂಬುದನ್ನು ಅವರ ಕಲಾಕೃತಿಗಳ ಅಧ್ಯಯನದಿಂದ ಕಂಡುಕೊಳ್ಳಲಾಗಿದೆ.

೦೯. ಪಾಟೀಲರು ಭಾವಚಿತ್ರ ಮತ್ತು ವ್ಯಕ್ತಿ ಚಿತ್ರ ರಚನೆಯಲ್ಲಿ ವಿಶಿಷ್ಟ ಶೈಲಿಯನ್ನು ಅಳವಡಿಸಿಕೊಂಡವರು. ಕರ್ನಾಟಕದಲ್ಲಿ ಇಂದಿಗೂ ಅವರೊಬ್ಬ ಶ್ರೇಷ್ಠ ಭಾವಚಿತ್ರ ಕಲಾವಿದರಾಗಿ ಗುರುತಿಸಲ್ಪಟ್ಟಿಡುತ್ತಿದ್ದಾರೆ. ಅವರು ಭಾವಚಿತ್ರ ಅಥವಾ ವ್ಯಕ್ತಿಚಿತ್ರ ರಚಿಸುವಲ್ಲಿ ಎರಡು ವಿಧಾನಗಳನ್ನು ಅನುಸರಿಸಿದ್ದಾರೆ. ಮೊದಲ ವಿಧಾನದಲ್ಲಿ ರೂಪದರ್ಶಿಯನ್ನು ಎದುರಿಗೆ ಇಟ್ಟುಕೊಂಡು ಚಿತ್ರಿಸಿದರೆ, ಎರಡನೆಯ ವಿಧಾನದಲ್ಲಿ ರೂಪದರ್ಶಿಯ ಛಾಯಾಚಿತ್ರಣದ ಆಧಾರದ ಮೇಲೆ ಚಿತ್ರಿಸಿದ್ದಾರೆ.

೧೦. ಪಾಟೀಲರು ಕಲಾಕೃತಿ ರಚನೆಯಲ್ಲಿ ಎಲ್ಲ ಬಗೆಯ ವರ್ಣ ಹಾಗೂ ಮಾಧ್ಯಮಗಳನ್ನು ದುಡಿಸಿಕೊಂಡಿದ್ದಾರೆ ಜಲವರ್ಣ, ತೈಲವರ್ಣ, ಆಕ್ರಾಲಿಕ್, ಹುಡಿವರ್ಣ, ಟೆಂಪರಾವರ್ಣ, ಪೋಸ್ಟರ ವರ್ಣ, ಇಂಕ್ ವರ್ಣ, ಪೆನ್ಸಿಲ್, ಕ್ರೇಯಾನ್, ಮೇಣದ ವರ್ಣ, ಮಿಶ್ರವರ್ಣ, ಹೀಗೆ ಹತ್ತು ಹಲವು ವರ್ಣಗಳನ್ನು ಇವರು ಚಿತ್ರರಚನೆಗೆ ಬಳಸಿಕೊಂಡಿದ್ದಾರೆ. ಅದರಂತೆ ಚಿತ್ರಗಳನ್ನು ರಚಿಸಲು ಕಾಗದ, ರಟ್ಟು, ಕ್ಯಾನವಾಸ್, ಲೋಹ, ಮರ, ಗಾಜು, ಪ್ಲಾಸ್ಟರ, ಶಿಲೆ, ಮಣ್ಣು, ಮರ ಮುಂತಾದವುಗಳನ್ನು ಬಳಸಿಕೊಂಡಿದ್ದಾರಲ್ಲದೆ ಮನೆಯ ಗೋಡೆಗಳು, ಬಸ್ಸುಗಳು, ಚಕ್ಕಡಿಗಳು, ಗುಡಿಸಲುಗಳು ಸಹಿತ ಇವರ ಚಿತ್ರ ರಚನೆಗೆ ಆಧಾರಗಳಾಗಿವೆ ಎಂಬುದನ್ನು ಕಂಡುಕೊಳ್ಳಲಾಗಿದೆ.

ಹೀಗೆ ಅನೇಕ ಮಹತ್ವದ ಅಂಶಗಳನ್ನು ಒಳಗೊಂಡಿದ್ದರೂ ಈ ಅಧ್ಯಯನವು ಎಂ. ಬಿ. ಪಾಟೀಲರ ಕಲೆ ಹಾಗೂ ಕಲಾ ಬದುಕನ್ನು ಕುರಿತಾಗಿರುವ ಸಮಗ್ರ ಅಂಶಗಳನ್ನು ಒಳಗೊಂಡ ಅಧ್ಯಯನ ವಲ್ಲ ಎಂಬ ಮಾತನ್ನು ಇಲ್ಲಿ ಹೇಳಬಹುದು. ಎಂ. ಬಿ. ಪಾಟೀಲರ ಕಲೆ, ಕಲಾಕೃತಿ, ಕಲಾ ಬದುಕು ಕಾಲದಿಂದ ಕಾಲಕ್ಕೆ ಹೇಗೆ ಬದಲಾಗುತ್ತ ಬಂದಿವೆ ಎಂಬುದನ್ನು ಕಂಡುಕೊಳ್ಳಲು ನಡೆಸಿದ ಮೊದಲ ಗಮನಾರ್ಹ ಅಧ್ಯಯನ ಇದಾಗಿದ್ದು, ಇನ್ನೂ ಹಲವಾರು ದೃಷ್ಟಿಕೋನಗಳಿಂದ ಈ ಅಧ್ಯಯನವನ್ನು ಮುಂದುವರೆಸುವವರಿಗೆ ಇದೊಂದು ಪ್ರಮುಖ ಆಕರ ಗ್ರಂಥವಾಗಿ, ಮಾರ್ಗಸೂಚಿಯಾಗಿ ಸಹಾಯಕವಾದರೆ ಅದುವೇ ಸಾರ್ಥಕತೆ ಎಂದು ನಮ್ರತೆಯಿಂದ ಹೇಳಬಯಸುತ್ತೇನೆ.

* * * * *

## ಸಂಕ್ಷೇಪಗಳು

| | | |
|---|---|---|
| ಕ.ಲ.ಕ.ಅ | : | ಕರ್ನಾಟಕ ಲಲಿತಕಲಾ ಅಕಾಡಮಿ ಬೆಂಗಳೂರು |
| ಕೇ.ಲ.ಕ.ಅ | : | ಕೇಂದ್ರ ಲಲಿತಕಲಾ ಅಕಾಡಮಿ ದೆಹಲಿ |
| ಕ.ವಿ.ವಿ.ಹಂ | : | ಕನ್ನಡ ವಿಶ್ವವಿದ್ಯಾಲಯ ಹಂಪಿ |
| ಕ.ವಿ.ವಿ.ಧಾ | : | ಕನ್ನಡ ವಿಶ್ವವಿದ್ಯಾಲಯ ಧಾರವಾಡ |
| ಬೆ.ವಿ.ವಿ | : | ಬೆಂಗಳೂರು ವಿಶ್ವವಿದ್ಯಾಲಯ |
| ಮ.ವಿ.ವಿ | : | ಮಂಗಳೂರು ವಿಶ್ವವಿದ್ಯಾಲಯ |
| ಮೈ.ವಿ.ವಿ | : | ಮೈಸೂರು ವಿಶ್ವವಿದ್ಯಾಲಯ |
| ಕು.ವಿ.ವಿ | : | ಕುವೆಂಪು ವಿಶ್ವವಿದ್ಯಾಲಯ |
| ಗು.ವಿ.ವಿ | : | ಗುಲಬರ್ಗಾ ವಿಶ್ವವಿದ್ಯಾಲಯ |
| ಚಿ.ಕ.ಪ | : | ಚಿತ್ರಕಲಾ ಪರಿಷತ್ತು |
| ಎಂ.ಬಿ.ಪಾ | : | ಮಲ್ಲಿಕಾರ್ಜುನ, ಭೀಮನಗೌಡ. ಪಾಟೀಲ |
| ತ್ರಿವಳಿ | : | ಪಾಟೀಲರು ಹುಬ್ಬಳ್ಳಿಯಲ್ಲಿ ಮೂರು ಜನ ಕಲಾವಿದರೊಂದಿಗೆ ಸ್ಥಾಪಿಸಿದ ಕಲಾಗುಂಪು |
| ಸಪ್ತರಂಗ | : | ಏಳುಜನ ಕಲಾವಿದರ ಗುಂಪು |
| ಜೆ. ಜೆ. ಕಲಾ ಶಾಲೆ | : | ಜೆಮ್‌ಸೇಟ್ ಜಿ, ಜೇಜಿಬಾಯಿ ಕಲಾಶಾಲೆ, |
| ಪಿ.ಎ.ಜಿ | : | ಪ್ರೊಗ್ರೇಸಿವ್ ಆರ್ಟ್ ಗ್ರೂಫ್ ಮುಂಬೈ |
| ಶಿ.ಚ.ದೆ | : | ಶಿಲ್ಪಚಕ್ರ ದೆಹಲಿ |
| ಚೊ.ಮ.ಮ. | : | ಚೋಳಮಂಡಲ ಮದ್ರಾಸ್ |
| ಪಿ.ಎ.ಜಿ.ಕೆ | : | ಪ್ರೊಗ್ರೇಸಿವ್ ಆರ್ಟಗ್ರೂಫ್ ಕಲ್ಕತ್ತಾ |
| ವಿ.ಕ.ಗದಗ | : | ವಿಜಯ ಕಲಾಮಂದಿರ ಗದಗ |
| ಎಸ್.ಎಸ್.ಕೆ | : | ಸಿದ್ದೇಶ್ವರ ಕಲಾಮಹಾವಿದ್ಯಾಲಯ ವಿಜಾಪುರ |
| ವಾ.ಪ್ರ.ಇಲಾಖೆ | : | ವಾರ್ತಾ ಮತ್ತು ಪ್ರಚಾರ ಇಲಾಖೆ |
| ಕ.ಪು.ಪ್ರಾ.ಬೆಂ | : | ಕನ್ನಡ ಪುಸ್ತಕ ಪ್ರಾಧಿಕಾರ ಬೆಂಗಳೂರು |

* * * * *

# ವಕ್ತೃಗಳು

೦೧. **ಜೆ. ಎಸ್. ಖಂಡೇರಾವ್ :**

ರಾಜ್ಯ ಲಲಿತಕಲಾ ಅಕಾಡಮಿ ಅಧ್ಯಕ್ಷರು, ಬೆಂಗಳೂರು

೦೨. **ಜಿ. ಕೆ. ಪಾಟೀಲ :**

ವಿಧಾನ ಪರಿಷತ್ ಸದಸ್ಯರು, ಬೆಂಗಳೂರು

೦೩. **ಕೆ. ಟಿ. ಶಿವಪ್ರಸಾದ್ :**

ಹಿರಿಯ ಕಲಾವಿದರು, ಬೆಂಗಳೂರು

೦೪. **ಪುಂಚಿತ್ತಾಯ್ :**

ಹಿರಿಯ ಕಲಾವಿದರು, ಕಾಸರಗೋಡು

೦೫. **ಕೆ. ಎನ್. ರಾಮಚಂದ್ರನ್ :**

ಹಿರಿಯ ಕಲಾವಿದರು, ಬೆಂಗಳೂರು

೦೬. **ಕಮಲಾಬಾಯಿ ಪಾಟೀಲ :**

ಎಂ. ಬಿ. ಪಾಟೀಲರ ಅತ್ತಿಗೆ (ಹಿರಿಯಣ್ಣ ಶಿವನಗೌಡರ ಧರ್ಮಪತ್ನಿ)

೦೭. **ಬಸವರಾಜ. ಬುಳ್ಳಾ :**

ವಾರ್ತಾ ಮತ್ತು ಪ್ರಚಾರ ಇಲಾಖೆ, ಬೆಂಗಳೂರು

೦೮. **ಸಿ. ಬಿ. ಕಾಚಾಪೂರ :**

ಪ್ರಾಚಾರ್ಯರು, ಸಿದ್ದೇಶ್ವರ ಕಲಾಮಂದಿರ, ವಿಜಾಪೂರ

೦೯. **ಅಶೋಕ. ಅಕ್ಕಿ :**

ಹಿರಿಯ ಕಲಾವಿದರು, ಗದಗ

೧೦. **ಸೋಮಶೇಖರ ಸಾಲಿ :**

ರಾಜ್ಯ ಲಲಿತಕಲಾ ಅಕಾಡಮಿ, ಮಾಜಿ ಅಧ್ಯಕ್ಷರು

೧೧. **ವ್ಹಿ. ಜಿ. ಅಂದಾನಿ :**

ಪ್ರಾಚಾರ್ಯರು, ಐಡಿಯಲ್ ಫೈನ್ ಆರ್ಟ ಕಲಾಶಾಲೆ, ಗುಲಬರ್ಗಾ

೧೨. **ಎಲ್. ಶಿವಲಿಂಗಪ್ಪ :**

ಹಿರಿಯ ಕಲಾವಿದರು, ಮೈಸೂರು

೧೩. **ಪೀಟರ್ ಲೂಯಿಸ್ :**

ಹಿರಿಯ ಕಲಾವಿದರು, ಮಂಗಳೂರು

೧೪. **ವಿಜಯ ಸಿಂಧೂರ :**

ಹಿರಿಯ ಕಲಾವಿದರು, ಜಮಖಂಡಿ

೧೫. **ಅರವಿಂದ ಕಟ್ಟಿ :**

ಹಿರಿಯ ಕಲಾವಿದರು, ಕೋಲಾರ

೧೬. **ಎನ್. ಬಿ. ತೋಟಂಪುರ :**

ಪಾಟೀಲರ ಮಿತ್ರರು, ವಿಜಾಪೂರ

೧೭. **ಡಾ. ಎಸ್. ಸಿ ಪಾಟೀಲ :**

ಡೀನರು, ಲಲಿತಕಲಾ ನಿಕಾಯ,

ಕನ್ನಡ ವಿಶ್ವವಿದ್ಯಾಲಯ, ಹಂಪಿ

೧೮. **ಚನ್ನಣ್ಣ. ಇಜೇರಿ :**

ಪಾಟೀಲರ ಬಾಲ್ಯ ಸ್ನೇಹಿತರು, ತಿಕೋಟಾ

೧೯. **ಸಾಹೇಬಗೌಡ. ಪಾಟೀಲ :**

ಪಾಟೀಲರ ಕಿರಿಯ ಸಹೋದರ, ತಿಕೋಟಾ

೨೦. **ಗೌರಮ್ಮ. ಪಾಟೀಲ :**

ಪಾಟೀಲರ ಸೊಸೆ, ತಿಕೋಟಾ

೨೧. **ಬಾಬು. ಪಾಟೀಲ :**

ಪಾಟೀಲರ ಹಿರಿಯ ಸಹೋದರರ ಮಗ, ತಿಕೋಟಾ

೨೨. **ಜಯಶ್ರೀ. ಪಾಟೀಲ :**

ಪಾಟೀಲರ ಹಿರಿಯ ಸಹೋದರನ ಸೊಸೆ, ತಿಕೋಟಾ

೨೩. **ಕಾಂತು. ಪಾಟೀಲ :**

ಪಾಟೀಲರ ಹಿರಿಯ ಸಹೋದರರ ಮಗ, ತಿಕೋಟಾ.

* * * * *

# ಗ್ರಂಥಋಣ


೦೧. **ಆಲೇಖ್ಯ :** ಡಾ. ಅ. ಲ. ನರಸಿಂಹನ್

ಸಂಯೋಜಿತ ಬೆಂಗಳೂರು – ೧೯೯೯

೦೨. **ಎಸ್. ಎಸ್. ಮುನೋಳಿ :** ಮಮತಾ. ಜಿ. ಸಾಗರ

ಕರ್ನಾಟಕ ಲಲಿತಕಲಾ ಅಕಾಡೆಮಿ,

ಬೆಂಗಳೂರು–೧೯೯೮

೦೩. **ಕಲಾವಿದ ಹೆಬ್ಬಾರರ ರೇಖಾಲಾವಣ್ಯ :** ವ್ಯಾಸರಾಯ ಬಲ್ಲಾಳ

ನವಕರ್ನಾಟಕ ಪ್ರಕಾಶನ, ಬೆಂಗಳೂರು–೧೯೯೯

೦೪. **ಕಲೆ ಎಂದರೇನು ? :** ಸಿ.ಪಿ.ಕೆ

ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು–೨೦೦೦

೦೫. **ಕಲಾವಿದ ಎಂ.ಎ.ಚಟ್ಟಿಯವರ**

**ಜೀವನ ಕಲಾಕೃತಿಗಳು :** ಡಾ. ಲಕ್ಷ್ಮೀದೇವಿ ಗವಾಯಿ

ಒಂದು ಅಧ್ಯಯನ

ನಾಗನೂರು ರುದ್ರಾಕ್ಷಿಮಠ

ಬೆಳಗಾಂವಿ–೨೦೦೩

೦೬. **ಕಲಾ ಪ್ರಪಂಚ :** ಡಾ. ಶಿವರಾಮ ಕಾರಂತ

ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ–೧೯೭೮

೦೭. **ಕನ್ನಡ ವಿಶ್ವಕೋಶ ಸಂಪುಟ : ೪ :** ಸಂ: ಹಾ. ಮಾ. ನಾಯಕ

ಕನ್ನಡ ಅಧ್ಯಯನ ಸಂಸ್ಥೆ

ಮೈಸೂರು ವಿಶ್ವವಿದ್ಯಾಲಯ,

ಮೈಸೂರು–೧೯೭೨

೦೮ **ಕಲಾನುಭವ :** ವೀ. ಸೀತರಾಮಯ್ಯ
ಬೆಂಗಳೂರು ವಿಶ್ವವಿದ್ಯಾಲಯ,
ಬೆಂಗಳೂರು–೧೯೭೬

೦೯. **ಕಲಾ ಸಂವೇದನೆಯ ಒಳನೋಟಗಳು :** ವೀ. ಸೀತರಾಮಯ್ಯ
ಕರ್ನಾಟಕ ಲಲಿತಕಲಾ ಅಕಾಡೆಮಿ,
ಬೆಂಗಳೂರು–೧೯೯೭

೧೦. **ಕಲಾ ಕೋಶ :** ಸಂ: ಎನ್. ಮರಿಶಾಮಾಚಾರ್
ಕರ್ನಾಟಕ ಲಲಿತಕಲಾ ಅಕಾಡೆಮಿ,
ಬೆಂಗಳೂರು–೧೯೯೪

೧೧. **ಕರ್ನಾಟಕದ ಆಧುನಿಕ ಶಿಲ್ಪಕಲೆ :** ಕೆ. ವಿ. ಸುಬ್ರಮಣ್ಯಂ
ಕರ್ನಾಟಕ ಲಲಿತಕಲಾ ಅಕಾಡೆಮಿ,
ಬೆಂಗಳೂರು–೧೯೯೪

೧೨. **ಕರ್ನಾಟಕದ ಜನಪದ ಚಿತ್ರಕಲೆ :** ಡಾ. ಎಸ್. ಸಿ. ಪಾಟೀಲ
ವೀರಶೈವ ಅಧ್ಯಯನ ಸಂಸ್ಥೆ,
ಶ್ರೀ ಜ. ತೋಂಟದಾರ್ಯ ಸಂಸ್ಥಾನಮಠ,
ಗದಗ–೧೯೯೩

೧೩. **ಕರ್ನಾಟಕದ ಸಂಸ್ಕೃತಿ ಸಮೀಕ್ಷೆ :** ಡಾ. ಎಚ್. ತಿಪ್ಪೇರುದ್ರಸ್ವಾಮಿ
ಮೈಸೂರು–೧೯೯೨

೧೪. **ಕಲೆಗಳಲ್ಲಿ ಸಂಸ್ಕೃತಿ ಹಾಗೂ ಪರಂಪರೆ :** ಕೆ. ವಿ. ಸುಬ್ರಮಣ್ಯಂ
ಸ್ಪಂಧನ ಚಿತ್ರ ಕಲಾವಿದರ ಯುವ ಬಳಗ
ಬೆಂಗಳೂರು–೧೯೮೯

೧೫. **ಗ್ರಾಫಿಕ್ ಕಲೆ :** ರವಿಕುಮಾರ. ಕಾಶಿ
ಕರ್ನಾಟಕ ಲಲಿತಕಲಾ ಅಕಾಡೆಮಿ,
ಬೆಂಗಳೂರು-೨೦೦೦

೧೬. **ಚಿತ್ರ ಚಿತ್ತ :** ಚಿ. ಸು. ಕೃಷ್ಣಶೆಟ್ಟಿ
ಇಳಾ ಪ್ರಕಾಶನ, ಬೆಂಗಳೂರು-೨೦೦೦

೧೭. **ಚಿತ್ರಕಲಾವಿದ ಜೆ. ಎಸ್. ಖಂಡೇರಾವ್ :** ಮಲ್ಲಿಕಾರ್ಜುನ ಭಾಗೋಡಿ
ಒಂದು ಅಧ್ಯಾಯನ
ಅಪ್ರಕಟಿತ ಪಿಹೆಚ್.ಡಿ. ಮಹಾಪ್ರಬಂಧ
ಕನ್ನಡ ವಿಶ್ವವಿದ್ಯಾಲಯ, ಹಂಪಿ-೨೦೦೨

೧೮. **ಚಿತ್ರಾಕ್ಷಿ :** ಸಂ. ಡಾ. ಎಸ್. ಸಿ. ಪಾಟೀಲ
ವಜ್ರ ಮಹೋತ್ಸವ ಸ್ಮರಣ ಸಂಚಿಕೆ
ಹಾಲಭಾವಿ ಸ್ಕೂಲ್ ಆಫ್ ಆರ್ಟ್,
ಧಾರವಾಡ-೧೯೯೫

೧೯. **ಚಿತ್ರಕಲೆ ಮತ್ತು ಮನೋವಿಕಾಸ :** ಡಾ. ಸಿ. ಆರ್. ಚಂದ್ರಶೇಖರ
ಕರ್ನಾಟಕ ಲಲಿತಕಲಾ ಅಕಾಡೆಮಿ
ಬೆಂಗಳೂರು-೧೯೯೪

೨೦. **ತಂಬೂರಿ (ಸ್ಮರಣ ಸಂಚಿಕೆ) :** (ಸಂ) ಡಾ. ಜಿ. ಎಸ್. ಶಿವರುದ್ರಪ್ಪ
ಅಶ್ವತ್ ಅಭಿನಂದನ ಸಮಿತಿ
ಬೆಂಗಳೂರು-೧೯೯೯

೨೧. **ನಮ್ಮ ನಾಡು ಕರ್ನಾಟಕ :** ಡಾ. ಎಚ್. ಎಸ್. ಗೋಪಾಲರಾವ್
ನವಕರ್ನಾಟಕ ಪ್ರಕಾಶನ್, ಬೆಂಗಳೂರು-೧೯೯೭

೨೨. **ನಿಜದ ನೆಲೆ :** (ಸಂ). ಡಾ. ಎಸ್. ಸಿ. ಪಾಟೀಲ
ವೈರಾಗ್ಯದ ಮಲ್ಲಣಾರ್ಯ ಪ್ರಕಾಶನ
ಬಾಗಲಕೋಟ-೨೦೦೩

೨೩. **ಪಾಪ್ ಕಲೆ :** ರವಿಕುಮಾರ. ಕಾಶಿ
ಕರ್ನಾಟಕ ಲಲಿತಕಲಾ ಅಕಾಡೆಮಿ
ಬೆಂಗಳೂರು-೧೯೯೬

೨೪. **ಪಿ. ಆರ್. ತಿಪ್ಪೇಸ್ವಾಮಿ :** ಡಾ. ಜಿ. ಎಸ್. ಪರಮಶಿವಯ್ಯ
ಕರ್ನಾಟಕ ಲಲಿತಕಲಾ ಅಕಾಡೆಮಿ
ಬೆಂಗಳೂರು-೧೯೯೪

೨೫. **ಪಿ. ಸುಬ್ಬರಾವ್ :** ಎಂ. ಎಸ್. ನಂಜುಂಡರಾವ್
ಕರ್ನಾಟಕ ಲಲಿತಕಲಾ ಅಕಾಡೆಮಿ
ಬೆಂಗಳೂರು-೧೯೯೪

೨೬. **ಪೋಸ್ಟ್ ಮಾಡರ್ನಿಸಂ :** ನೇಮಿರಾಜ. ಶೆಟ್ಟಿ
ಕರ್ನಾಟಕ ಲಲಿತಕಲಾ ಅಕಾಡೆಮಿ,
ಬೆಂಗಳೂರು-೧೯೯೫

೨೭. **ಫೋಟೋರಿಯಲಿಸಂ :** ಕೆ. ವಿ. ಸುಬ್ರಮಣ್ಯಂ
ಕರ್ನಾಟಕ ಲಲಿತಕಲಾ ಅಕಾಡೆಮಿ
ಬೆಂಗಳೂರು-೧೯೯೫

೨೮. **ಭಾರತೀಯ ಚಿತ್ರಕಲೆ :** ಡಾ. ಶಿವರಾಮ. ಕಾರಂತ
ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು

೨೯. **ಮನೆಯಂಗಳದಲ್ಲಿ ಮಾತುಕತೆ :** ಸಂ. ಮೋಹನ್ ವೆರ್ಣೇಕರ್
ಕನ್ನಡ ಮತ್ತು ಪುಸ್ತಕ ನಿರ್ದೇಶನಾಲಯ,
ಬೆಂಗಳೂರು-೨೦೦೩

೩೦. **ರೇಖಾ ಚಿತ್ರ :** ಸಂ. ಬಿ.ವಿ.ಕೆ. ಶಾಸ್ತ್ರಿ
ಕರ್ನಾಟಕ ಲಲಿತಕಲಾ ಅಕಾಡೆಮಿ
ಬೆಂಗಳೂರು-೧೯೯೧

೩೧. **ವರ್ಣಾವರಣ :** ಚಿ.ಸು. ಕೃಷ್ಣಶೆಟ್ಟಿ
ಚಿತ್ತಾರ ಪ್ರಕಾಶನ, ಬೆಂಗಳೂರು-೨೦೦೧

೩೨. **ವರ್ಣಸಂಚಯ :** ಡಾ. ಎಸ್. ಸಿ. ಪಾಟೀಲ
ವಿಜಯ ಚಿತ್ರಕಲಾ ಮಹಾವಿದ್ಯಾಲಯ.
ಇಲಕಲ್ಲ - ೨೦೦೧

೩೩. **ಶಿಲ್ಪಕಲೆ :** ವಿಜಯರಾವ್
ಕರ್ನಾಟಕ ಲಲಿತಕಲಾ ಅಕಾಡೆಮಿ
ಬೆಂಗಳೂರು-೧೯೯೬

೩೪. **ಶ್ರೀ ತಿಪ್ಪಾಜಪ್ಪನವರ ರೇಖಾಚಿತ್ರಗಳು :** ಕೆ. ಜ್ಞಾನೇಶ್ವರ. ಡಾ.ಅ.ಲ.ನರಸಿಂಹನ್
ಕರ್ನಾಟಕ ಲಲಿತಕಲಾ ಅಕಾಡೆಮಿ
ಬೆಂಗಳೂರು-೨೦೦೩

೩೫. **ಸಮಕಾಲೀನ ಕಲೆ :** ಸಂ. ಬಿ.ವಿ.ಕೆ. ಶಾಸ್ತ್ರೀ
ಕರ್ನಾಟಕ ಲಲಿತಕಲಾ ಅಕಾಡೆಮಿ
ಬೆಂಗಳೂರು-೧೯೮೭

೩೬. **ಸಂಯೋಜನೆ :** ಅ. ಲ. ನರಸಿಂಹನ್
ಸಂಯೋಜಿತ ಪ್ರಕಾಶನ
ಬೆಂಗಳೂರು-೧೯೫೭

೩೭. **ಸಮಕಾಲೀನ ಕಲೆ-೧ ವಿಕೃತರೂಪ :** ಸಂ. ಎಸ್. ಎನ್. ಚಂದ್ರಶೇಖರ
ಕರ್ನಾಟಕ ಲಲಿತಕಲಾ ಅಕಾಡೆಮಿ
ಬೆಂಗಳೂರು-೧೯೮೮

೩೮. **ಸೃಷ್ಟಿ :** ಡಾ. ಬಿ. ಕೆ. ಹಿರೇಮಠ
ಡಾ. ಬಿ. ಕೆ. ಹಿರೇಮಠ ಲೇಖನಗಳ ಗ್ರಂಥ
ವೈರಾಗ್ಯದ ಮಲ್ಲಣಾರ್ಯ ಪ್ರಕಾಶನ
ಬಾಗಲಕೋಟೆ-೨೦೦೩

೩೯. **ಸಾಹಿತ್ಯ-ಕಲೆಗಳಲ್ಲಿ ಪರಿವರ್ತನೆ ಮತ್ತು ಪ್ರಗತಿ :** ಸಂ. ಎಂ. ಎಚ್. ಕೃಷ್ಣಯ್ಯ
ಸಂಯುಕ್ತ ವೆದಿಕೆ, ಬೆಂಗಳೂರು-೧೯೯೧

೪೦. **ಸೌಂದರ್ಯ ಮತ್ತು ರಸಾಸ್ವಾದನೆ :** ಸಂ. ಎಂ. ಎಚ್. ಕೃಷ್ಣಯ್ಯ
ಕರ್ನಾಟಕ ಲಲಿತಕಲಾ ಅಕಾಡೆಮಿ
ಬೆಂಗಳೂರು-೧೯೮೯

೪೧. **ಕಲಾ ಪ್ರಪಂಚ :** ಸಂ. ಎಂ. ಎಚ್. ಕೃಷ್ಣಯ್ಯ
ವ್ಯಾಸಂಗ ವಿಸ್ತರಣ ಪ್ರಕಟಣ ವಿಭಾಗ
ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ-೧೯೭೮

೪೨. **ಕಲಾನುಭವ :** ವೀ. ಸೀತಾರಾಮಯ್ಯ
ಬೆಂಗಳೂರು ವಿಶ್ವವಿದ್ಯಾಲಯ, ಬೆಂಗಳೂರು-೧೯೭೬

೪೩. **ಕಲಾವಿದ ಹೆಬ್ಬಾರರ ರೇಖಾಲಾವಣ್ಯ :** ವ್ಯಾಸರಾಯ ಬಲ್ಲಾಳ
ನವಕರ್ನಾಟಕ ಪಬ್ಲಿಕೇಶನ್, ಬೆಂಗಳೂರು-೧೯೯೯

೪೪. **ಕಲಾಗುರು ದಂಡಾವತಿಮಠ :** ಬಿ. ಕೆ. ಹಿರೇಮಠ
ಕರ್ನಾಟಕ ಲಲಿತಕಲಾ ಅಕಾಡೆಮಿ,
ಬೆಂಗಳೂರು-೧೯೮೩

೪೫. **ಕರ್ನಾಟಕ ಇತಿಹಾಸ :** ಆರ್. ಎಸ್. ಪಂಚಮುಖಿ
ಕರ್ನಾಟಕ ಇತಿಹಾಸ ಸಂಶೋಧನಾ ಮಂಡಲ,
ಧಾರವಾಡ-೧೯೬೭

೪೬. **ಕಲೆ ಮತ್ತು ನಾನು :** ಎಂ.ಟಿ.ವಿ. ಆಚಾರ್ಯ
ಆಚಾರ್ಯ ಚಿತ್ರಕಲಾ ಭವನ,
ಬೆಂಗಳೂರು-೧೯೮೫

೪೭. **ಕಲೆಗಳಲ್ಲಿ ಸಂಸ್ಕೃತಿ ಹಾಗೂ ಪರಂಪರೆ :** (ಸಂ) ಆರ್. ಎ. ಶಾಂತರಾಜ
ಸ್ಪಂಧನ ಚಿತ್ರಕಲಾವಿದರ ಯುವಬಳಗ,
ಬೆಂಗಳೂರು-೧೯೯೫

೪೮. **ಚಿತ್ರಕಲಾ ಚಿಂತನೆ :** ಶಂಕರ. ಪಾಟೀಲ
ಪ್ರಗತಿ ಪ್ರಕಾಶನ, ಕಲಾಭವನ,
ಧಾವಣಗೇರಿ-೧೯೯೫

೪೯. **ಚಿತ್ರಕಲೆ ಮತ್ತು ಪೂರಕ ಕ್ಷೇತ್ರಗಳು :** (ಸಂ) ಡಾ. ಎಸ್. ಸಿ. ಪಾಟೀಲ
ಸ್ಕೂಲ್ ಆಫ್ ಆರ್ಟ ವಜ್ರಮಹೋತ್ಸವ ಸಮಿತಿ,
ಧಾರವಾಡ-೧೯೯೬

೫೦. **ಚಿತ್ರಕಲಾ ಪ್ರಪಂಚ :** (ಪ್ರ.ಸಂ) ಪಿ. ಆರ್. ತಿಪ್ಪೇಸ್ವಾಮಿ
ಕರ್ನಾಟಕ ಲಲಿತಕಲಾ ಅಕಾಡೆಮಿ,
ಬೆಂಗಳೂರು-೧೯೯೩

೫೧. **ಚಿತ್ರಕಲೆ :** ಅ. ನ. ಕೃಷ್ಣರಾಯ್
ಎಚ್. ವೆಂಕಟರಾಮಯ್ಯ ಆ್ಯಂಡ್ ಸನ್ಸ ವಿದ್ಯಾನಿಧಿ
ಬುಕ್ ಡಿಪೋ ಮೈಸೂರು-೧೯೨೦

೫೨. **ಜಿ. ಎಸ್. ಶೆಣೈ :** ಡಾ. ಕಾಸರವಳ್ಳಿ, ಕೆ. ಜಿ. ರವೀಶ
ಕರ್ನಾಟಕ ಲಲಿತಕಲಾ ಅಕಾಡೆಮಿ,
ಬೆಂಗಳೂರು-೧೯೯೫

೩೩. **ಜೆ. ಎಸ್. ಖಂಡೇರಾವ್ :** — ಕುಪ್ಪಣ್ಣ. ಕಂದಗಲ್
ಕರ್ನಾಟಕ ಲಲಿತಕಲಾ ಅಕಾಡೆಮಿ,
ಬೆಂಗಳೂರು-೧೯೯೯

೩೪. **ಡಿ. ವ್ಹಿ. ಹಾಲಭಾವಿ :** — ಎಸ್. ಕೆ. ಹೂಗಾರ
ಕರ್ನಾಟಕ ಲಲಿತಕಲಾ ಅಕಾಡೆಮಿ,
ಬೆಂಗಳೂರು-೧೯೯೫

೩೫. **ದೃಶ್ಯಕಲಾ :** — ರನ್ನ. ಮರಿಶಾಮಾಚಾರ್
ಲಕ್ಷ್ಮೀ ಮುದ್ರಣಾಲಯ, ಬೆಂಗಳೂರು-೨೦೦೧

೩೬. **ದೃಶ್ಯಕಲಾ ವಿಮರ್ಶೆ :** — (ಸಂ) ವಿ. ಜಿ. ಅಂದಾನಿ
ಕರ್ನಾಟಕ ಲಲಿತಕಲಾ ಅಕಾಡೆಮಿ,
ಬೆಂಗಳೂರು-೨೦೦೦

೩೭. **ಪ್ರಶಸ್ತಿ ಪಡೆದ ಕಲಾವಿದರು :** — (ಸಂ) ಪಿ.ಆರ್. ತಿಪ್ಪೇಸ್ವಾಮಿ
ಕರ್ನಾಟಕ ಲಲಿತಕಲಾ ಅಕಾಡೆಮಿ,
ಬೆಂಗಳೂರು-೧೯೯೨

೩೮. **ಭಾರತದ ದೃಶ್ಯಕಲಾವಿದರು :** — ರನ್ನ. ಮರಿಶಾಮಾಚಾರ್
ಕರ್ನಾಟಕ ಲಲಿತಕಲಾ ಅಕಾಡೆಮಿ,
ಬೆಂಗಳೂರು-೧೯೯೨

೩೯. **ಭಾರತೀಯ ಸಂಸ್ಕೃತಿ :** — ಎಸ್. ಶ್ರೀಕಂಠಶಾಸ್ತ್ರೀ
ಪ್ರಸಾರಾಂಗ ಮೈಸೂರು ವಿಶ್ವವಿದ್ಯಾಲಯ,
ಮೈಸೂರು-೧೯೭೫

೬೦. **ಸೃಜನಶೀಲ ಕಲಾವಿದರು :** ಗವೀಶ. ಹಿರೇಮಠ
ಜಗದ್ಗುರು ಗಂಗಾಧರ ಧರ್ಮಪ್ರಚಾರಕ ಮಂಡಳ
ಶ್ರೀ ಮುರುಸಾವಿರಮಠ ಹುಬ್ಬಳ್ಳಿ-೧೯೯೧

೬೧. **ಸೌಂದರ್ಯ ಮೀಮಾಂಸೆ :** ವಿ. ಕೃ. ಗೋಕಾಕ
ಪ್ರಸಾರಾಂಗ ಕರ್ನಾಟಕ ವಿಶ್ವವಿದ್ಯಾಲಯ,
ಧಾರವಾಡ-೧೯೯೩

೬೨. **ಸಾಹಿತ್ಯ ಮತ್ತು ಚಿತ್ರಕಲೆ :** ವೀ. ಸೀತಾರಾಮಯ್ಯ
ರಾಘವ ಪ್ರಕಾಶನ, ಬೆಂಗಳೂರು-೧೯೮೫

೬೩. **ಸೌಂದರ್ಯ ಸಮೀಕ್ಷೆ :** ಜಿ. ಎಸ್. ಶಿವರುದ್ರಪ್ಪ
ಸತ್ಯಶ್ರೀ ಪ್ರಿಂಟರ್ಸ್, ಬೆಂಗಳೂರು-೧೯೬೫

೬೪. **ಆರ್.ಎಂ. ಹಡಪದ ಜೀವನ ಹಾಗೂ ಕಲಾಕೃತಿಗಳ ಒಂದು ಅಧ್ಯಯನ :** ಡಾ. ಸಿದ್ದಲಿಂಗಯ್ಯಸ್ವಾಮಿ ಹಿರೇಮಠ
ಅಪ್ರಕಟಿತ ಪಿಹೆಚ್.ಡಿ ಮಹಾಪ್ರಬಂಧ

೬೫. **ಕರ್ನಾಟಕದ ಜನಪದ ಶಿಲ್ಪಕಲೆ ಒಂದು ಅಧ್ಯಯನ :** ಡಾ. ಶಿವಾನಂದ. ಬಂಟನೂರ
ಅಪ್ರಕಟಿತ ಪಿಹೆಚ್.ಡಿ ಮಹಾಪ್ರಬಂಧ-೨೦೦೨

೬೬. **ಎಂ. ಬಿ. ಪಾಟೀಲ, :** ಬಿ.ಎಸ್. ವೆಂಟಕಲಕ್ಷ್ಮೀ
ಲಲಿತಕಲಾ ಅಕಾಡೆಮಿ, ಬೆಂಗಳೂರು-೨೦೦೦

೬೭. **ವಿ. ಜಿ. ಅಂದಾನಿ, ಪ್ರ, ಕರ್ನಾಟಕ :** ಡಾ. ಶಿವಾನಂದ. ಬಂಟನೂರ
ಲಲಿತಕಲಾ ಅಕಾಡೆಮಿ, ಬೆಂಗಳೂರು-೨೦೦೪

೬೮. **ಚಿತ್ರಕಲಾ ಚಿಂತನ :** ಶಂಕರ. ಪಾಟೀಲ
ಪ್ರ.ಪ್ರಗತಿ ಪ್ರಕಾಶನ, ಧಾವಣಗೇರೆ-೧೯೯೫

೬೯. **ಚಿತ್ರಕಲೆಯಲ್ಲಿ ಬಣ್ಣದ ಬಳಕೆ :** ಕೆ. ವಿ. ಕಾಳೆ
ಕನ್ನಡ ವಿಶ್ವವಿದ್ಯಾಲಯ, ಹಂಪಿ-೨೦೦೦

೭೦. **ವರ್ಣಸಂಚಯ :** ಡಾ. ಎಸ್. ಸಿ. ಪಾಟೀಲ
ಪ್ರ. ವಿಜಯ ಲಲಿತಕಲಾ ಮಹಾವಿದ್ಯಾಲಯ,
ಇಲಕಲ್-೨೦೦೧

## ENGLISH BOOKS

**01. Art of India :** Frederic. Asher
Britannica Press Londan-2003

**02. Indian Contemparary Painting :** Neville. Tuli
Mapin Publishing Co, Ahamadabad-1997

**03. Call of the Real :** Madhurima Sinha
Mapin Publishing Co, Ahamadabad-2003

**04. Miche langelo :** Trewin copplestone
Sino Publishing house China - 2002

**05. The Art of India :** Nigel Cawthorne
Octopus Publishing Co, China-1997

**06. Velaziquez :** Jose Lopez Rey
Taschen wildensten Institute,
Germany-1978

07. **Art of Indian Asia :** Heinrich Zimmer
Motilal Banarasidas Publisheres,
Delhi-2001

08. **The Story of Art :** E. H. Gombrich
Newyark University-1950

09. **Leonardo davinci :** D. M. Field
The wellfleet press china-2002

10. **History and Techniques of the great Masters :** Linda Bolton
Tiger Books International Londan-1989

11. **Monet :** Trewin Compplestone
Tiger Books International Londan-1989

12. **Brucel :** Penelope Le Fanu Hughes
Tiger Books International Londan-1989

13. **Paul Gagguin :** Linda Bolton
Tiger Books International Londan-1985

14. **Goya :** Michael Howard
Tiger Books International Londan-1987

15. **Oil Printing portraits :** Ray Smith
Royal Academy Press,
Londan-1994

16. **Indian Art and Culture :** Stuart Cary welch
Mapin Publishing Co, Ahamadabad-1986

17. **Raja Ravivarma :** Parsrom Mangharam
Parsram Mangharam press, Bangalore-2007

18. **The Illustrated History of Art :** Judith Clark
Eagle Edition Ltd, Londan-2007

## ಪತ್ರಿಕಾ ಲೇಖನಗಳು

೦೧. **ಮೂರು ಕಲಾವಿದರ ಮೂವತ್ತು ಚಿತ್ರಗಳು :**
ಸಿ.ಪಿ.ಹೇಮಗಿರಿಮಠ, ಸಾಪ್ತಾಹಿಕ ಉದಯವಾಣಿ
೦೬, ಎಪ್ರೀಲ್, ೧೯೭೫

೦೨. **ಅಂದು ದನಗಾಹಿ–ಇಂದು ಪ್ರಶಸ್ತಿ ವಿಜೇತ :**
ಎನ್. ಮಂಜುನಾಥ ಭಟ್
ಸಂಯುಕ್ತ ಕರ್ನಾಟಕ, ೦೮, ಮೇ ೧೯೭೫

೦೩. **ಮೂವರು ತರುಣರ ಅಪೂರ್ವ ಸಾಹಸ :**
ಚಿತ್ರಗಳ ಬಹಿರಂಗ ಪ್ರದರ್ಶನ
ಜಿ.ಎಚ್.ರಾಘವೇಂದ್ರ, ಸಾಪ್ತಾಹಿಕ ಸ್ವಾರಸ್ಯ
೦೨, ಮಾರ್ಚ, ೧೯೭೫, ವಾಣಿ–ಪತ್ರಿಕೆ

೦೪. **ಎರಡು ಕುಂಚ–ಇಪ್ಪತ್ತು ಚಿತ್ರ :**
ದೊಡ್ಡ ರಂಗೇಗೌಡ, ಸುಧಾ ೧೧, ಮೇ, ೧೯೭೫

೦೫. **ಇಬ್ಬರು ಹವ್ಯಾಸಿ ಕಲಾವಿದರ ಕಲಾ ಪ್ರದರ್ಶನ :**
ದೊಡ್ಡರಂಗೇಗೌಡ, ಸಂಯುಕ್ತ ಕರ್ನಾಟಕ
೨೩, ಎಪ್ರೀಲ್ ೧೯೭೫

೦೬. **ಕುಂಚ-ಬಣ್ಣಗಳ ಬಳಕೆಯಿಲ್ಲದ ಹದಿನೈದು ಚಿತ್ರಗಳು :**
ನಮ್ಮ ಪ್ರತಿನಿಧಿಯಿಂದ, ಪ್ರಜಾಜ್ಯೋತಿ,
೨೩, ಜುಲೈ ೧೯೭೫

೦೭. **ರದ್ದಿಯಲ್ಲಿ ರೂಪತಳೆದ ಕಲೆ ಕೋಲಾಜ್ :**
ಲೋಕ-ದರ್ಶನ, ೨೮, ಜುಲೈ ೧೯೭೭

೦೮. **ಕಸದಿಂದ ರಸ ನಿರ್ಮಿಸಿದ ಕಲಾವಿದ ಪಾಟೀಲ :**
ನಮ್ಮ ಪ್ರತಿನಿಧಿಯಿಂದ, ೨೨, ಜುಲೈ ೧೯೭೭

೦೯. **ಕುಂಚ ಹಿಡಿದ ನೇಗಿಲ ಕೈ :**
ವಿಶಾಲ ಕರ್ನಾಟಕ, ನೇತಾಜಿ,
೨೪, ಜುಲೈ, ೧೯೭೭

೧೦. **ಚಿತ್ರಕಲೆಯಲ್ಲಿ ಮತ್ತೊಂದು ಸಾಹಸ :**
ಸಂಯುಕ್ತ ಕರ್ನಾಟಕ ೨೩, ಜುಲೈ ೧೯೭೭

೧೧. **ತ್ರಿವಿಕ್ರಮ ಸಾಧನೆಯ ಸುಬ್ಬಣ್ಣ :**
ಸಿ.ಪಿ ಹೇಮಗಿರಿಮಠ, ಸಂಯುಕ್ತ ಕರ್ನಾಟಕ,
೨೫, ಜೂನ್, ೧೯೭೭

೧೨. **ಪ್ರೌಢ ಕಲಾವಿದ ಪಾಟೀಲರು :**
ಪ್ರೊ: ಸಿ.ಪಿ. ಹೇಮಗಿರಿಮಠ,
ಉದಯವಾಣಿ, ೨೪, ಮಾರ್ಚ ೧೯೭೯

೧೩. **ಯಶಸ್ವಿ ಹಿನ್ನೋಟ ಮುಕ್ತಾಯ :**
ಚಿತ್ರದೀಪ, ೦೬, ಮೇ ೧೯೫೩

೧೪. **ಕುತೂಹಲ ಕಲಾಮೇಳ :**

ಎಚ್. ಕೆ. ರಾಜಶೇಖರ, ಕನ್ನಡ ಪ್ರಭ,
೧೧, ಡಿಸೆಂಬರ ೧೯೮೩

೧೫. **ನೀವು ಸಾಯುತ್ತೀರಿ, ನಾನು ಸಾಯುವುದೇ ಇಲ್ಲ :**

ಎಚ್. ಎನ್. ಸುರೇಶ, ಕನ್ನಡ ಪ್ರಭ,
೦೧, ಫೆಬ್ರುವರಿ ೧೯೮೭

೧೬. **ಕಾರ್ಯನಿರತ ಕಲಾವಿದ, ಎಂ. ಬಿ. ಪಾಟೀಲ :**

ಪ್ರಹ್ಲಾದ ಬೆಟಗೇರಿ, ಸಂಜೆವಾಣಿ, ೨೩, ಜೂನ್ ೧೯೮೫

೧೭. **ಮಿಂಚುಗೆರೆಯ ಮೋಡಿಗಾರ ಎಂ. ಬಿ. ಪಾಟೀಲ :**

ರಮೇಶ ಕಂಗೇರಿ, ತರಂಗ, ೦೮ ನವೆಂಬರ ೧೯೯೨

೧೮. **ಸಪ್ತರಂಗ ಕಲಾಮೇಳ ಅಪರೂಪದ ಪ್ರಯೋಗ :**

ಪದ್ಮರಾಜ ದಂಡಾವತಿ, ಪ್ರಜಾವಾಣಿ, ೨೧, ಎಪ್ರೀಲ್, ೧೯೯೬

೧೯. **ಉತ್ತರ ಮುಖಿ :**

ಸುಧಾ, ೦೮ ಮಾರ್ಚ ೧೯೯೮

೨೦. **ಕಲಾದಿಗಂತ, ಭಾವಿಕ ಭಾವಚಿತ್ರ ಕಲಾವಿದ :**

ಹೇಮಂತರಾಜ, ಹೊಸದಿಗಂತ, ಬೆಂಗಳೂರು
೦೪, ಸೆಪ್ಟಂಬರ ೧೯೯೪

೨೧. **ಗ್ರಾಮೀಣ ಮಹಿಳೆಯ ನಿರೀಕ್ಷೆ-ಪ್ರತೀಕ್ಷೆ :**

ಸೃಜನಶೀಲ ಕಲಾವಿದ
ಶ್ರೀ ಎಂ. ಬಿ. ಪಾಟೀಲರ ಕಲಾಕೃತಿಗಳು
ಹೇಮಂತರಾಜ, ಇಪ್ಪುದಿ, ಸೆಪ್ಟಂಬರ ೧೯೯೮

೨೨. **ಕಲಾಜಗತ್ತಿನಲ್ಲಿ ಖಂಡನೀಯ ಘಟನೆಗಳು :**
ಹೇಮಂತರಾಜ, ಇಷುಧಿ, ಜೂನ್ ೧೯೯೯

೨೩. **ಕಲಾ ಗ್ಯಾಲರಿಗಳ ಸಾಲಿಗೊಂದು ವಿಭಿನ್ನ ಮಿನಿ ಗ್ಯಾಲರಿ :**
ಎಲ್. ಶಿವಲಿಂಗಪ್ಪ, ಉದಯವಾಣಿ ದಿನಪತ್ರಿಕೆ
ಡಿಸೆಂಬರ ೧೫, ೨೦೦೧

೨೪. **ಪಾಟೀಲರಿಗೊಲಿದ ಆಚಾರ್ಯ ಪ್ರಶಸ್ತಿ :**
ಎಲ್. ಶಿವಲಿಂಗಪ್ಪ, ಉದಯವಾಣಿ,
೨೪, ಸಪ್ಟಂಬರ ೨೦೦೨

೨೫. **ಕುಂಚದಲ್ಲಿ ಅರಳಿದ ಭಾವಪೂರ್ಣ ಚಿತ್ರಕಾರ :**
ಹೇಮಂತರಾಜ, ಸಂಯುಕ್ತ ಕರ್ನಾಟಕ,
೦೫, ಅಕ್ಟೋಬರ ೨೦೦೨

೨೬. **ಕುಂಚ ಪ್ರಪಂಚದ ಚೇತನ :**
ಕಟ್ಟೆ ಗುರುರಾಜ್, ಪ್ರಜಾವಾಣಿ
೧೫, ಫೆಬ್ರುವರಿ ೨೦೦೪

೨೭. **ಕುಂಚದಲ್ಲಿ ಕಲೆಯ ದಿವ್ಯದರ್ಶನ :**
ವಿಜಯ ಕರ್ನಾಟಕ, ೧೨ ಫೆಬ್ರುವರಿ ೨೦೦೭

೨೮. **ಇಂಥವರೂ ಇದ್ದಾರೆ :**
ಬಸವರಾಜ, ಅಗ್ನಿ ೨೨ ಫೆಬ್ರುವರಿ ೨೦೦೭

೨೯. **ಎಂ. ಬಿ. ಪಾಟೀಲರ ಗ್ರಾಮ್ಯ ಚೆಲುವೆ :**
ಡಿ. ಎಸ್. ಚೌಗಲೆ

೩೦. ಎಂ. ಬಿ. ಪಾಟೀಲರಿಗೆ ಕ.ಸಾ.ಪ. ಗೌರವ :
ಆರಕ್ಕೇರಬಾರದು, ಮೂರಕ್ಕಿಳಿಯಬಾರದು
ಡಿ. ಯಶೋಧಾ, ಕನ್ನಡ ಪ್ರಭ.

## ಇಂಗ್ಲೀಷ ಲೇಖನಗಳು

01. **New style in Paintings :**
The Hindu, Friday June 27, 1975

02. **Art camp away from the city :**
The Hindu, Friday October 16, 1981

03. **Poster workshop celebrates colour and form :**
Deccan Hearald, Sunday, 01, May, 1983

04. **Art has come of age in Bangalore :**
Indian Express, July 02, 1983

05. **Art An Intuitive Perception marks :**
M. B. Patil's recent paintings on show at Lakshana Art Gallary

06. **Giridhar Khasnis,**
The Hindu 27, February 2007.

## ಕಲಾಕೃತಿಗಳ ನೆಲೆಗಳು

| | | |
|---|---|---|
| ಚಿತ್ರಕಲಾ ಪರಿಷತ್ | : | ಬೆಂಗಳೂರು |
| ಕೆನ್ ಕಲಾಶಾಲೆ | : | ಬೆಂಗಳೂರು |
| ಕಲಾಮಂದಿರ ಕಲಾಶಾಲೆ | : | ಬೆಂಗಳೂರು |
| ಹಾಲಭಾವಿ ಕಲಾಶಾಲೆ | : | ಧಾರವಾಡ |
| ಸರಕಾರಿ ಚಿತ್ರಕಲಾ ಮಹಾವಿದ್ಯಾಲಯ | : | ಧಾರವಾಡ |
| ಭಾರತೀಯ ಕಲಾಕೇಂದ್ರ | : | ಧಾರವಾಡ |
| ವಿಜಯಮಹಾಂತೇಶ ಲಲಿತಕಲಾ ಮಹಾವಿದ್ಯಾಲಯ | : | ಹುಬ್ಬಳ್ಳಿ |
| ದೃಶ್ಯಕಲಾ ವಿಭಾಗ ಕನ್ನಡ ವಿಶ್ವವಿದ್ಯಾಲಯ | : | ಹಂಪಿ–ವಿದ್ಯಾರಣ್ಯ |
| ಶಿಲ್ಪ ಮತ್ತು ವರ್ಣ ಚಿತ್ರಕಲಾ ವಿಭಾಗ | : | ಬನಶಂಕರಿ–ಬಾದಾಮಿ |
| ಯೋಗೇಶ ಚಿತ್ರಕಲಾ ಮಹಾವಿದ್ಯಾಲಯ | : | ಬೀದರ |
| ಎಸ್. ಎಂ. ಪಂಡಿತ ಚಿತ್ರಕಲಾ ಮಹಾವಿದ್ಯಾಲಯ | : | ಬೀದರ |
| ಐಡಿಯಲ್ ಫೈನ್ ಆರ್ಟ ಕಲಾಶಾಲೆ | : | ಗುಲಬರ್ಗಾ |
| ಶರಣ ಬಸವೇಶ್ವರ ಕಲಾ ಮಹಾವಿದ್ಯಾಲಯ | : | ಗುಲಬರ್ಗಾ |
| ಆರ್ಟ ಇಂಟಿಗ್ರೇಷನ್ ಕಲಾ ಶಾಲೆ | : | ಗುಲಬರ್ಗಾ |
| ವಿಜಯ ಕಲಾ ಮಹಾವಿದ್ಯಾಲಯ | : | ಗದಗ |
| ಜಗದ್ಗುರು ನೀಲಕಂಠೇಶ್ವರ ಮಹಾವಿದ್ಯಾಲಯ, | : | ಗದಗ |
| ಸರಕಾರಿ ಚಿತ್ರಕಲಾ ಮಹಾವಿದ್ಯಾಲಯ | : | ದಾವಣಗೇರಿ |
| ಬೆನೆನಸ್ಮಿತ್ ಕಲಾ ಮಹಾವಿದ್ಯಾಲಯ | : | ಬೆಳಗಾಂವ |
| ಸಿದ್ದೇಶ್ವರ ಕಲಾ ಮಹಾವಿದ್ಯಾಲಯ | : | ವಿಜಾಪೂರ |
| ರವೀಂದ್ರ ಕಲಾ ನಿಕೇತನ | : | ತುಮಕೂರು |

| | |
|---|---|
| ಮಹಾಲಸಾ ಮಹಾವಿದ್ಯಾಲಯ | : ಮಂಗಳೂರು |
| ರಾಯಬಾಗ ಕಲಾ ಶಾಲೆ | : ರಾಯಭಾಗ |
| ಬಿ. ಎಸ್. ದೇಸಾಯಿಯವರ ಮನೆ | : ಹಾಸನ |
| ರಮೇಶ. ಚವ್ಹಾಣರ ಮನೆ | : ಬಿಜಾಪೂರ |
| ಎಂ. ಬಿ. ಪಾಟೀಲರ ಮನೆ | : ಬೆಂಗಳೂರು |
| ಎಂ. ಬಿ. ಪಾಟೀಲರ ಸ್ಟೂಡಿಯೋ | : ಬೆಂಗಳೂರು |
| ಎಂ. ಬಿ. ಪಾಟೀಲರ ಮನೆ | : ದಂದರ್ಗಿ |
| ಎಂ. ಬಿ. ಪಾಟೀಲರ ಮನೆ | : ತಿಕೋಟಾ |
| ಬಿ. ಕೆ. ಬಡಿಗೇರರ ಮನೆ | : ಬೀದರ |
| ಲೋಹಿತಾಶ್ವರ ಮನೆ | : ಬೆಂಗಳೂರು |
| ನ್ಯಾಷನಲ್ ಗ್ಯಾಲರಿ ಆಫ್ ಮಾಡರ್ನ ಆರ್ಟ | : ನವದೆಹಲಿ |
| ರಾಜ್ಯ ಲಲಿತಕಲಾ ಅಕಾಡಮಿ | : ಬೆಂಗಳೂರು |
| ಕೇಂದ್ರ ಲಲಿತಕಲಾ ಅಕಾಡಮಿ | : ನವದೆಹಲಿ |
| ಆರ್ಟ ಸೊಸೈಟಿ | : ಮುಂಬೈ |
| ಕರ್ನಾಟಕ ವಿಶ್ವವಿದ್ಯಾಲಯ | : ಧಾರವಾಡ |
| ವೆಂಕಟಪ್ಪ ಆರ್ಟ ಗ್ಯಾಲರಿ | : ಬೆಂಗಳೂರು |
| ಮ್ಯಾಕ್ಸ್ ಮುಲ್ಲರ ಭವನ | : ಬೆಂಗಳೂರು |
| ಇಮೇಜಸ್ ಗ್ಯಾಲರಿ | : ಬೆಂಗಳೂರು |
| ರೀಜನಲ್ ಆರ್ಟ ಸೆಂಟರ್ | : ಚೆನ್ನೈ |
| ಹಿಂದೂಸ್ಥಾನ ಲಿ ಕಂಪನಿ | : ಬೆಂಗಳೂರು |

## ಕಲಾ ಶಿಬಿರ, ಪ್ರದರ್ಶನ, ಪ್ರಶಸ್ತಿ, ಗೌರವಗಳು

**ಕಲಾ ಶಿಬಿರಗಳು :**

ಡ್ರಾಯಿಂಗ್ ಕ್ಯಾಂಪ್ ಕಲಬುರ್ಗಿ ಬಂಧಮುಕ್ತ (ಬಾಂಗ್ಲಾ ಕವಿಗಳ ಗೋಷ್ಠಿ) ಹುಬ್ಬಳ್ಳಿ ವಿಶ್ವ ಕನ್ನಡ ಸಮ್ಮೇಳನ ಮೈಸೂರು, ದಕ್ಷಿಣ ವಲಯ ಶಿಬಿರ ಮದರಾಸು ೧೯೮೭ ರಲ್ಲಿ ಪಾಲ್ಗೊಂಡಿದ್ದಾರೆ. ವ್ಯಕ್ತಿ ಚಿತ್ರ ಕ್ಯಾಂಪ್ ಯುವಜನ ಕೇಂದ್ರ ಬೆಂಗಳೂರು ಆರ್ಟಿಸ್ಟ ಕ್ಯಾಂಪ್ ತುಮಕೂರು, ಎಗ್ ಪ್ರೊಸೆಸ್ ಪೇಂಟಿಂಗ್ ಕ್ಯಾಂಪ್, ಅಲೈಯನ್ಸ್ ಫ್ರಾಂಚೈಸ್ ಬೆಂಗಳೂರು, ಮ್ಯೂರಲ್ ಆರ್ಟಿಸ್ಟ, ಕೇರಳ ೧೯೯೧ ರಲ್ಲಿ ಪಾಲ್ಗೊಂಡಿದ್ದಾರೆ. ೧೯೯೨ ರಲ್ಲಿ ಪಾಂಡಿಚೇರಿ ಆರ್ಟಿಸ್ಟ ಕ್ಯಾಂಪ ಪಾಂಡಿಚೇರಿ. ೧೯೯೩ ರಲ್ಲಿ ರಾಜ್ಯ ಲಲಿತ ಕಲಾ ಅಕಾಡಮಿ ಮಡಿಕೇರಿ, ೧೯೯೫ ರಲ್ಲಿ ಕ್ಯಾಂಪ್ ಡೈರೆಕ್ಟರ ಆರ್ಟ ಕ್ಯಾಂಪ್, ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ೧೯೯೬ ಕ್ಯಾಂಪ್ ಡೈರೆಕ್ಟರ್, ಆರ್ಟ ಕ್ಯಾಂಪ್ ಲಲಿತ ಕಲಾ ಅಕಾಡಮಿ, ಹಂಪಿ ೧೯೯೬ ರಲ್ಲಿ ಸೊನೆನ್‌ಗೇರಿ ಮಂಗಳೂರು, ೧೯೯೬ ರಲ್ಲಿ ಕಲಾಮೇಳ ಸಪ್ತರಂಗ ಬೆಳಗಾಂವಿ, ೧೯೯೭ ರಲ್ಲಿ ಭಾರತೀಯ ವಿದ್ಯಾಭವನ ಬೆಂಗಳೂರಿನಲ್ಲಿ ನಡೆದ ಶಿಬಿರದಲ್ಲಿ ಪಾಲ್ಗೊಂಡಿದ್ದಾರೆ. ೧೯೯೯ ರಲ್ಲಿ ದಕ್ಷಿಣ ವಲಯ ಕೇಂದ್ರ ನಾಗಪುರದಿಂದ ಮಂಗಳೂರು ಮತ್ತು ಮಡಿಕೇರಿ, ೨೦೦೦ ದಲ್ಲಿ ನಿಸರ್ಗ ಏಳ್ಗೆಯ ಶಿಬಿರದಲ್ಲಿ ಪಾಲ್ಗೊಂಡಿದ್ದಾರೆ. ಹೀಗೆ ಇನ್ನೂ ಹೆಚ್ಚು ಅನೇಕ ಶಿಬಿರಗಳಲ್ಲಿ ಪಾಲ್ಗೊಂಡಿದ್ದಾರೆ.

ನ್ಯಾಷನಲ್ ಗ್ಯಾಲರಿ ಆಫ್ ಮಾಡರ್ನ ಆರ್ಟ ನವದೆಹಲಿಯಲ್ಲಿ ಏರ್ಪಡಿಸಿದ ಶಿಬಿರದಲ್ಲಿ ಪಾಲ್ಗೊಂಡಿದ್ದಾರೆ. ಡೆಕೋ ಪ್ರದರ್ಶನ ದಾವಣಗೇರಿಯಲ್ಲಿ ಪಾಲ್ಗೊಂಡಿದ್ದಾರೆ. ಕೇಂದ್ರ ಹಾಗೂ ರಾಜ್ಯ ಲಲಿತಕಲಾ ಅಕಾಡಮಿ ವತಿಯಿಂದ ನಡೆದ ಶಿಬಿರದಲ್ಲಿ ಪಾಲ್ಗೊಂಡಿದ್ದಾರೆ. ಆರ್ಟ ಸೊಸೈಟಿ ಮುಂಬೈಯಲ್ಲಿ ೧೯೭೪ ರಲ್ಲಿ ಪಾಲ್ಗೊಂಡಿದ್ದಾರೆ. ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡದಲ್ಲಿ ಪಾಲ್ಗೊಂಡಿದ್ದಾರೆ.

**ಕಲಾ ಪ್ರದರ್ಶನಗಳು :**

೧೯೭೫ ರಲ್ಲಿ ಬಯಲು ಚಿತ್ರಕಲಾ ಪ್ರದರ್ಶನ ಹುಬ್ಬಳ್ಳಿಯಲ್ಲಿ ನಡೆಯಿತು. ೧೯೭೫ ರಲ್ಲಿ ಮ್ಯಾಕ್ಸ್ ಮುಲ್ಲರ್ ಭವನ, ಬೆಂಗಳೂರಿನಲ್ಲಿ ನಡೆಯಿತು. ೧೯೭೫ ಅಲ್ಫೋನ್ಸ್ ಫ್ರಾಂಕೈಸ್ ಬೆಂಗಳೂರಿನಲ್ಲಿ ನಡೆಯಿತು. ೧೯೭೮ ರಲ್ಲಿ ಕರ್ನಾಟಕ ವೈದ್ಯಕೀಯ ಕಾಲೇಜು ಹುಬ್ಬಳ್ಳಿಯಲ್ಲಿ ನಡೆಯಿತು. ೧೯೮೦ ಕಲಾ ಪ್ರಗತಿ ಬಳಗ ಕಲಬುರ್ಗಿಯಲ್ಲಿ ನಡೆಯಿತು. ೧೯೮೪ ರಲ್ಲಿ ಸಮುಚ್ಚಯ ಬೆಂಗಳೂರಿನಲ್ಲಿ ನಡೆಯಿತು. ೧೯೮೫ ರಲ್ಲಿ ವ್ಹಿಸೆವಿನ್ ಬೆಂಗಳೂರಲ್ಲಿ ನಡೆಯಿತು. ೧೯೮೯ ರಲ್ಲಿ ಕಲಾ ಅಭಿವೃದ್ಧಿ ಬಳಗದಲ್ಲಿ ನಡೆಯಿತು.

ವೆಂಕಟಪ್ಪ ಆರ್ಟ ಗ್ಯಾಲರಿ ಬೆಂಗಳೂರಿನಲ್ಲಿ ೧೯೯೨ ರಲ್ಲಿ ನಡೆಯಿತು. ೧೯೯೬-೯೭ ರಲ್ಲಿ ಇಮೇಜ್ ಆರ್ಟ ಗ್ಯಾಲರಿಯಲ್ಲಿ ನಡೆಯಿತು. ೨೦೦೦ ರಲ್ಲಿ ಚಿತ್ರಕಲಾ ಪರಿಷತನಲ್ಲಿ ಮತ್ತು ಯುನಿವರ್ಸಲ್ ಆರ್ಟ ಗ್ಯಾಲರಿ ಬೆಂಗಳೂರಿನಲ್ಲಿ, ೨೦೦೧ ರಲ್ಲಿ ಹಾಗೂ ಚಿತ್ರಕಲಾ ಪರಿಷತ್ ಬೆಂಗಳೂರಿನಲ್ಲಿ ನಡೆಯಿತು. ಹೀಗೆ ಇನ್ನೂ ಹೆಚ್ಚು ಅನೇಕ ಸಾಮೂಹಿಕ ಕಲಾ ಪ್ರದರ್ಶನಗಳನ್ನು ಪಾಟೀಲರು ಮಾಡಿದ್ದಾರೆ.

**ಏಕವ್ಯಕ್ತಿ ಚಿತ್ರಕಲಾ ಪ್ರದರ್ಶನಗಳು :**

ಗಾಂಧಿ ಶತಮಾನೋತ್ಸವ ವರ್ಷದ ಪ್ರದರ್ಶನ ಹುಬ್ಬಳ್ಳಿಯಲ್ಲಿ ಮಾಡಿದರು. ೧೯೭೪ ರಲ್ಲಿ ಸ್ಕೂಲ್ ಆಫ್ ಆರ್ಟ್ ಧಾರವಾಡದಲ್ಲಿ ಪ್ರದರ್ಶನ ಮತ್ತು ಹುಬ್ಬಳ್ಳಿ ೧೯೭೪ ರಲ್ಲಿ ಭಾರತದ ಸ್ವತಂತ್ರ ಸಂಗ್ರಾಮದ ಕುರಿತು ಕೃತಿಗಳನ್ನು ಪ್ರದರ್ಶಿಸಲಾಯಿತು. ೧೯೭೭ ರಲ್ಲಿ ಕಲಬುರ್ಗಿ ಪ್ರಾಚ್ಯ ಸಂಶೋಧನಾ ಇಲಾಖೆಯಲ್ಲಿ ಪ್ರದರ್ಶನ ನಡೆಯಿತು. ೧೯೭೭ ರಲ್ಲಿ ಪ್ರಾಚ್ಯ ಸಂಶೋಧನಾ ಇಲಾಖೆ ಕಿತ್ತೂರಿನಲ್ಲಿ ನಡೆಯಿತು. ೧೯೭೯ ರಲ್ಲಿ ಹೈದ್ರಾಬಾದ್ ಬಾಲಭವನ ಪ್ರದರ್ಶನ ನಡೆಯಿತು. ೧೯೯೨ ರಲ್ಲಿ ಕೃತಿಕಾ ಆರ್ಟ್ ಗ್ಯಾಲರಿ ಬೆಂಗಳೂರಿನಲ್ಲಿ ಏಕವ್ಯಕ್ತಿ ಕಲಾ ಪ್ರದರ್ಶನ ನಡೆಯಿತು. ೧೯೯೮ ರಲ್ಲಿ ಇಮೇಜ್ ಆರ್ಟ್ ಗ್ಯಾಲರಿ ಬೆಂಗಳೂರಿನಲ್ಲಿ ನಡೆಯಿತು. ಹೀಗೆ ಎಂಟು ಏಕವ್ಯಕ್ತಿ ಕಲಾ ಪ್ರದರ್ಶನಗಳನ್ನು ನಡೆಸಿದ್ದಾರೆ.

**ಪ್ರಶಸ್ತಿಗಳು :**

ಕರ್ನಾಟಕ ರಾಜ್ಯ ಲಲಿತ ಕಲಾ ಅಕಾಡಮಿ ಬೆಂಗಳೂರು ೧೯೮೬-೮೭ ರಲ್ಲಿ ಇವರಿಗೆ ರಾಜ್ಯ ಪ್ರಶಸ್ತಿ ಕೊಟ್ಟು ಗೌರವಿಸಿತು. ರಾಜ್ಯ ಲಲಿತ ಕಲಾ ಅಕಾಡಮಿ ಸಾಹಿತ್ಯ ಸಮ್ಮೇಳನ ೨೦೦೦ ರಲ್ಲಿ ಪ್ರಶಸ್ತಿಯನ್ನು ಕೊಟ್ಟು ಗೌರವಿಸಿದೆ. ಇವರ ಸಾಧನವನ್ನು ಕಂಡುಕೊಂಡು ಅದರ ಫಲವಾಗಿ ೨೦೦೨ ರಲ್ಲಿ ಎಂ.ಟಿ.ವ್ಹಿ ಆಚಾರ್ಯ ಪ್ರಶಸ್ತಿಯನ್ನು ನೀಡಿ ಗೌರವಿಸಿದೆ. ೨೦೦೨ ರಲ್ಲಿ ವಿಶ್ವೇಶ್ವರಯ್ಯ ಪ್ರತಿಷ್ಠಾನ ಪ್ರಶಸ್ತಿಯನ್ನು ಕೊಟ್ಟು ಗೌರವಿಸಿತು. ೨೦೦೩ ರಲ್ಲಿ ಕರ್ನಾಟಕ ರಾಜ್ಯೋತ್ಸವ ಪ್ರಶಸ್ತಿ ಲಭಿಸಿದೆ. ೨೦೦೪ ರಲ್ಲಿ ಕರ್ನಾಟಕ ರಾಜ್ಯ ಪ್ರಶಸ್ತಿಯನ್ನು ನೀಡಿ ಗೌರವಿಸಿತು. ೨೦೦೮ನೆ ಸಾಲಿನಲ್ಲಿ ಇವರಿಗೆ ಕರ್ನಾಟಕ ಸರ್ಕಾರ ವೆಂಕಟಪ್ಪ ಪ್ರಶಸ್ತಿಯನ್ನು ನೀಡಿ ಗೌರವಿಸಿತು.

**ಪ್ರಾತ್ಯಕ್ಷಿತೆ, ಉಪನ್ಯಾಸಗಳು :**

ಸ್ಕೂಲ್ ಆಫ್ ಆರ್ಟ್ ಧಾರವಾಡದಲ್ಲಿ ಪ್ರಾತ್ಯಕ್ಷಿಕೆ ಉಪನ್ಯಾಸವನ್ನು ಮಾಡಿದ್ದಾರೆ. ಸ್ಕೂಲ್ ಆಫ್ ಯುತ್ ಪೋರಂ ಮತ್ತು ಆಕಾಶವಾಣಿ ಕಲಬುರ್ಗಿಯಲ್ಲಿ

ಪ್ರಾತ್ಯಕ್ಷಿಕೆ ಉಪನ್ಯಾಸವನ್ನು ನೀಡಿದ್ದಾರೆ. ಪ್ರಾಚ್ಯ ವಸ್ತು ಸಂಗ್ರಹಾಲಯ ಕಿತ್ತೂರು, ಕೆನ್ ಸ್ಕೂಲ್ ಆಫ್ ಆರ್ಟ್ ಬೆಂಗಳೂರು ರೈನ್ ಬೋ ಆರ್ಟ್ ಕೌನ್ಸಿಲ್ ಧಾರವಾಡ, ಸ್ಕೂಲ್ ಆಫ್ ಆರ್ಟ್ ದಾವಣಗೇರಿ, ಚಾಲುಕ್ಯ ಕನ್ನಡ ಸಂಘ ಕೆ.ಜಿ.ಎಫ್ ಚಿತ್ರಕಲಾ ಪರಿಷತ್ ಬೆಂಗಳೂರು, ಕಲಾಯಾತ್ರೆ, ಶಿವಮೊಗ್ಗ ಮತ್ತು ಭದ್ರಾವತಿ, ರಾಮನಗರ ಬೆಂಗಳೂರು ಜಿಲ್ಲೆ, ಕಲಾವೃತ್ತ ಹಾಸನ, ರವೀಂದ್ರ ಕಲಾನಿಕೇತನ ತುಮಕೂರು, ಬೆನೆನ್ ಸ್ಮಿತ್ ಫೈನ್ ಆರ್ಟ ಬೆಳಗಾಂವದಲ್ಲಿ ಪ್ರಾತ್ಯಕ್ಷಿಕೆ ಹಾಗೂ ಉಪನ್ಯಾಸವನ್ನು ನೀಡಿದ್ದಾರೆ. ಹೀಗೆ ಕರ್ನಾಟಕದ ಅನೇಕ ಕಡೆಗಳಲ್ಲಿ ಪ್ರಾತ್ಯಕ್ಷಿತೆ, ಉಪನ್ಯಾಸವನ್ನು ನೀಡಿದ್ದಾರೆ.

* * * * *

ರಾಜ್ಯದ ವಿವಿಧ ಸಂಘ ಸಂಸ್ಥೆಗಳಿಂದ ಎಂ.ಬಿ.ಪಾಟೀಲರಿಗೆ ಸನ್ಮಾನಿಸಿದ ಛಾಯಾಚಿತ್ರಗಳು





ರಾಜ್ಯದ ವಿವಿಧ ಸಂಘ ಸಂಸ್ಥೆಗಳಿಂದ ಎಂ.ಬಿ.ಪಾಟೀಲರಿಗೆ ಸನ್ಮಾನಿಸಿದ ಛಾಯಾಚಿತ್ರಗಳು





ಕರ್ನಾಟಕ ಲಲಿತಕಲಾ ಅಕಾಡೆಮಿ ಗೌರವ ಪ್ರಶಸ್ತಿ



ಕರ್ನಾಟಕ ಲಲಿತಕಲಾ ಅಕಾಡೆಮಿ ವಾರ್ಷಿಕ ಪ್ರಶಸ್ತಿ



ಚಿತ್ರಕಲಾ ಕ್ಷೇತ್ರದ ಅತ್ಯುನ್ನತ ಪ್ರಶಸ್ತಿಯಾದ, ವರ್ಣಶಿಲ್ಪಿ ವೆಂಕಟಪ್ಪ ಪ್ರಶಸ್ತಿ



ಕನ್ನಡ ರಾಜ್ಯೋತ್ಸವ ಪ್ರಶಸ್ತಿ



ರಾಜ್ಯದ ವಿವಿಧ ಕಡೆಗಳಲ್ಲಿ ಪ್ರಾತ್ಯಕ್ಷಿಕೆಯನ್ನು ನೀಡುತ್ತಿರುವ ಕಲಾವಿದ ಎಂ.ಬಿ.ಪಾಟೀಲರು





ರಾಜ್ಯದ ವಿವಿಧ ಕಡೆಗಳಲ್ಲಿ ಪ್ರಾತ್ಯಕ್ಷಿಕೆಯನ್ನು ನೀಡುತ್ತಿರುವ ಕಲಾವಿದ ಎಂ.ಬಿ.ಪಾಟೀಲರು





ರಾಜ್ಯದ ವಿವಿಧ ಕಡೆಗಳಲ್ಲಿ ಪ್ರಾತ್ಯಕ್ಷಿಕೆಯನ್ನು ನೀಡುತ್ತಿರುವ ಕಲಾವಿದ ಎಂ.ಬಿ.ಪಾಟೀಲರು





ರಾಜ್ಯದ ವಿವಿಧ ಕಡೆಗಳಲ್ಲಿ ಪ್ರಾತ್ಯಕ್ಷಿಕೆಯನ್ನು ನೀಡುತ್ತಿರುವ ಕಲಾವಿದ ಎಂ.ಬಿ.ಪಾಟೀಲರು





ರಾಜ್ಯದ ವಿವಿಧ ಕಡೆಗಳಲ್ಲಿ ಪ್ರಾತ್ಯಕ್ಷಿಕೆಯನ್ನು ನೀಡುತ್ತಿರುವ ಕಲಾವಿದ ಎಂ.ಬಿ.ಪಾಟೀಲರು





ರಾಜ್ಯದ ವಿವಿಧ ಕಡೆಗಳಲ್ಲಿ ಪ್ರಾತ್ಯಕ್ಷಿಕೆಯನ್ನು ನೀಡುತ್ತಿರುವ ಕಲಾವಿದ ಎಂ.ಬಿ.ಪಾಟೀಲರು





ಮಾಜಿ ರಾಷ್ಟ್ರಪತಿಗಳೊಂದಿಗೆ ಕಲಾವಿದ ಎಂ.ಬಿ.ಪಾಟೀಲರು



ಶಿವರಾಂ ಕಾರಂತ ಮತ್ತು ಜಿ.ಎಸ್.ದಂಡಾವತಿ ಮಠ ಅವರೊಂದಿಗೆ
ಕಲಾವಿದ ಎಂ.ಬಿ.ಪಾಟೀಲರು



ಗಣ್ಯ ವ್ಯಕ್ತಿಗಳೊಂದಿಗೆ ಕಲಾವಿದ ಎಂ.ಬಿ.ಪಾಟೀಲರು





ಆಗಿನ ನೂತನ ಕಲಾಮಂದಿರದ ಒಳನೋಟ



ಜಿ.ಎಸ್.ದಂಡಾವತಿ ಮಠ ಅವರೊಂದಿಗೆ ಎಂ.ಬಿ.ಪಾಟೀಲರು



ಆಗಿನ ನೂತನ ಕಲಾಮಂದಿರದ ಒಳನೋಟ





ಮಾರ್ಗದರ್ಶಕರಾದ ವಿ.ಬಿ.ಹಿರೇಗೌಡರ ಅವರೊಂದಿಗೆ ಸಂಶೋಧಕರಾದ ಎಸ್.ಎಸ್.ಗಡ್ಡಿಯವರು



ಕಲಾವಿದರಾದ ಎಂ.ಬಿ.ಪಾಟೀಲ ಅವರೊಂದಿಗೆ ಸಂದರ್ಶನದಲ್ಲಿ ತೊಡಗಿರುವ ಸಂಶೋಧಕರು



ವಾರ್ತಾ ಮತ್ತು ಪ್ರಚಾರ ಇಲಾಖೆಯ ನಿರ್ದೇಶಕರೊಂದಿಗೆ ಸಂಶೋಧಕರು



ಕಲಾವಿದ ಎಂ.ಬಿ.ಪಾಟೀಲರ ಆಪ್ತ ಸ್ನೇಹಿತರಾದ ಜಿ.ಕೆ.ಪಾಟೀಲರೊಂದಿಗೆ ಸಂಶೋಧಕರು



